

ಕವಿ, ಕಥೆಗಾರ, ಸಂಶೋಧಕರೆನಿಸಿಕೊಳ್ಳುವ ಡಾ.ಸಿದ್ಧಲಿಂಗಪ್ಪ ಕೊಟ್ನೈಕಲ್ ಇವರು ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ಹಿರೇಕೊಟ್ನೈಕಲ್ ಗ್ರಾಮದವರು. ಪ್ರತಿಭಾವಂತರಾದ ಇವರು, ತಮ್ಮ ನಿರಂತರ ಅಧ್ಯಯನಶೀಲತೆಯಿಂದ ಕೊಪ್ಪಳದಲ್ಲಿ ಕಳೆದ ಎರಡು ದಶಕಗಳಿಂದ ಕನ್ನಡ ಉಪನ್ಯಾಸಕರಾಗಿ ಹಲವಾರು ವಿದ್ಯಾರ್ಥಿಗಳ ಮೆಚ್ಚಿನ ಗುರುಗಳೆನಿಸಿದ್ದಾರೆ. ಕನ್ನಡ ಸಾಹಿತ್ಯಲೋಕಕ್ಕೆ ಮಹತ್ವದ ಕೃತಿಗಳನ್ನು ನೀಡಿರುವ ಇವರು, "ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ" ಎನ್ನುವ ಮೌಲಿಕ ಸಂಶೋಧನಾ ಕೃತಿಯು ದ್ವಿತೀಯ ಮುದ್ರಣ ಕಂಡಿರುವುದು ತುಂಬಾ ಹೆಮ್ಮೆಯ ಸಂಗತಿ. ಇವರ ಒಂದು ಕವಿತೆ ಬಳ್ಳಾರಿಯ ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯದ ಪದವಿ ವಿಭಾಗದಲ್ಲಿ ಪಠ್ಯವಾಗಿರುವುದು ಇವರ ಮತ್ತೊಂದು ಹೆಗ್ಗಳಿಕೆಯಾಗಿದೆ.

ಇವರು ನಿರಂತರವಾಗಿ ಏನನ್ನಾದರೂ ಒಂದು ಹುಡುಕಾಟದಲ್ಲಿ ಇಲ್ಲವೇ ಬರವಣಿಗೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುತ್ತಾರೆ. ಅದರ ಪ್ರಯತ್ನವೇ "ಕೊಪ್ಪಳ ಚರಿತ್ರೆ ಮತ್ತು ಸಂಸ್ಕೃತಿಯ ಹುಡುಕಾಟ" ಎನ್ನುವ ಸಂಶೋಧನಾ ಕೃತಿಯಾಗಿದೆ. ಈ ಕೃತಿಯು ಚರಿತ್ರೆ, ಶಾಸನ, ಭಾಷೆ, ಹೋರಾಟ ಎನ್ನುವ ನಾಲ್ಕು ಭಾಗಗಳಲ್ಲಿ ಒಟ್ಟು 19 ಲೇಖನಗಳನ್ನು ಒಳಗೊಂಡಿದೆ. ಕೊಪ್ಪಳ ಜಿಲ್ಲೆಯ ಸಮಗ್ರ ಇತಿಹಾಸವನ್ನು ಕಟ್ಟಿಕೊಡುವ ಇಲ್ಲಿನ ಸಂಶೋಧನಾ ಲೇಖನಗಳು ತುಂಬಾ ಸರಳವಾಗಿ ಓದಿಸಿಕೊಂಡು ಹೋಗುತ್ತವೆ.

ಚರಿತ್ರೆ ಎನ್ನುವ ಮೊದಲ ಭಾಗದಲ್ಲಿ ಒಂಬತ್ತು ಲೇಖನಗಳಿವೆ. ಅಂಜನಾದ್ರಿ ಹನುಮನ ಜನ್ಮಸ್ಥಳದ ಬಗ್ಗೆ ನೆರೆರಾಜ್ಯದವರಿಂದ ಎದ್ದಿರುವ ವಿವಾದಕ್ಕೆ ತೆರೆ ಎಳೆಯಲು ಈಗಾಗಲೇ ಅನೇಕ ದಾಖಲೆಗಳೊಂದಿಗೆ ಸಂಶೋಧಕರು ಸಮರ್ಥಿಸಿದ್ದಾರೆ. ಅದರಲ್ಲಿ ಡಾ. ಸಿದ್ಧಲಿಂಗಪ್ಪ ಕೊಟ್ನೈಕಲ್ ಇವರೂ ಕೂಡ ಒಬ್ಬರಾಗಿದ್ದರು. ಇದರಲ್ಲಿರುವ "ಕೊಪ್ಪಳದ ಕಿಷ್ಕಿಂದೆ ಅಂಜನಾದ್ರಿ ಪರ್ವತ ಪ್ರದೇಶವೇ ಹನುಮನ ಜನ್ಮಸ್ಥಳ; ಒಂದು ಸಮರ್ಥನೆ" ಲೇಖನವು ಹೆಚ್ಚು ಗಮನ ಸೆಳೆಯುತ್ತದೆ.

ಶಾಸನ ಎನ್ನುವ ಎರಡನೇ ಭಾಗದಲ್ಲಿ ಆರು ಲೇಖನಗಳಿದ್ದು, ಅವು ಕೊಪ್ಪಳ ಜಿಲ್ಲೆಯ ಎಲ್ಲಾ ಶಾಸನಗಳ, ಶಾಸನ ಕವಿಗಳ ಹಾಗೂ ಆ ಶಾಸನಗಳಲ್ಲಿನ ಸಾಹಿತ್ಯಿಕ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತವೆ. ಭಾಷೆ ಮತ್ತು ಹೋರಾಟ ಎನ್ನುವ ಕೊನೆಯ ಎರಡು ಭಾಗಗಳಲ್ಲಿ ಒಟ್ಟು ನಾಲ್ಕು ಲೇಖನಗಳಿದ್ದು ಇಲ್ಲಿಯ ಪರಿಸರದ ಭಾಷೆ, ವಿಮೋಚನಾ ಹೋರಾಟ, 371ನೇ ವಿಧಿಯ ಜಾರಿ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಪ್ರಾಮುಖ್ಯತೆಯನ್ನು ಕಟ್ಟಿಕೊಡುತ್ತವೆ.

ಇಂತಹ ಮಹತ್ವದ ಕೃತಿಯನ್ನು ಪ್ರಕಟಿಸುತ್ತಿರುವ ಲೇಖಕರ ಶ್ರಮ, ಅಧ್ಯಯನದ ಪ್ರಾವೀಣ್ಯತೆ ಅನೇಕರಿಗೆ ಮಾದರಿಯಾಗಬಲ್ಲದು. ಸಂಶೋಧನೆ ಹಾಗೂ ಸೃಜನಶೀಲತೆ ಇವೆರಡನ್ನೂ ಮೈಗೂಡಿಸಿಕೊಂಡಿರುವ ಡಾ. ಸಿದ್ಧಲಿಂಗಪ್ಪ ಕೊಟ್ನೈಕಲ್‌ರವರಿಂದ ಮತ್ತಷ್ಟು ಕೃತಿಗಳು ಹೊರಬರಲೆಂದು ಆಶಿಸುತ್ತಾ ಶುಭಾಷಯಗಳನ್ನು ಕೋರುತ್ತೇನೆ.

**ಡಾ. ಬಸವರಾಜ ಪೂಜಾರ**
ಸಿಂಡಿಕೇಟ್ ಸದಸ್ಯರು
ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ

ISBN 978-93-5913-223-5




ಕೊಪ್ಪಳ ಚರಿತ್ರೆ ಮತ್ತು ಸಂಸ್ಕೃತಿಯ ಹುಡುಕಾಟ
ಡಾ. ಸಿದ್ಧಲಿಂಗಪ್ಪ ಕೊಟ್ನೈಕಲ್

# ಕೊಪ್ಪಳ ಚರಿತ್ರೆ ಮತ್ತು ಸಂಸ್ಕೃತಿಯ ಹುಡುಕಾಟ

**ಡಾ. ಸಿದ್ಧಲಿಂಗಪ್ಪ ಕೊಟ್ನೈಕಲ್**
ಎಂ.ಎ., ಎಂ.ಫಿಲ್, ಪಿಎಚ್.ಡಿ.

# ಕೊಪ್ಪಳ ಚರಿತ್ರೆ ಮತ್ತು ಸಂಸ್ಕೃತಿಯ ಹುಡುಕಾಟ

(ಸಂಶೋಧನಾ ಕೃತಿ)

ಡಾ. ಸಿದ್ಧಲಿಂಗಪ್ಪ ಕೊಟ್ನೆಕಲ್

ಎಂ.ಎ., ಎಂ.ಫಿಲ್., ಪಿಎಚ್.ಡಿ.

2023

ಮೇಘನಾ ಪ್ರಕಾಶನ,

'ಕನಸು' ನಿಲಯ ಬಿ. ಟಿ. ಪಾಟೀಲ್ ನಗರ, ಕೊಪ್ಪಳ



# Koppal Charitre & Sanskrutiya Hudukata


| | | |
|---|---|---|
| Author | : | **Dr. Siddalingappa Kotnekal** M.A.,M.Phil., Ph.D.<br>S. G. PU College, Koppal-583 231.<br>Mo: 9448570340 Mail:skotnekal@gmail.com |
| Publisher | : | **Mrs. Manjula S. Kotnekal**<br>Meghana Prakashana<br>'Kanasu ' Nilaya B.T. Patl Nagar, Koppal |
| Edition | : | 2023 |
| © | : | Author |
| Copies | : | 1000 |
| Pages | : | XXIII+133=156 |
| Price | : | 250/- |
| Size | : | Demmy 1/8 |
| Paper Used | : | 70 GSM NS Maplitho Paper |

**ಕೊಪ್ಪಳ ಚರಿತ್ರೆ ಮತ್ತು ಸಂಸ್ಕೃತಿಯ ಹುಡುಕಾಟ** (ಸಂಶೋಧನಾ ಕೃತಿ)

| | | |
|---|---|---|
| ಲೇಖಕರು | : | ಡಾ. ಸಿದ್ಧಲಿಂಗಪ್ಪ ಕೊಟ್ನೆಕಲ್ ಎಂ.ಎ., ಎಂ.ಫಿಲ್., ಪಿಎಚ್.ಡಿ.<br>ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು, ಶ್ರೀ ಗವಿಸಿದ್ಧೇಶ್ವರ<br>ಪದವಿ ಪೂರ್ವ ಮಹಾವಿದ್ಯಾಲಯ, ಕೊಪ್ಪಳ. |
| ಪ್ರಕಾಶಕರು | : | ಶ್ರೀಮತಿ ಮಂಜುಳಾ ಎಸ್. ಕೊಟ್ನೆಕಲ್<br>ಮೇಘನಾ ಪ್ರಕಾಶನ,<br>'ಕನಸು' ನಿಲಯ ಬಿ. ಟಿ. ಪಾಟೀಲ್ ನಗರ, ಕೊಪ್ಪಳ |
| ಮುದ್ರಣ | : | ೨೦೨೩ |
| ಹಕ್ಕುಗಳು | : | ಲೇಖಕರದು |
| ಪ್ರತಿಗಳು | : | ೧೦೦೦ |
| ಪುಟಗಳು | : | XXIII+133=156 |
| ಬೆಲೆ | : | ೨೫೦/- |
| ಪುಸ್ತಕದ ಆಕಾರ | : | ಡೆಮ್ಮಿ ೧/೮ |
| ಬಳಸಿದ ಕಾಗದ | : | ಎನ್. ಎಸ್. ಮ್ಯಾಪಲೀಥೋ ೭೦ ಜಿ.ಎಸ್.ಎಮ್. |
| ಮುದ್ರಣ | : | ಐಶ್ವರ್ಯ ಪ್ರಿಂಟಿಂಗ್ ಪ್ರೆಸ್<br>ಡಾ. ಅಂಬೇಡ್ಕರ್ ಸರ್ಕಲ್, ಕೊಪ್ಪಳ<br>ಮೊ. ೮೧೪೭೩೪೮೮೪೪೦, ೯೪೪೮೩೦೦೦೭೦ |

## ಸಮರ್ಪಣೆ



**ಲಿಂ. ಶ್ರೀ ಮ.ನಿ.ಪ್ರ.ಜ.**
**ಶ್ರೀ ಶಿವಶಾಂತವೀರ ಮಹಾಸ್ವಾಮಿಗಳು**
**ಸಂಸ್ಥಾನ ಶ್ರೀಗವಿಮಠ, ಕೊಪ್ಪಳ**



**ಅರ್ಪಣೆ :**



## ಪ್ರೊ. ಅಲ್ಲಮಪ್ರಭು ಬೆಟ್ಟದೂರು ಮತ್ತು
## ಶ್ರೀಮತಿ ಮಂಜುಳಾ ಅಲ್ಲಮಪ್ರಭು ಬೆಟ್ಟದೂರು

**ಸಾ॥ ಕೊಪ್ಪಳ**



## ಮುನ್ನುಡಿ.....

**ಕೊ**ಪ್ಪಳದ ಶ್ರೀ ಗವಿಸಿದ್ದೇಶ್ವರ ಪದವಿ ಪೂರ್ವ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿರುವ ಡಾ. ಸಿದ್ಧಲಿಂಗಪ್ಪ ಕೊಟ್ನೆಕಲ್‌ರವರು ಕನ್ನಡ ಸಂಸ್ಕೃತಿಯ ಅಧ್ಯಯನದ ಜೊತೆಗೆ ಚರಿತ್ರೆಯ ಹುಡುಕಾಟದ ಬಗೆಗೂ ಆಸಕ್ತರಾಗಿದ್ದು, ಆ ನಿಟ್ಟಿನಲ್ಲಿ ಚರಿತ್ರೆ ಮತ್ತು ಸಂಸ್ಕೃತಿಯ ಕುರಿತಾಗಿ ನಿರಂತರ ಲೇಖನ, ಪುಸ್ತಕಗಳ ರಚನೆಯಲ್ಲಿ ತೊಡಗಿದ್ದಾರೆ. ಚರಿತ್ರೆಯ ಬಹುಮುಖ್ಯ ಆಕರವೆನಿಸುವ ಶಾಸನಗಳ ಕುರಿತ ಅವರ ಪಿಎಚ್.ಡಿ ಅಧ್ಯಯನ ಅವರನ್ನು ಚರಿತ್ರೆಯ ಸಂಶೋಧನೆಡೆಗೆ ಎಳೆದಿರುವುದು ಸಹಜವಾಗಿದೆ. ಪ್ರಸ್ತುತ ಚರಿತ್ರೆ ರಚನೆಯು ಕೇವಲ ಆಕರಮುಖಿ ಘಟನಾಪ್ರಧಾನ ವಿವರಣೆಯ ಹಂತದಿಂದ ಸಾಂಸ್ಕೃತಿಕ ವಿಶ್ಲೇಷಣೆಯ ಹಂತಕ್ಕೆ ಪರಿವರ್ತಿತವಾಗುತ್ತಿದೆ. ಇಂತಹ ಸಂದರ್ಭದಲ್ಲಿ ಚರಿತ್ರೆ ಹೊರತು ಅನ್ಯಜ್ಞಾನ ಶಿಕ್ಷಣಗಳ ವಿದ್ವಾಂಸರು ಚರಿತ್ರೆ ರಚನಾ ಪ್ರತಿಕ್ರಿಯೆಗೆ ಅಡಿ ಇಡುತ್ತಿರುವುದು ಸ್ವಾಗತಾರ್ಹ ಸಂಗತಿ. ಆದರೆ ಇಂತಹ ಸಂದರ್ಭದಲ್ಲಿ ಚರಿತ್ರೆಯ ರಚನೆಯ ಮೂಲತತ್ವಗಳನ್ನು ಸ್ಪಷ್ಟವಾಗಿ ಅರಿತುಕೊಂಡು ಅದಕ್ಕೆ ಸಂಸ್ಕೃತಿಯ ಕಸಿಯನ್ನು ಮಾಡಬೇಕಾದ ಅಗತ್ಯತೆ ಇದೆ. ಅಂದಾಗ ಮಾತ್ರ ವಾಸ್ತವಿಕವಾಗಿ ಚರಿತ್ರೆ ಮತ್ತು ಸಂಸ್ಕೃತಿ ಮುಖಾಮುಖಿಯಾಗಿ ಹೊರಹೊಮ್ಮಲು ಸಾಧ್ಯ.

ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್‌ರವರು ಸಂಸ್ಕೃತಿಯ ಜೊತೆಗೆ ಚರಿತ್ರೆಯ ಬಗೆಗೂ ಗಂಭೀರವಾಗಿ ಆಲೋಚಿಸುತ್ತಿದ್ದಾರೆ ಎಂಬುದಕ್ಕೆ ಸಾಕ್ಷಿಯಾಗಿ ಅವರ ಪ್ರಸ್ತುತ ಕೃತಿ **'ಕೊಪ್ಪಳ ಚರಿತ್ರೆ ಮತ್ತು ಸಂಸ್ಕೃತಿಯ ಹುಡುಕಾಟ'** ಎನ್ನುವ ಕೃತಿ ಪ್ರಕಟಗೊಳ್ಳುತ್ತಿದೆ. ಇಲ್ಲಿ ಒಟ್ಟು ಹತ್ತೊಂಬತ್ತು ಸಂಶೋಧನಾ ಲೇಖನಗಳಿದ್ದು ಅವು ಚರಿತ್ರೆ ಮತ್ತು ಸಂಸ್ಕೃತಿಯ ವಿವಿಧ ಆಯಾಮಗಳ ಮೇಲೆ ವಿಶ್ಲೇಷಣೆಗೊಂಡಿವೆ. ಚರಿತ್ರೆ, ಶಾಸನ, ಭಾಷೆ ಹಾಗೂ ಹೋರಾಟ ಹೀಗೆ ನಾಲ್ಕು ವಿವಿಧ ಶೀರ್ಷಿಕೆಗಳ ಅಡಿಯಲ್ಲಿ ಹಂಚಿಕೆಯಾಗಿರುವ ಈ ಶೋಧಗಳು ಆಯಾ ಶೀರ್ಷಿಕೆಗೆ ಸಂಬಂಧಿಸಿದಂತೆ ಕೊಪ್ಪಳ ಜಿಲ್ಲೆಯ ಚರಿತ್ರೆ ಮತ್ತು ಸಂಸ್ಕೃತಿಯನ್ನು ಪರಿಚಯಿಸುತ್ತವೆ. ಇಂತಹ ಅಂಶಗಳ ಅಡಿಯಲ್ಲಿ ಕೃತಿಗಳ ರಚನೆ ಅಪರೂಪವೆಂದರೂ ನಡೆಯುತ್ತದೆ.

ಚರಿತ್ರೆಯಡಿಯಲ್ಲಿ ಒಂಬತ್ತು ಲೇಖನಗಳಿದ್ದು ಕೊಪ್ಪಳದ ಸ್ಥಳನಾಮ, ಇಂದ್ರಕೀಲ ಪರ್ವತ, ಜೈನಧರ್ಮ, ಕೋಟೆಯ ವಿವರಣೆ, ಹಿರೇಬೆಣಕಲ್ಲಿನ ಸಮಾಧಿಗಳು, ಅಂಜನಾದ್ರಿ ಹನುಮನ ಜನ್ಮಸ್ಥಳದ ಶೋಧ, ಗಿಣಿಗೇರಿ ಕೆರೆ, ಓಜಿನಹಳ್ಳ, ಯಲಬುರ್ಗಿಯ ಸಿಂದು

ಅರಸರು ಮುಂತಾದವುಗಳಾಗಿವೆ. ಮೊದಲ ಲೇಖನವು ಕೊಪ್ಪಳದ ಸ್ಥಳನಾಮವನ್ನು ಕುರಿತಾಗಿ ಸಾದಂತವಾಗಿ ವಿವರಿಸಿದೆ. ನಮ್ಮ ನಾಡಿನ ಪ್ರಾಚೀನ ಇತಿಹಾಸವುಳ್ಳ ಸ್ಥಳಗಳಲ್ಲಿ ಕೊಪ್ಪಳವೂ ಒಂದು. ಈ ಕೊಪ್ಪಳವು ನವಶಿಲಾ ತಾಮ್ರಯುಗದ ಕಾಲದಿಂದಲೂ ಮಾನವನ ವಾಸ್ತವದ ನೆಲೆಯಾಗಿದ್ದು, ಚಾರಿತ್ರಿಕ ಕಾಲದಲ್ಲಿ ಅಶೋಕನ ಗಮನವನ್ನು ಸೆಳೆದ, ಹಾಗಾಗಿ ಅವನಿಗೆ ಶಾಸನಗಳನ್ನು ಒಳಗೊಂಡ ಹೆಗ್ಗಳಿಕೆ, ಜೈನ ಕೇಂದ್ರವಾಗಿ, ತಿರುಳ್ಗನ್ನಡ ನಾಡಾಗಿ, ಸಾಲಾರ್‌ಜಂಗನಿಗೆ ಜಾಹಗೀರ್ ಆಗಿ, ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿಯ ಕ್ರಾಂತಿಯ ಕೇಂದ್ರವಾಗಿ, ಮರಾಠರು, ಹೈದರಾಲಿ, ಟಿಪ್ಪು ಸುಲ್ತಾನನ ಆಸಕ್ತಿಯ ಕೋಟೆಯಾಗಿ ತನ್ನದೇ ಆದ ವಿಶಿಷ್ಟ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಹಿರಿಮೆಯನ್ನು ಹೊಂದಿದೆ. ಇಂತಹ ಕೊಪ್ಪಳ ಸ್ಥಳನಾಮ ಉತ್ಪತ್ತಿ ಕುರಿತ ಜಿಜ್ಞಾಸೆ ಸಹಜವಾಗಿದ್ದು. ಆ ಬಗೆಗೆ ನಾಡಿನ ಹಿರಿಯ ವಿದ್ವಾಂಸರಾದ ಡಾ.ಷ.ಶೆಟ್ಟರ್, ನಾ.ಭಾ.ಶಾಸ್ತ್ರಿಗಳು, ಡಾ.ಬಿ.ರಾಜಶೇಖರಪ್ಪನವರ ಚರ್ಚೆಗಳನ್ನು ನಡೆಸಿ, ಈ ಎಲ್ಲಾ ಮಹನೀಯರ ಚರ್ಚೆಗಳನ್ನೂ ಆಧರಿಸಿಕೊಂಡು ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್‌ರವರು ಅವುಗಳ ವಿಶ್ಲೇಷಿಸುವ ಮೂಲಕ ಒಂದು ಸ್ಪಷ್ಟ ಅಭಿಪ್ರಾಯಕ್ಕೆ ಬರಲು ಪ್ರಯತ್ನಿಸಿದ್ದಾರೆ.

ಕೊಪ್ಪಳದ ಹಿರಿಯ ಇತಿಹಾಸಕಾರರಾಗಿದ್ದ ಶ್ರೀ ಬಿ.ಸಿ.ಪಾಟೀಲರ ತಪ್ಪಲದಿಂದ ಕೊಪ್ಪಳ ಎಂಬ ಸ್ಥಳನಾಮ ನಿಷ್ಪತ್ತಿ ಒಪ್ಪದೇ ಡಾ.ಬಿ.ರಾಜಶೇಖರಪ್ಪನವರು ಉಲ್ಲೇಖಿಸಿದ ಚಂದ್ರವಳ್ಳಿ ಶಾಸನದಲ್ಲಿ ಬರುವ 'ಕುಪಣದ ಚಮ' ಎನ್ನುವವನು ಕೊಪ್ಪಳದವನು, 'ಕುಪಣ' ಎಂದರೆ ಕೊಪ್ಪಳ ಎಂಬ ಅಭಿಪ್ರಾಯವನ್ನು ಅನುಮೋದಿಸುತ್ತಾರೆ. ಷ.ಶಟ್ಟರ್‌ರವರು ಕೂಡ ಇದನ್ನೇ ಪ್ರತಿಪಾದಿಸುತ್ತಾರೆ. ಹಾಗಾಗಿ ಕುಪಣದಿಂದ ಕೊಪ್ಪಳ ಸ್ಥಳನಾಮ ರೂಢಿಯಾದ ಸಂಗತಿ ಎನಿಸುತ್ತದೆ. ಡಾ.ಸಿದ್ಧಲಿಂಗಪ್ಪನವರು ಸ್ಥಳನಾಮದ ಜೊತೆಗೆ ಕೊಪ್ಪಳ ಸ್ಥಳ ವಿಶೇಷಣಗಳಾದ ಕೊಪಣಾಚಲ, ವಿಧಿತ ಮಹಾ ಕೋಪಣಾನಗರ, ಆದಿತೀರ್ಥ, ಮಹಾತೀರ್ಥಗಳ ಬಗೆಗೂ ಮಾಹಿತಿಯನ್ನು ಕ್ರೋಢೀಕರಿಸಿರುವುದು ಉಪಯುಕ್ತವಾಗಿದೆ. ಹುಯೆನ್–ತ್ಸಾಂಗ್‌ನು ಉಲ್ಲೇಖಿಸಿದ 'ಕೊಂಕಿನಪುಲೊ' ಹಾಗೂ ಕ್ರಿ.ಶ. 1054ರಲ್ಲಿ ನಡೆದ ಚಾಲುಕ್ಯ ಮತ್ತು ಚೋಳರ ಮಧ್ಯ ನಡೆದ ಯುದ್ಧದ ಸ್ಥಳ 'ಕೊಪ್ಪಂ' ಇದೇ 'ಕೊಪ್ಪಳ' ಎಂಬ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಆ ಬಗೆಗೆ ಇನ್ನಷ್ಟು ಖಚಿತತೆ ಬೇಕೆಂಬ ನಿರೀಕ್ಷೆಯನ್ನು ಇರಿಸಿಕೊಂಡಿದ್ದಾರೆ. ಕೊಪ್ಪಳದ ಪರ್ಯಾಯ ನಾಮಗಳಾದ ಮುಜಫರ್‌ನಗರ, ಸುಲ್ತಾನ್‌ಗಡ ಎಂಬ ಹೆಸರುಗಳ ಬಗೆಗೂ ಇವರು

ವಿವರಿಸಿದ್ದು ಕುತೂಹಲ ಮೂಡಿಸುತ್ತದೆ. ಒಟ್ಟಿನಲ್ಲಿ ಈ ಲೇಖನ ಕೊಪ್ಪಳದ ಸ್ಥಳನಾಮ, ಸ್ಥಳವಿಶೇಷ ಹಾಗೂ ಪರ್ಯಾಯ ನಾಮಗಳ ಸಮಗ್ರ ಮಾಹಿತಿಯನ್ನು ನೀಡುವಲ್ಲಿ ಯಶಸ್ವಿಯಾಗಿದೆ. ಈ ರೀತಿಯಲ್ಲಿ ಕೊಪ್ಪಳ ಸ್ಥಳನಾಮದ ಕುರಿತು ನಡೆದ ಚರ್ಚೆ ಇದೇ ಮೊದಲು ಎನಿಸುತ್ತದೆ.

ಎರಡನೆಯ ಲೇಖನ ಕೊಪ್ಪಳ ಇಂದ್ರಕೀಲ ಪರ್ವತದ ಮಳೆಮಲ್ಲೇಶ್ವರ ಮತ್ತು ಪರಿಸರದ ಇತಿಹಾಸವಿದೆ. ಕೊಪ್ಪಳದ ಪಶ್ಚಿಮಕ್ಕೆ ಇರುವ ಒಂದು ಬೆಟ್ಟವೇ ಮಳೆಮಲ್ಲೇಶ್ವರ ಬೆಟ್ಟ. ಆ ಬೆಟ್ಟದಲ್ಲಿರುವ ದೇವಾಲಯದಿಂದಾಗಿ ಈ ಹೆಸರು ಬಂದಿದೆ. ಇದಕ್ಕೆ ಇಂದ್ರಕೀಲ ಪರ್ವತ ಎಂತಲೂ ಕರೆಯುತ್ತಾರೆ. ಮಹಾಭಾರತದಲ್ಲಿ ಇಂದ್ರಕೀಲ ಪರ್ವತದ ಪ್ರಸಂಗವಿದೆ. ಅದುವೇ ಕಿರಾತಾರ್ಜುನೀಯ ಪ್ರಸಂಗ. ಆ ಘಟನೆ ಇದೇ ಬೆಟ್ಟದಲ್ಲಿ ನಡೆದಿದೆ ಎಂಬ ಸ್ಥಳೀಯರ ಐತಿಹ್ಯವಿದೆ. ಈ ಬೆಟ್ಟ ಪರಿಸರ ಬೃಹತ್ ಶಿಲಾಯುಗದ ಕಾಲದಿಂದಲೂ ಸಾಂಸ್ಕೃತಿಕ ನೆಲೆಯಾಗಿದ್ದು, ಅದರ ವಿವಿಧ ಆಯಾಮಗಳಾದ ಶಿಲಾಸಮಾಧಿಗಳ ಅವಶೇಷಗಳು, ಗವಿಚಿತ್ರಗಳು, ಅಶೋಕನ ಶಿಲಾಶಾಸನ, ದೇವಾಲಯ, ಮೂರ್ತಿ-ಶಿಲ್ಪಿಗಳು ಹೀಗೆ ಈ ಎಲ್ಲಾ ಸಂಗತಿಗಳನ್ನು ಪರಿಚಯಿಸಿದ್ದಾರೆ. ಇದರಿಂದಾಗಿ ಬೆಟ್ಟದ ಬಗೆಗಿನ ಪ್ರಾಥಮಿಕ ಪರಿಜ್ಞಾನ ಉಂಟಾಗುತ್ತದೆ. ಇಂತಹ ಜ್ಞಾನಗಳ ಅಧ್ಯಯನದ ಅವಶ್ಯಕತೆಯಿದೆ.

ಮೂರನೆಯ ಲೇಖನ ಜೈನ ಕಾಶಿಯಾಗಿ ಕೊಪ್ಪಳವು, ಕೊಪ್ಪಳದ ಚರಿತ್ರೆ ಹೇಗೆ ಪ್ರಾಚೀನ ಕಾಲದಲ್ಲಿ ಜೈನ ಧರ್ಮದ ಕೇಂದ್ರವಾಗಿ, ಪವಿತ್ರ ಕ್ಷೇತ್ರವಾಗಿ, ಆದಿತೀರ್ಥ ಮತ್ತು ಮಹಾತೀರ್ಥವೆಂದು ಹೆಸರಾಗಿತ್ತು ಎನ್ನುವುದನ್ನು ಬಿಂಬಿಸುತ್ತದೆ. ಇಲ್ಲಿ ಅನೇಕ ಜೈನ ಬಸದಿಗಳು ಇದ್ದವು. ಜೈನ ಧರ್ಮಿಯರಿಗೆ ಸಲ್ಲೇಖನವ್ರತ ಆಚರಿಸಲು, ಮಡಿಪಲು ಇದು ಪುಣ್ಯ ಭೂಮಿಯಾಗಿ ಜೈನಕಾಶಿ ಆಗಿತ್ತು. ಶ್ರವಣಬೆಳಗೊಳ ಮುನ್ನೆಲೆಗೆ ಬರುವವರೆಗೂ ಈ ಕೊಪ್ಪಳವೇ ದಕ್ಷಿಣ ಭಾರತದ ಅತ್ಯಂತ ಪ್ರಮುಖ ಜೈನ ಕೇಂದ್ರವಾಗಿದ್ದಿರಬಹುದು ಎನ್ನುವ ಅನುಮಾನವನ್ನು ಲೇಖಕರು ಇಲ್ಲಿ ಸಕಾರಣವಾಗಿ ವ್ಯಕ್ತಪಡಿಸಿದ್ದಾರೆ. ಕೊಪ್ಪಳ ನಗರದಲ್ಲಿ ದೊರೆತಿರುವ 120ಕ್ಕೂ ಅಧಿಕ ಶಾಸನಗಳಲ್ಲಿ ಅದರಲ್ಲಿ ನೂರಕ್ಕೂ ಅಧಿಕ ಶಾಸನಗಳು ಜೈನ ಧರ್ಮಕ್ಕೆ ಸಂಬಂಧಿಸಿದವುಗಳಾಗಿರುವುದನ್ನು ಎತ್ತಿ ತೋರಿಸಿರುವುದರಿಂದ ಮೇಲಿನ ಅಭಿಪ್ರಾಯಗಳಿಗೆ ಪುಷ್ಟಿ ದೊರೆತಂತೆ ಆಗುತ್ತದೆ.

ಕೊಪ್ಪಳದ ಬಲಿಷ್ಠ ಕೋಟೆಯ ಚರಿತ್ರೆ ಲೇಖನವು ಕೊಪ್ಪಳದ ಬೆಟ್ಟದ ಮೇಲೆ ಇರುವ ಕೋಟೆಯ ಕಥೆಯನ್ನು ಉಲ್ಲೇಖಿಸುತ್ತದೆ. ಕೋಟೆ ನಿರ್ಮಾಣದ ಕಾರ್ಯ

ಯಾವ ಕಾಲದಲ್ಲಿ ಪ್ರಾರಂಭವಾಯಿತು ಎನ್ನುವುದರ ಬಗ್ಗೆ ಮಾಹಿತಿಗಳು ಲಭ್ಯವಿಲ್ಲದಿದ್ದರೂ ಟಿಪ್ಪುಸುಲ್ತಾನ ಮತ್ತು ಹೈದರಾಲಿಗಳ ಕಾಲದಲ್ಲಿ ಕೋಟೆಯಲ್ಲಿ ಕೆಲವು ಕಟ್ಟಡಗಳ ಭಾಗಗಳನ್ನು ನಿರ್ಮಿಸಿದ ಬಗ್ಗೆ ಕೆಲವು ಫರ್ಷಿಯನ್ ಶಾಸನಗಳು ಮಾಹಿತಿಯನ್ನು ನೀಡುತ್ತವೆ. ಶಿವಾಜಿ, ಟಿಪ್ಪುಸುಲ್ತಾನ್, ಹೈದರಾಬಾದ ನಿಜಾಮರ ಹಾಗೂ ಬ್ರಿಟಿಷರ ಅಧೀನಕ್ಕೊಳಗಾಗಿದ್ದ ಈ ಕೋಟೆ, ಆ ಮೂಲಕ ತನ್ನ ಸುಭದ್ರತೆ  ಮತ್ತು ಬಲಿಷ್ಠತೆಯನ್ನು ಬಿಂಬಿಸುತ್ತದೆ.

1857ರಲ್ಲಿ ನಡೆದ ಪ್ರಥಮ ಸ್ವಾತಂತ್ರ ಸಂಗ್ರಾಮದ ಸಮಯದಲ್ಲಿ ಕೊಪ್ಪಳ ಕೋಟೆಯನ್ನೇ ಆಶ್ರಯಿಸಿ ಮುಂಡರಗಿ ಭೀಮರಾಯ ಹಾಗೂ ಹಮ್ಮಿಗೆ ಕೆಂಚನಗೌಡರು ನಡೆಸಿದ ಹೋರಾಟ ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ವಿರೋಚಿತ ಸ್ಮರಣೀಯ ಘಟನೆಯಾಗಿದೆ. ಹೀಗೆ ಕೊಪ್ಪಳ ಕೋಟೆಯ ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ನಿರ್ವಹಿಸಿದ ಪಾತ್ರವನ್ನು ಲೇಖಕರು ಇಲ್ಲಿ ಮೆಲುಕು ಹಾಕಿಕೊಂಡಿದ್ದಾರೆ.

ಗಂಗಾವತಿ ತಾಲೂಕಿನ ಅಂಜನಾದ್ರಿ ಬೆಟ್ಟವೇ ಆಂಜನೇಯನ ಜನ್ಮಸ್ಥಳ ಎನ್ನುವ ನಂಬಿಕೆ ಸಾವಿರಾರು ವರ್ಷಗಳಿಂದ ಪ್ರಚಲಿತದಲ್ಲಿದೆ. ಆದರೆ ಈಚೆಗೆ ಆಂಧ್ರದ ತಿರುಪತಿ ತಿರುಮಲ ದೇವಸ್ಥಾನದ ಟ್ರಸ್ಟಿನವರು ತಮ್ಮ ತಿರುಮಲ ಬೆಟ್ಟವೇ ಅಂಜನಾದ್ರಿ, ಅದುವೇ ಆಂಜನೇಯನ ಜನ್ಮಸ್ಥಳವೆಂದು ವಾದ-ವಿವಾದವನ್ನು ಹುಟ್ಟುಹಾಕಿದರು. ಆಗ ಅವರ ವಾದಕ್ಕೆ ಪ್ರತಿವಾದಿಯಾಗಿ ಕರ್ನಾಟಕದ ನಾನೂ ಸಹಿತ ಕೆಲ ವಿದ್ವಾಂಸರು ಸಂಶೋಧನಾ ಲೇಖನ ಮತ್ತು ಪುಸ್ತಕಗಳ ಮೂಲಕ ಕರ್ನಾಟಕದ ಅಂಜನಾದ್ರಿ ಬೆಟ್ಟವೇ ಆಂಜನೇಯನ ನಿಜವಾದ ಜನ್ಮಸ್ಥಳ ಎಂಬುದನ್ನು ಪ್ರತಿಪಾದಿಸಿದೆವು. ಅದರಲ್ಲಿ ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್ ಅವರೂ ಕೂಡ ಒಬ್ಬರು. ಡಾ.ಕೊಟ್ನೆಕಲ್ ಅವರು ಈ ಸಂಕಲನದಲ್ಲಿ ಸೇರಿರುವ ಕೊಪ್ಪಳದ ಕಿಷ್ಕಿಂದೆ ಅಂಜನಾದ್ರಿ ಪರ್ವತ ಪ್ರದೇಶವೇ ಹನುಮನ ಜನ್ಮಸ್ಥಳ; ಒಂದು ಸಮರ್ಥನೆ ಎಂಬ ಲೇಖನವನ್ನು ಬರೆದು ಅದನ್ನು ಕಿರು ಪುಸ್ತಕ ರೂಪದಲ್ಲಿ ಹೊರ ತಂದರು. ಪ್ರಸ್ತುತ ಲೇಖನದಲ್ಲಿ ಡಾ.ಕೊಟ್ನೆಕಲ್‌ರವರು ಕೊಪ್ಪಳ ಜಿಲ್ಲೆಯ ಆನೆಗುಂದಿ ಪ್ರದೇಶದ ಕಿಷ್ಕಿಂದೆಯ ಅಂಜನಾದ್ರಿ ಬೆಟ್ಟವೇ ಹನುಮಂತನ ಜನ್ಮಸ್ಥಳ ಎಂಬ ಸಂಗತಿಯನ್ನು ಲಭ್ಯ ಮಾಹಿತಿಯನ್ನು ಆಧರಿಸಿ ವಿಷದಪಡಿಸಿದ್ದಾರೆ. ಸ್ಥಳಪುರಾಣ, ಪೌರಾಣಿಕ ಹಿನ್ನೆಲೆ, ಶಾಸನಗಳ ಉಲ್ಲೇಖ, ರಾಮಾಯಣದ ವರ್ಣನೆ ಇಂತಹ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಒಂದು ಉತ್ತಮ ಮಾಹಿತಿಯನ್ನು ಕ್ರೋಢೀಕರಿಸಿದ್ದಾರೆ. ಇದರಿಂದಾಗಿ ಆನೆಗುಂದಿಯ ಅಂಜನಾದ್ರಿ ಬೆಟ್ಟವೇ ಹನುಮನ ಜನ್ಮಸ್ಥಳ ಎಂಬ ಸಂಗತಿ ಸ್ಪಷ್ಟವಾಗಲು ಸಹಾಯಕವಾಯಿತು. ನಂತರ ರಾಜ್ಯ ಸರಕಾರ ಅಂಜನಾದ್ರಿ ಅಭಿವೃದ್ಧಿಗೆ 2022-23ನೇ ಸಾಲಿನ ಬಜೆಟಿನಲ್ಲಿ

ಒಂದು ನೂರು ಕೋಟಿ ರೂಪಾಯಿಗಳನ್ನು ಅದರ ಅಭಿವೃದ್ಧಿಗಾಗಿ ಮೀಸಲಿಟ್ಟಿರುವುದು ನನಗೆ ಮತ್ತು ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್‌ರವರಿಗೆ ಖುಷಿಕೊಟ್ಟಿರುವ ಸಂಗತಿಯಾಗಿದೆ.

ನಂತರದ ಹಿರೇಹಳ್ಳವೋ? ಓಜಿನಹಳ್ಳವೋ ಕುಶನದಿಯೋ? ಎಂಬ ಲೇಖನ ಕೊಪ್ಪಳದ ಪ್ರಮುಖ ಹಳ್ಳವೊಂದರ ಸ್ಥಳನಾಮದ ಕುರಿತಾಗಿದೆ. ಹಿರೇಹಳ್ಳ, ಉಸಿಕಿನಹಳ್ಳ, ಓಜಿನಹಳ್ಳ, ಕುಶನದಿ ಎಂಬ ವಿವಿಧ ನಾಮಗಳನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ಹಳ್ಳ ಬೃಹದ್ದಾಗಿದ್ದರಿಂದ ಅದಕ್ಕೆ 'ಹಿರೆಹಳ್ಳ' ಎಂದು ಕರೆದಿದ್ದು ಸಹಜವಾಗಿದೆ. ಅದರಂತೆ ಹಳ್ಳವೂ ಹಿರಿದಾಗಿ ಹರಿಯುತ್ತದೆ. ಅಪಾರ ಪ್ರಮಾಣದ ಉಸುಕನ್ನು(ಮರಳು) ಸೃಷ್ಟಿಸುತ್ತಾ ಸಾಗುತ್ತಿದೆ. ಆ ಕಾರಣದಿಂದಾಗಿ ಅದಕ್ಕೆ 'ಉಸಿಕಿನಹಳ್ಳ' ಎಂದು ಕರೆಯಲಾಗುತ್ತಿರುವ ಸಂಗತಿಯನ್ನು ಸೂಚಿಸಲಾಗಿದೆ. ಇನ್ನು ಸ್ಥಳಿಯರ ಅಭಿಪ್ರಾಯದಂತೆ ಮತ್ತು ಕೊಪ್ಪಳವು ಒಂದು ಜೈನ ಕೇಂದ್ರವಾಗಿದ್ದ ಸಂಗತಿಯನ್ನು ಅನುಲಕ್ಷಿಸಿ, ಜೈನಮುನಿಗಳು ಈ ಹಳ್ಳದಲ್ಲಿ ಆರಾಧನೆ ಮಾಡುತ್ತಿದ್ದರಿಂದ 'ಓಜಿನಹಳ್ಳ' ಎನ್ನುವ ಹೆಸರು ಬಂದಿತೆಂಬ ವಿಷಯವನ್ನು ಪರಿಶೀಲಿಸಲಾಗಿದೆ. ಸಮಕಾಲಿನ ಸಾಹಿತ್ಯ ಕೃತಿಗಳಲ್ಲಾಗಲಿ ಅಥವಾ ಶಾಸನಗಳಲ್ಲಾಗಲಿ ಉಲ್ಲೇಖದ ಬಗ್ಗೆ ಯಾವುದೇ ದಾಖಲೆಗಳು ದೊರೆಯುವುದಿಲ್ಲ. ಹಾಗಾಗಿ ಸದ್ಯ ಈ ಅಭಿಪ್ರಾಯದ ಬಗ್ಗೆ ಖಚಿತ ನಿರ್ಣಯವನ್ನು ತೆಗೆದುಕೊಳ್ಳಲಾಗುವುದಿಲ್ಲ. ಇನ್ನು 'ಕುಶನದಿ' ಎಂಬ ಉಲ್ಲೇಖವನ್ನು ಸ್ಥಳೀಯ ಮಾದಿನೂರಿನ ಅಡವಿ ಆಚಾರ್ಯರು ಆಧುನಿಕ ಕೃತಿಯಲ್ಲಿ ಪ್ರಸ್ತಾಪಿಸಿರುವಂತೆ ಗಮನಿಸಲಾಗಿದೆ. 'ಕುಶ' ಎಂದರೆ ಹುಲ್ಲು ಅಥವಾ ದರ್ಬೆ. ಹಾಗಾಗಿ ಪೂಜೆಗೆ ಅಗತ್ಯವಾಗಿದ್ದ ಹುಲ್ಲು ಈ ಹಳ್ಳದಲ್ಲಿ ಬೆಳೆಯಲಾಗುತ್ತಿತ್ತು. ಹಾಗಾಗಿಯೇ 'ಕುಶನದಿ' ಎಂಬ ಶಿಷ್ಟ ರೂಪ ಬಂದಿರಬಹುದುದಾದ ಸಾಧ್ಯತೆ ಇದೆ ಎಂದು ಅನುಮಾನಿಸಿದ್ದಾರೆ.

ಹಳ್ಳದ ಬಗ್ಗೆ ಬರೆಯುತ್ತಾ ಪ್ರಾಸಂಗಿಕವಾಗಿ ಅವರು ಹಿರೇಹಳ್ಳ ಡ್ಯಾಮ್ ಯೋಜನೆಯ ಬಗ್ಗೆ ವಿವರವಾದ ಮಾಹಿತಿಯನ್ನು ನೀಡಿರುವುದು ಉಪಯುಕ್ತವಾಗಿದೆ. ಹಿರೇಹಳ್ಳವನ್ನು ಕೊಪ್ಪಳದ ಗವಿಮಠದ ಶ್ರೀ ಗವಿಸಿದ್ದೇಶ್ವರ ಮಹಾಸ್ವಾಮಿಗಳು ಮತ್ತು ಭಕ್ತ ಸಮೂಹದ ನೆರವಿನಿಂದ ಸ್ವಚ್ಛಗೊಳಿಸಿದ ಕಾರ್ಯವನ್ನೂ ಇಲ್ಲಿ ಸ್ಮರಿಸಿಕೊಂಡಿರುವುದು ಔಚಿತ್ಯವಾಗಿದೆ.

ಶುಕಪುರದ ಕೆರೆಯೋ? ಗಿಣಿಗಳ ಕೆರೆಯೋ? ಗಿಣಿಗೇರಿ ಕೆರೆಯೋ ಎಂಬ ಪ್ರಶ್ನಾರ್ಥಕ ಚಿಹ್ನೆಗಳನ್ನು ಒಳಗೊಂಡ ಗಿಣಿಗೇರಿ ಕೆರೆಯ ಕುರಿತ ಈ ಲೇಖನವಾಗಿ

ಗಿಣಿಗೇರಿ ಗ್ರಾಮದ ಕೆರೆಯನ್ನು ಪ್ರಾಸಂಗಿಕವಾಗಿ ಪರಿಚಯಿಸುವಂತಿದ್ದರೂ ಪ್ರಧಾನ ಉದ್ದೇಶ ಗಿಣಿಗೇರಿ ಗ್ರಾಮನಾಮದ ವಿವೇಚನೆಗೆ ಸಂಬಂಧಿಸಿದೆ. ಪ್ರಾಚೀನ ಕಾಲದಲ್ಲಿ ಗಿಣಿಗೇರಿ ಶುಖಪುರ ಎನಿಸಿತ್ತು ಎನ್ನುವ ಸ್ಥಳೀಯರ ಹೇಳಿಕೆಯನ್ನು ಪರಿಶೀಲಿಸಿದ ಲೇಖಕರು, 'ಶುಕ'ವೆಂದರೆ ಗಿಣಿ, 'ಪುರ'ವೆಂದರೆ ಊರು. ಹಾಗಾಗಿ ಇದು 'ಶುಕಪುರ'ದಿಂದ 'ಗಿಣಿಗೇರಿ'ಯಾಗಿದೆ ಎಂಬುದಾಗಿ ಇಲ್ಲವೇ 'ಶುಕಮುನಿ' ಆಚಾರ್ಯರಿಂದಾಗಿ ಈ ಹೆಸರು ಬಂದಿರಬಹುದೆಂದು ಅಂದಾಜಿಸುತ್ತಾರೆ. ಪ್ರಾಸಂಗಿಕವಾಗಿ ಕೆರೆಯ ಬಗೆಗಿನ ಭೌತಿಕ ಮಾಹಿತಿ ಉಪಯುಕ್ತವಾಗಿದೆ.

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಪ್ರಸಿದ್ಧ ಐತಿಹಾಸಿಕ ನೆಲೆ ಹಿರೇಬೆಣಕಲ್‌ನ ಶಿಲಾಸಮಾಧಿಗಳು. ಅದರ ಕುರಿತಾದ ವಿಶ್ವಪಾರಂಪರಿಕ ತಾಣಗಳ ತಾತ್ಕಾಲಿಕ ಪಟ್ಟಿಯಲ್ಲಿ ಹಿರೇಬೆಣಕಲ್ಲಿನ ಶಿಲಾಸಮಾಧಿಗಳು ಹೆಸರು ಸೇರ್ಪಡೆಗೊಂಡ ಸಂದರ್ಭದಲ್ಲಿ ಬರೆದಿರುವಂತಹದ್ದು. ಆ ಸಾಂದರ್ಭಿಕ ಲೇಖನವಾಗಿ ಇದು ಮಹತ್ವ ಪಡೆದಿದೆ. ವಿಶ್ವಪಾರಂಪರಿಕ ಸ್ಥಳದ ಮಾನ್ಯತೆಯನ್ನು ಹಿರೇಬೆಣಕಲ್‌ನ ಶಿಲಾಸಮಾಧಿಗಳಿಗೆ ಸಿಗದೇ ಬೇರೆ ತಾಣಗಳು ಪಡೆದಿರುವುದರಿಂದ ಪ್ರಸ್ತುತ ಆ ಪಟ್ಟಿಯು ರದ್ದಾಗಿದೆ.

ಹಿರೇಬೆಣಕಲ್ ಮೋರೇರ್ ಗುಡ್ಡದ ಬೃಹತ್ ಶಿಲಾಯುಗದ ಶಿಲಾಸಮಾಧಿಗಳಿವೆ. ಆ ಸಮಾಧಿಗಳ ಕುರಿತ ಮಾಹಿತಿಯನ್ನು ನೀಡುವ ಲೇಖನ ಇದಾಗಿದೆ. ಜೊತೆಗೆ ಬೆಣಕಲ್ ಗ್ರಾಮದ ಪ್ರಾಚೀನ ಪರಿಸರ, ಸಮಾಧಿಗಳ ಪ್ರಕಾರ, ರಚನೆ, ಆದಿಮಾನವರ ಜೀವನ ಪದ್ಧತಿ, ಹಾಗೂ ಗವಿವರ್ಣ ಚಿತ್ರಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಹಿರೇಬೆಣಕಲ್ ಶಿಲಾಸಮಾಧಿಗಳ ಚಾರಿತ್ರಿಕ ಹಿನ್ನೆಲೆ ಕುರಿತು ಉತ್ತಮ ಮಾಹಿತಿ ಒದಗಿಸುವ ಲೇಖನ ಇದಾಗಿದೆ.

ನಂತರದ ಲೇಖನ ಯಲಬುರ್ಗಿ ಸಿಂದರ ಕುರಿತಾದದ್ದು. ಈ ಲೇಖನದಲ್ಲಿ ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಆಳಿದ ಎರಂಬರಗೆ ಯಲಬುರ್ಗಿಯ ಸಿಂಧರನ್ನು ಪರಿಚಯಿಸುವ ಉದ್ದೇಶವಿದೆ. ಇದರ ಬಗ್ಗೆ ಈ ಹಿಂದೆ ವಿದ್ವಾಂಸರಾದ ಡಾ.ಆ.ಸುಂದರ, ಡಾ.ಬಿ.ವಿ.ಶಿರೂರು ಹಾಗೂ ಇತರರು ಬರೆದಿರುವ ಆ ಲೇಖನಗಳು ಮತ್ತು ಪುಸ್ತಕಗಳು ಪ್ರಕಟಗೊಂಡು ತುಂಬಾ ವರ್ಷಗಳಾಗಿದ್ದವು. ಹಾಗಾಗಿ ಹೊಸದಾಗಿ ಬೆಳಕಿಗೆ ಬಂದ ಶಾಸನಗಳನ್ನು ಗಮನಿಸಿ ಈ ಲೇಖನ ಸಿದ್ಧಗೊಂಡಿದೆ. ಸಿಂಧನಾಮ ಪರಿಶೀಲನೆ, ರಾಜರ ವಂಶಾವಳಿ, ಪ್ರಮುಖ ರಾಜರ ವೈಯಕ್ತಿಕ ಸಾಧನೆಗಳ ಕುರಿತಾಗಿ ಡಾ.ಕೊಟ್ನೆಕಲ್‌ರವರು

ಉತ್ತಮ ಮಾಹಿತಿಯನ್ನು ಒದಗಿಸುವಲ್ಲಿ ಸಫಲರಾಗಿದ್ದಾರೆ. ವೈಯಕ್ತಿಕವಾಗಿ ರಾಜರ ಸಾಧನೆಗಳನ್ನು ಶಾಸನಗಳು ಒದಗಿಸುವ ಮಾಹಿತಿಯನ್ನು ಅನುಲಕ್ಷಿಸಿ ವಿವರಿಸಲಾಗಿದೆ.

ಕೊಪ್ಪಳದ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ತುಂಬಾ ಮಹತ್ವದ ಲೇಖನ. ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್‌ರವರು ತಮ್ಮ ಪಿಎಚ್.ಡಿಗಾಗಿ 'ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಅಧ್ಯಯನ' ಮಾಡಿದವರು. ಆ ಹಿನ್ನೆಲೆಯಲ್ಲಿ ಈ ಲೇಖನ ಅವರಿಗೆ ಪೂರಕವಾಗಿದ್ದು, ಶಾಸನಗಳ ಬಗೆಗಿನ ಹಲವಾರು ಅಂಶಗಳನ್ನು ಬಿಂಬಿಸಲು ಸಹಾಯಕವಾಗಿದೆ. ಸ್ಥಳನಾಮಗಳು, ಧಾರ್ಮಿಕ ಸ್ಥಿತಿಗತಿ, ಸಾಮಾಜಿಕ ಸ್ಥಿತಿಗಳು, ಸಾಹಿತ್ಯಿಕ ಅಂಶಗಳು ಮುಂತಾದ ಸಂಗತಿಗಳ ಕುರಿತು ಪರಿಚಯಿಸುವ ಲೇಖನ ಇದಾಗಿದೆ.

ಈ ಲೇಖನಕ್ಕೆ ಪೂರಕವಾಗಿರುವ ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಸಾಹಿತ್ಯ. ಇದು ಕೂಡ ಶಾಸನಗಳಲ್ಲಿ ಉಪಯುಕ್ತವಾಗಿರುವ ಸಾಹಿತ್ಯದ ಮನೋಜ್ಞೆಯನ್ನು ಕುರಿತಾಗಿದೆ. ಶಾಸನಗಳು ಕೇವಲ ಇತಿಹಾಸವನ್ನು ಅಷ್ಟೇ ಅನಾವರಣ ಮಾಡುವುದಿಲ್ಲ. ಜೊತೆಗೆ ಹಲವು ಸಂಗತಿಗಳನ್ನೂ ಕೂಡ ಪ್ರತಿಬಿಂಬಿಸುತ್ತವೆ. ಅವುಗಳಲ್ಲಿ ಸಾಹಿತ್ಯವೂ ಕೂಡ ಒಂದು. ಶಾಸನಗಳಲ್ಲಿರುವ ಸಾಹಿತ್ಯವನ್ನು ಚರಿತ್ರೆಕಾರರು ಗುರುತಿಸಲು ಕಷ್ಟಸಾಧ್ಯವಾಗಬಹುದು. ಆದರೆ ಕನ್ನಡ ವಿದ್ವಾಂಸರಿಗೆ ಇದು ಅಸಾಧ್ಯವೇನಲ್ಲ. ಎಂ.ಚಿದಾನಂದಮೂರ್ತಿ, ಎಂ.ಎಂ.ಕಲಬುರ್ಗಿಯವರಂತಹ ಕನ್ನಡ ನಾಡಿನ ವಿದ್ವಾಂಸರು ಶಾಸನ ಕ್ಷೇತ್ರ ಪ್ರವೇಶಿಸಿದ ನಂತರ ಅದ್ಭುತವಾಗಿ ಶಾಸನೋಕ್ತ ಸಾಂಸ್ಕೃತಿಕ ಲೋಕ ಅನಾವರಣಗೊಂಡಿತು. ಕನ್ನಡ ಅಧ್ಯಾಪಕರಾಗಿರುವ ಡಾ.ಸಿದ್ಧಲಿಂಗಪ್ಪನವರು ಸಹಜವಾಗಿ ಶಾಸನಗಳ ಸಾಹಿತ್ಯಿಕ ಅಂಶಗಳನ್ನು ವಿಶ್ಲೇಷಿಸುವಲ್ಲಿ ಸಫಲರಾಗಿದ್ದಾರೆ.

ಶಾಸನದ ಕವಿಗಳು, ಭಾಷೆ, ಛಂದಸ್ಸು, ವ್ಯಾಕರಣ ಅಂಶ ವಿಶ್ಲೇಷಣೆಯನ್ನು ಮಾಡಲಾಗಿದೆ. ಹಲವು ಶಾಸನಗಳ ಭಾಗಗಳನ್ನು ಉಲ್ಲೇಖಿಸುವುದರ ಮೂಲಕ, ಆಯಾ ಶಾಸನಗಳ ಸಾಹಿತ್ಯಿಕ ಅಂಶಗಳನ್ನು ಗುರುತಿಸಲಾಗಿದೆ. ಒಟ್ಟಿನಲ್ಲಿ ಇದು ಒಂದು ಉಪಯುಕ್ತವಾದ ಲೇಖನವಾಗಿದೆ.

ಮುಂದಿನ ಲೇಖನ ಶಾಸನ ಕವಿಗಳಿಗೆ ಸಂಬಂಧಿಸಿದಂತೆ ಶಾಸನಗಳು ಚಾರಿತ್ರಿಕ ಅಂಶಗಳನ್ನು ಒಳಗೊಂಡಿದ್ದರೂ ಶಾಸನದ ಪಠ್ಯ ಕಾವ್ಯಮಯವಾಗಿದ್ದರೆ ಅದು ಹೆಚ್ಚು ಮಹತ್ವ ಪಡೆದುಕೊಳ್ಳುತ್ತದೆ. ಹಾಗಾಗಿ ಅನೇಕ ರಾಜ-ಮಹಾರಾಜರು ಶಾಸನಗಳ ಪ್ರಕಾರಗಳನ್ನು ಕವಿಗಳಿಂದ ರಚಿಸಿಕೊಂಡಿದ್ದಾರೆ. ಅಂತಹ ಕವಿಗಳು ಶಾಸನಗಳ ಪಠ್ಯ

ರಚನೆಯೊಂದಿಗೆ ತಮ್ಮ ಹೆಸರುಗಳನ್ನು ಉಲ್ಲೇಖಿಸಿರುತ್ತಾರೆ. ಆದ್ದರಿಂದ ಶಾಸನ ಪರಿಚಯದ ಜೊತೆಗೆ ಶಾಸನ ಕವಿಗಳ ಬಗ್ಗೆಯೂ ತಿಳಿದುಬರುತ್ತದೆ.

ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖಿಸಿರುವ ಅಥವಾ ಶಾಸನ ಪಾಠಗಳನ್ನು ರಚಿಸಿರುವ ಕವಿಗಳ ಪಟ್ಟಿಯನ್ನು ನೀಡಲಾಗಿದೆ. ಅದರಲ್ಲಿ ಮಲ್ಲಕವಿ, ಇಂದ್ರಯ್ಯ, ಸಮಂತಭದ್ರ ಬಳಾರ, ಮೈದುನ ಮಾಧೇಯ ಹೆಗ್ಗಡೆ, ರಾಮೋಜ, ಗಿರಿಜೇಶ ಮುಂತಾದವರು ಪ್ರಮುಖರಾಗಿದ್ದಾರೆ. ಅಂತಹವರ ಪರಿಚಯ ಇಲ್ಲಿದೆ.

ಕೇವಲ ಕವಿಗಳ ಪಟ್ಟಿಯನ್ನಷ್ಟೇ ಉಲ್ಲೇಖಿಸದೆ ಡಾ.ಕೊಟ್ನೆಕಲ್‌ರವರು ಪ್ರಾಸಂಗಿಕವಾಗಿ ಆಯಾ ಶಾಸನಗಳಲ್ಲಿ ಕವಿನಾಮ ಉಲ್ಲೇಖದ ವಿಷಯಗಳನ್ನು, ಶಾಸನಗಳ ಪಠ್ಯದ ಕಾವ್ಯಾತ್ಮಕವಾಗಿರುವ ಅಂಶಗಳನ್ನೂ ವಿವರಿಸಿರುವುದರಿಂದ ಸಾಹಿತ್ಯ ಅನುಭವಿಗಳಿಗೆ ಇದು ಉಪಯುಕ್ತವಾಗಲಿದೆ.

ಶಾಸನಗಳಿಗೆ ಸಂಬಂಧಿಸಿದ ಈ ಲೇಖನಗಳಿಗೆ ಪೂರಕವಾಗಿ ಕೊಪ್ಪಳ ತಾಲೂಕಿನ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ ಲೇಖನವಿದೆ. ಪ್ರಸ್ತುತ ಲೇಖನದಲ್ಲಿ ಕೊಪ್ಪಳ ತಾಲೂಕಿನಲ್ಲಿ ಈವರೆಗೆ ಪ್ರಕಟವಾಗಿರುವ ಶಾಸನಗಳ ವಿಶ್ಲೇಷಣೆಯನ್ನು ಮಾಡಿದ್ದಾರೆ. ಕೊಪ್ಪಳ ತಾಲೂಕಿನಲ್ಲಿ 174ಕ್ಕೂ ಅಧಿಕ ಶಾಸನಗಳಿದ್ದು, ಅವುಗಳಲ್ಲಿ ವ್ಯಕ್ತವಾಗಿರುವ ಕೊಪ್ಪಳದ ಧರ್ಮ, ದಾನ–ದತ್ತಿಗಳು, ಶೈಕ್ಷಣಿಕ ಕೇಂದ್ರಗಳು, ಆರ್ಥಿಕ ವ್ಯವಸ್ಥೆ ಹೀಗೆ ಹಲವಾರು ಅಂಶಗಳನ್ನು ಎತ್ತಿ ತೋರಿದ್ದಾರೆ.

ಆನೆಗುಂದಿ ಶಾಸನಗಳು ಒಂದು ಅವಲೋಕನ ಎಂಬ ಮತ್ತೊಂದು ಲೇಖನ ಪ್ರಸಿದ್ಧ ಚಾರಿತ್ರಿಕ ಸ್ಥಳ ಆನೆಗುಂದಿಯ ಶಾಸನಗಳ ವಿಶೇಷ ವಿಷಯಗಳಿಗೆ ಸಂಬಂಧಿಸಿದೆ. ಆನೆಗೊಂದಿಯ ಪ್ರಕಟಿತ ಶಿಲಾಶಾಸನಗಳು ತಾಮ್ರಶಾಸನಗಳು, ನಿಷಿಧಿ ಶಾಸನಗಳನ್ನು ಇಲ್ಲಿ ವಿವರಿಸಲಾಗಿದೆ. ಆ ಮೂಲಕ ಆನೆಗುಂದಿಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸ ಅನಾವರಣಗೊಂಡಿದೆ. ಆನೆಗುಂದಿಯ ಧಾರ್ಮಿಕ, ಸಾಂಸ್ಕೃತಿಕ ಸ್ಥಿತಿಗತಿ ಮುಂತಾದ ಅಂಶಗಳು ಈ ಮೂಲಕ ತಿಳಿಯಲು ಸಹಾಯಕವಾಗಿದೆ.

ವಿಜಯನಗರದ ಸಾಮಂತರ ಕಾಲಕ್ಕೆ ಸಂಬಂಧಿಸಿದ ಶಾಸನಗಳು ಕುರಿತಾಗಿರುವ ಲೇಖನದಲ್ಲಿ ಪ್ರಾಸಂಗಿಕವಾಗಿ ಕನಕಗಿರಿಯ ಚರಿತ್ರೆ ಬಗ್ಗೆ ವಿವರಿಸಲಾಗಿದೆ. ಕನಕಗಿರಿ ನಾಯಕ ಅರಸರು ಹಲವು ಶಾಸನಗಳನ್ನು ಹೊರಡಿಸಿದ್ದಾರೆ. ನಾನು 1994ರಲ್ಲಿ ಕನಕಗಿರಿ ಕುರಿತ ನನ್ನ ಎಂ.ಫಿಲ್ ಅಧ್ಯಯನದ ಸಂದರ್ಭದಲ್ಲಿ ಅಲ್ಲಿರುವ 15 ಶಾಸನಗಳನ್ನು

ಪ್ರಕಟಿಸಿರುವೆ. ಆ ಶಾಸನಗಳನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದವರು ಕೊಪ್ಪಳ ಜಿಲ್ಲಾ ಶಾಸನ ಸಂಪುಟದಲ್ಲಿ ಆಕರವಾಗಿ ಬಳಸಿದ್ದಾರೆ. ಪ್ರಸ್ತುತ ಸಿದ್ಧಲಿಂಗಪ್ಪನವರು ಕನಕಗಿರಿ ಶಾಸನಗಳನ್ನು ಇರಿಸಿಕೊಂಡು ಅವುಗಳು ಕಟ್ಟಿಕೊಡುವ ಕನಕಗಿರಿಯ ರಾಜಕೀಯ ಹಾಗೂ ಸಾಂಸ್ಕೃತಿಕ ಚರಿತ್ರೆಯ ಕೆಲವು ಅಂಶಗಳನ್ನು ಪ್ರಸ್ತುತಪಡಿಸಿದ್ದಾರೆ. ಕನಕಗಿರಿ ಕುರಿತ ಅಧ್ಯಯನಕ್ಕೆ ಈ ಶಾಸನಗಳು ಮಹತ್ವದ ಆಕರಗಳಾಗಿದ್ದು ಅವುಗಳ ಕುರಿತ ಈ ವಿವರಣಾತ್ಮಕ ಬರಹ ಕೂಡ ಗಮನಾರ್ಹ ಎನಿಸುತ್ತದೆ.

ತಿರುಳ್ಗನ್ನಡ ನಾಡೆಂದು ಕರೆಯಲ್ಪಡುವ ಪ್ರದೇಶವೇ ಈ ಕೊಪ್ಪಳ. ಈ ಪ್ರದೇಶದ ಭಾಷೆ ಕುರಿತಾಗಿ ಕೊಪ್ಪಳದ ನುಡಿಸೊಗಡುಗಳನ್ನು ಲೇಖನದ ಮೂಲಕ ವಿಶ್ಲೇಷಿಸಿದೆ. ಕನ್ನಡ ಅಧ್ಯಾಪಕರಾಗಿರುವ ಡಾ.ಸಿದ್ದಲಿಂಗಪ್ಪ ಕೊಟ್ನೆಕಲ್‌ರವರ ಸಹಜ ಅಧ್ಯಯನದ ಫಲಶೃತಿಯಾಗಿ ಈ ಲೇಖನ ಮೂಡಿಬಂದಿದೆ.

ಕೊಪ್ಪಳ ಪ್ರದೇಶದ ಭಾಷೆ ಸೊಗಡನ್ನು ಅನಾವರಣಗೊಳಿಸಿರುವ ವಿಶಿಷ್ಠ ಶಬ್ದ ಪ್ರಯೋಗಗಳ ರಚನೆ, ಪಲ್ಲಟಗಳ ವಿಶ್ಲೇಷಣೆ ಗಮನ ಸೆಳೆಯುತ್ತದೆ. ಕಥೆಗೆ>ಕತೆ, ಘಂಟೆಗೆ>ಗಂಟೆ ಎನ್ನುವ ಮಹಾಪ್ರಾಣಗಳ ಬಳಕೆ ಇಲ್ಲದ ಉಚ್ಚಾರಣೆಗಳ ವಿವರಣೆಯಿದೆ. ಬಂದರೂ ಬದಲಾಗಿ ಬಂದ್ರು, ಹೋದರು ಬದಲಾಗಿ ಹೋದ್ರು, ನೋಡುತ್ತಾನೆ ಬದಲಾಗಿ ನೋಡ್ತಾನೆ ಇಂತಹ ಅನೇಕ ಆಡು ನುಡಿಗಳ ಬಳಕೆಗಳನ್ನು ವಿವರಿಸಿದ್ದಾರೆ. ಹಾಗೂ ಭಾಷೆಯಲ್ಲಿನ ಬದಲಾಗುವ ಅಕ್ಷರ ಪಲ್ಲಟಗಳು ನಿಲುಕು ಬದಲಾಗಿ ನಿಕುಲು, ಉಪಟಳ ಬದಲಾಗಿ ಉಪಳಾಟ ಮುಂತಾಗಿವೆ. ಶಬ್ದ ಪಲ್ಲಟಗಳು ತೊಳೆ–ಬೆಳಗು, ಅಕ್ಷರಲೋಪಗಳು ಹೋಯಿತು>ಹೋತು, ಬೇವಿನಗಿಡ>ಬೇನೆಗಿಡ, ಅಕ್ಷರ ಬದಲಾವಣೆ ಚಳಿ>ಸಳಿ ಮೈತೊಳೆ>ಮೈದೊಳೆ ಮುಂತಾದ ಉದಾಹರಣೆಗಳೊಂದಿಗೆ ಸ್ಥಳೀಯ ಭಾಷೆ ವೈಶಿಷ್ಟ್ಯತೆಗಳನ್ನು ಸದರಿ ಲೇಖನ ಬಿಚ್ಚಿಡುತ್ತದೆ. ಆ ಮೂಲಕ ಒಂದು ಪ್ರದೇಶದ ಭಾಷೆಗಳನ್ನು ಆಸ್ವಾದಿಸಲು ಸಹಾಯಕವಾಗುತ್ತದೆ. ಮತ್ತೊಂದು ಕೊಪ್ಪಳ ಪರಿಸರದ ಕನ್ನಡ ಭಾಷೆಯ ಮೇಲೆ ಅನ್ಯ ಭಾಷೆಗಳ ಪ್ರಭಾವ ಕುರಿತಾಗಿ ಬರೆದಿರುವುದು ವಿಶೇಷ. ಕೊಪ್ಪಳ ಜಿಲ್ಲೆಯಲ್ಲಿ ಕನ್ನಡ ಮಾತನಾಡುವವರ ಜೊತೆಗೆ ಅನೇಕ ಅನ್ಯ ಭಾಷಿಕರಿದ್ದಾರೆ. ಕೊಪ್ಪಳ ಪ್ರದೇಶದ ಕನ್ನಡ ಭಾಷೆಯ ಮೇಲೆ ಅವರು ಬೀರಿದ ಪ್ರಭಾವ ಇದರಲ್ಲಿ ಉದಾಹರಣೆ ಜೊತೆಗೆ ವಿವರಿಸಿರುವುದು ವಿಶಿಷ್ಟವೆನಿಸುತ್ತದೆ.

ಕೊಪ್ಪಳ ತಾಲೂಕಿನ ವಿಮೋಚನಾ ಹೋರಾಟಗಾರರ ಬಗ್ಗೆ ಲೇಖನವು ಕೊಪ್ಪಳದಲ್ಲಿ ನಡೆದ ಸ್ವಾತಂತ್ರ್ಯ ಹಾಗೂ ಹೈದರಾಬಾದ್ ವಿಮೋಚನಾ ಹೋರಾಟ,

ಅದರಲ್ಲಿ ಭಾಗಿಯಾಗಿರುವ ಸ್ವಾತಂತ್ರ್ಯ ಹೋರಾಟಗಾರರನ್ನು ಪರಿಚಯಿಸುತ್ತದೆ. ವಿಶೇಷವಾಗಿ ಶಿವಮೂರ್ತಿಸ್ವಾಮಿ ಅಳವಂಡಿ, ಸೋಮಪ್ಪ ಡಂಬಳ, ಕೊಟ್ರುಬಸಯ್ಯ ಮೈನಹಳ್ಳಿ, ಚನ್ನಬಸನಗೌಡ ಅಲ್ಲಿಪುರ, ಹನುಮರೆಡ್ಡಿ ಕಲ್ಲುಗುಡಿ, ಪಂಚಪ್ಪ ಶೆಟ್ಟರ್, ಡಿ.ಆರ್ ವಿಠ್ಠಲ್‌ರಾವ್, ಎಂ.ವಿರುಪಾಕ್ಷಪ್ಪ, ಲಕ್ಷ್ಮಣ ಆಚಾರ್ಯ ಅಗ್ನಿಹೋತ್ರಿ ಮುಂತಾದ ಹೋರಾಟಗಾರರ ಸಾಧನೆಯನ್ನು ವಿವರಿಸಲಾಗಿದೆ. ಆ ಮೂಲಕ ಕೊಪ್ಪಳ ಭಾಗದ ಸ್ವಾತಂತ್ರ್ಯ ಹೋರಾಟದ ವಿವಿಧ ಆಯಾಮಗಳನ್ನು ಆಸ್ವಾದಿಸಿದಂತಾಗಿದೆ.

ಹಿಂದೆ ನಿಜಾಂ ಸಂಸ್ಥಾನದ ಭಾಗವಾಗಿದ್ದ ಪ್ರದೇಶದಲ್ಲಿ ಮಹಾರಾಷ್ಟ್ರದ ವಿದರ್ಭ ಆಂಧ್ರದ ತೆಲಂಗಾಣ ಹಾಗೂ ಕರ್ನಾಟಕದ ಬೀದರ್, ಗುಲ್ಬರ್ಗ ಹಾಗೂ ರಾಯಚೂರು ಜಿಲ್ಲೆಗಳು ಸಹಜವಾಗಿ ಹಿಂದುಳಿದಿವೆ. ಹಾಗಾಗಿ ಸಂವಿಧಾನಿಕ 371ನೇ ಕಲಂ ಜಾರಿ ಮಾಡಿ ಈ ಪ್ರದೇಶಗಳಿಗೆ ವಿಶೇಷ ಮೀಸಲಾತಿಯನ್ನು ಕಲ್ಪಿಸಬೇಕೆಂಬ ಕೂಗು ಬಹಳ ಹಿಂದಿನಿಂದಲೂ ಇತ್ತು. ಮಹಾರಾಷ್ಟ್ರದ ವಿದರ್ಭ ಈ ಸೌಲಭ್ಯವನ್ನು ಪಡೆದ ನಂತರ ಹೈದರಾಬಾದ್ ಕರ್ನಾಟಕ ಭಾಗಕ್ಕೂ ಈ ಸೌಲಭ್ಯ ಒದಗಿಸಬೇಕೆಂದು ಹೋರಾಟ ನಡೆದಿತ್ತು. ಈ ಹೋರಾಟಕ್ಕೆ ಕೊಪ್ಪಳ ಸಹಿತ ಸಕಾರಾತ್ಮಕವಾಗಿ ಸ್ಪಂದಿಸಿತು. ಹೋರಾಟದ ಫಲವಾಗಿ ಹೈದರಾಬಾದ್ ಕರ್ನಾಟಕಕ್ಕೆ ಸಂವಿಧಾನದ 371ನೇ ಜೆ ಕಾಲಂ ಅನ್ವಯ ವಿಶೇಷ ಮೀಸಲಾತಿ ದೊರೆಯಿತು. ಈ ಭಾಗದ ಜನ ಅದರ ಸೌಲಭ್ಯವನ್ನು ಪಡೆಯುತ್ತಿದ್ದಾರೆ. ಇವತ್ತಿನಲ್ಲಿ ಹೋರಾಟದ ಘಟನೆಗಳನ್ನು. ಹೋರಾಟಗಾರನ್ನು ಸ್ಮರಿಸಿಕೊಳ್ಳಬೇಕಾದದ್ದು ಅಗತ್ಯವಾದ ಕಾರ್ಯವಾಗಿದೆ. ಆ ಕಾರ್ಯದ ಒಂದು ಭಾಗವಾಗಿ ಮೂಡಿಬಂದಿರುವುದೇ ಸಂವಿಧಾನದ 371ನೇ ವಿಧಿ ಜಾರಿಗೆ ಹೋರಾಟದಲ್ಲಿ ಕೊಪ್ಪಳ ಜಿಲ್ಲೆ ಎನ್ನುವ ಲೇಖನ. ಈ ಲೇಖನದಲ್ಲಿ ಪ್ರಾಸಂಗಿಕವಾಗಿ ಹೈದರಾಬಾದ್ ರಾಜ್ಯದ ಪರಿಚಯ, ಆಳಿದ ನಿಜಾಮರಸರು, ಅವರ ಆಡಳಿತ ನೀತಿಯ ಕುರಿತಾದ ಅಂಶಗಳನ್ನು ವಿವರಿಸಲಾಗಿದ್ದು ಹೋರಾಟದ ಪರಿಚಯಕ್ಕೆ ಸೂಕ್ತ ಹಿನ್ನೆಲೆ ಒದಗಿದೆ. ಹೋರಾಟದ ಮುಂಚೂಣಿ ವಹಿಸಿದ್ದ ವೈಜನಾಥ್ ಪಾಟೀಲ್, ಬಸವಂತರಾಯ ಕುರಿ, ರಜಾಕ್ ಉಸ್ತಾದ್, ಬಿ.ಆರ್.ಪಾಟೀಲ, ಗುರುನಾಥ ಹಾಗೂ ರಾಘವೇಂದ್ರ ಕುಷ್ಟಗಿ ಅವರ ಬಗ್ಗೆ ಉಲ್ಲೇಖಿಸಿರುವುದು ಸೂಕ್ತವಾಗಿದೆ.

ಡಾ.ಸಿದ್ದಲಿಂಗಪ್ಪ ಕೊಟ್ನೆಕಲ್‌ರವರು ಈ ಎಲ್ಲಾ ಲೇಖನಗಳ ಮೂಲಕ ಕೊಪ್ಪಳದ ಪರಿಸರದ ಸಾಂಸ್ಕೃತಿಕ ಚರಿತ್ರೆಯನ್ನು ಬಿಂಬಿಸುವ ಪ್ರಯತ್ನ ಮಾಡಿ ಯಶಸ್ವಿಯಾಗಿದ್ದಾರೆ. ಕೇವಲ ಶಾಲೆ–ಕಾಲೇಜುಗಳಲ್ಲಿ ಬೋಧನಾ ಕಾರ್ಯದಲ್ಲಿ ಉಳಿದುಬಿಡುವ ಉಪನ್ಯಾಸಕರ ನಡುವೆ ಡಾ.ಕೊಟ್ನೆಕಲ್‌ರವರು ವಿಭಿನ್ನವಾಗಿ ಕಂಡುಬರುತ್ತಾರೆ. ಅವರ ಉತ್ಸಾಹ ಮತ್ತು

ನಿರಂತರ ಕ್ರಿಯಾಶೀಲತೆ, ಅಧ್ಯಯನ ಹಾಗೂ ಸಂಶೋಧನೆಡೆಗೆ ಕರೆದೊಯ್ಯುತ್ತಿದೆ. ಪರಿಣಾಮವಾಗಿ ಸಮಕಾಲಿನ ಸಂದರ್ಭದಲ್ಲಿ ಯಾವುದೋ ಕಾರಣದಿಂದ ಚರ್ಚೆಗೊಳಪಟ್ಟ ಇಲ್ಲವೇ ಗಮನ ಸೆಳೆದ ಚಾರಿತ್ರಿಕ ಸ್ಥಳ, ಸ್ಮಾರಕ, ಕೆರೆ, ಹಳ್ಳ ಮುಂತಾದವುಗಳ ಕುರಿತಾಗಿ ತಕ್ಷಣವೇ ಒಂದು ಲೇಖನವನ್ನು ಸಿದ್ಧಪಡಿಸುವುದು, ಪ್ರಕಟಿಸುವುದು ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್‌ರವರ ವೈಶಿಷ್ಟ್ಯತೆ. ಅದು ಭಾಷೆ, ಇತಿಹಾಸ, ಶಾಸನ, ಹೋರಾಟ ಹೀಗೆ ಯಾವುದೇ ವಿಷಯವಿರಲಿ ಅದರ ಬಗ್ಗೆ ಅಧ್ಯಯನ ನಡೆಸಿ ಲೇಖನ ಸಿದ್ಧಪಡಿಸುತ್ತಾರೆ. ಹೀಗೆ ಉತ್ಸಾಹವೇ ಪ್ರಧಾನವಾಗಿರುವ ಆ ಲೇಖನಗಳು ಸಿದ್ಧಗೊಳ್ಳುವುದರಿಂದ, ಅವು ಗಂಭೀರತೆ ಹಾಗೂ ತಲಸ್ಪರ್ಶಿಯನ್ನು ಪಡೆದುಕೊಳ್ಳುವ ಹಂತದಲ್ಲಿ ಇದ್ದಾಗಲೇ ಸಮಾರೋಪಗೊಳ್ಳುತ್ತವೆ ಎನಿಸಿದರೂ ಸಮಕಾಲಿನ ಸಂದರ್ಭದಲ್ಲಿ ಅವು ನೀಡುವ ಮಾಹಿತಿಯನ್ನು ನಾವು ಪಡೆದುಕೊಳ್ಳುತ್ತೇವೆ.

ಹೀಗೆ ತಮ್ಮ ಅಧ್ಯಯನ, ಅಧ್ಯಾಪನ ಹಾಗೂ ಬರಹಗಳಿಂದ ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್‌ರವರು ಕೊಪ್ಪಳ ಭಾಗದ ಗಮನ ಸೆಳೆಯಬಲ್ಲ ಭಾಷೆ, ಚರಿತ್ರೆ ಹಾಗೂ ಸಾಂಸ್ಕೃತಿಕ ಚಿಂತಕರಾಗಿ ಹೊರಹೊಮ್ಮಿದ್ದಾರೆ. ಅವರ ಪ್ರಸ್ತುತ ಈ ಪುಸ್ತಕದಿಂದ ಕೊಪ್ಪಳ ಭಾಗದ ಚರಿತ್ರೆ ಹಾಗೂ ಸಂಸ್ಕೃತಿ ಮತ್ತಷ್ಟು ಅನಾವರಣಗೊಳ್ಳಲಿದೆ. ಈ ಕಾರಣದಿಂದ ಅವರು ಅಭಿನಂದನೆಗೆ ಪಾತ್ರರು. ಹೀಗೆ ನಿರಂತರ ಹಾಗೂ ಮತ್ತಷ್ಟು ಗಂಭೀರ ನೆಲೆಯ ಲೇಖನ ಮತ್ತು ಪುಸ್ತಕಗಳು ಅವರಿಂದ ನಾಡಿಗೆ ಸಲ್ಲಲಿ ಎಂದು ಆಶಿಸುತ್ತೇನೆ.

**–ಡಾ. ಶರಣಬಸಪ್ಪ ಕೋಲ್ಕರ್**
ಪ್ರಾಚಾರ್ಯರು,
ಕಲ್ಮಠ ಶ್ರೀ ಚನ್ನಬಸವಸ್ವಾಮಿ ಮಹಿಳಾ ಪದವಿ ಮಹಾವಿದ್ಯಾಲಯ.
ಪಂಪಾನಗರ, ಗಂಗಾವತಿ

* * * * *

## ನನ್ನ ನುಡಿ.....

'ಕೊಪ್ಪಳದ ಚರಿತ್ರೆ ಮತ್ತು ಸಂಸ್ಕೃತಿ'ಯು ಬಹು ಪುರಾತನವಾದದ್ದು. ಅದಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ರಾಮಾಯಣ ಮತ್ತು ಮಹಾಭಾರತದ ಕಾಲಗಳಲ್ಲಿಯೇ ಈ ಪ್ರದೇಶ ಇತ್ತೆಂಬ ಬಗ್ಗೆ ಅನೇಕ ಕುರುಹುಗಳ ಐತಿಹ್ಯವಿದೆ. ಹೀಗಾಗಿ ಈ ಪ್ರದೇಶದ ಚರಿತ್ರೆ ಮತ್ತು ಸಂಸ್ಕೃತಿಯು ಸಾವಿರಾರು ವರ್ಷಗಳ ಕೆಳಗೆ ಇದ್ದಬಗ್ಗೆ ತಿಳಿದುಬರುತ್ತದೆ. ಇಲ್ಲಿ ದೊರೆತ ಶಾಸನಗಳು, ಸ್ಮಾರಕಗಳು, ಮೂರ್ತಿ–ಶಿಲ್ಪಗಳನ್ನು ಅಧ್ಯಯನ ಮಾಡಿದಾಗ ಒಂದು ರೀತಿಯ ಚರಿತ್ರೆ ಪರಿಚಯವಾದರೆ; ಪ್ರಾಚೀನ ಕಾಲದ ಶಿಲಾಸಮಾಧಿಗಳು ಮತ್ತು ಆದಿಮಾನವರು ನಿತ್ಯ ಬಳಸುತ್ತಿದ್ದ ಆಯುಧ, ಮಡಕೆ, ಆಭರಣಗಳ ಅಧ್ಯಯನ ಮಾಡಿದಾಗ ಅದರ ಸಂಪೂರ್ಣ ಚರಿತ್ರೆ ಮತ್ತು ಸಂಸ್ಕೃತಿ ಪರಿಚಯವಾಗುತ್ತದೆ. ಪ್ರಾಚೀನ ಕಾಲದ ಇಂತಹ ನೆಲೆಗಳು ಕೊಪ್ಪಳ ಪ್ರದೇಶದಲ್ಲಿ ಸಾಕಷ್ಟಿವೆ. ಅವುಗಳನ್ನು ಶೋಧಿಸಬೇಕಿದೆ, ಶೋಧಿಸಿ ಹೆಕ್ಕಿ–ಹೆಕ್ಕಿ ತೆಗೆಯಬೇಕಿದೆ. ಅಂದಾಗ ಮಾತ್ರ ಸಂಪೂರ್ಣ ಚರಿತ್ರೆ ದೊರೆಯದಿದ್ದರೂ ಒಂದು ಮಟ್ಟಿನ ಅಧ್ಯಯನಕ್ಕೆ ಅನುಕೂಲವಾದ ಮಾಹಿತಿ ದೊರೆಯಬಹುದೇನೂ ಎಂದೆನಿಸುತ್ತದೆ. ಆದರೆ ಪುರಾತನ ನೆಲೆಗಳನ್ನು ಶೋಧಿಸುವುದು ಮತ್ತು ಅದರ ಚರಿತ್ರೆಯನ್ನು ಕಟ್ಟಿಕೊಡುವುದು ಅಷ್ಟು ಸುಲಭವೇ?

ಚರಿತ್ರೆಯನ್ನು ಶೋಧಿಸುವುದಾಲಿ ಅಥವಾ ಸಂಸ್ಕೃತಿಯನ್ನು ಹುಡುಕುವುದಾಗಲಿ ಅಷ್ಟು ಸುಲಭವಲ್ಲ. "ಸಾಹಿತ್ಯ ಎಲ್ಲರಿಗಲ್ಲ" ಎನ್ನುವಂತೆ "ಸಂಶೋಧನೆ ಎಲ್ಲರಿಗಲ್ಲ" ಎನ್ನಬೇಕಾಗಿದೆ. ಕವಿಗಳು, ಕಥೆಗಾರರು, ಕಾದಂಬರಿಕಾರರು ಇಂದು ನೂರಾರು ಸಂಖ್ಯೆಯಲ್ಲಿ ದೊರೆಯುತ್ತಾರೆ. ಆದರೆ ಚರಿತ್ರೆಯನ್ನು ಕಟ್ಟಿಕೊಡುವವರು ಕೆಲವೇ ಕೆಲವರು ಮಾತ್ರ ಸಿಗಬಹುದು. ಶೋಧನೆ ಕಠಿಣವಾದ ಮಾರ್ಗವೆಂದರೂ ನಡೆಯುತ್ತದೆ. ಮೊದಲು ಒಂದು ವಸ್ತುವನ್ನು ಶೋಧಿಸಬೇಕಿದೆ, ನಂತರ ಅದರ ಸತ್ಯಾಸತ್ಯತೆ ತಿಳಿಯಬೇಕಿದೆ. ಶೋಧನೆ ಮತ್ತು ಅರಿಯುವಿಕೆಯ ಮಧ್ಯೆ ಬಹಳ ಪರಿಶ್ರಮ ಮತ್ತು ಕಠಿಣ ಅಧ್ಯಯನ ಇರುತ್ತದೆ. ಹೀಗಾಗಿ ಈ ಕ್ಷೇತ್ರದಲ್ಲಿ ತೊಡಗುವವರ ಸಂಖ್ಯೆ ಬಹಳ ವಿರಳ.

ಪಿಎಚ್.ಡಿ ಸಂಶೋಧನೆ ಮುಗಿದ ನಂತರ ನನ್ನ ಅಧ್ಯಯನವನ್ನು ನಾನು ಅಲ್ಲಿಗೆ ಮೊಟುಕಗೊಳಿಸಲಿಲ್ಲ. ವಾಸ್ತವದಲ್ಲಿ ನನ್ನ ಶೋಧ ಆನಂತರವೇ ಹೆಚ್ಚಿನ ಮಟ್ಟದಲ್ಲಿ ಸಾಗಿತು. ಐತಿಹಾಸಿಕ ಮತ್ತು ಸಾಂಸ್ಕೃತಿಕ ನೆಲೆಗಳ ಹುಡುಕಾಟ ಹೆಚ್ಚೆಚ್ಚು ಶುರುವಾಯಿತು. ಅನೇಕ ಗ್ರಾಮಗಳ ಶಾಸನಗಳ ಅಧ್ಯಯನದ ಜೊತೆಗೆ ಚರಿತ್ರೆ, ಬೆಟ್ಟ–ಗುಡ್ಡ, ಹಳ್ಳ–ನದಿ,

ಕೋಟೆ, ದೇವಾಲಯಗಳ ಚರಿತ್ರೆ ಕಟ್ಟುವುದರ ಕಡೆಗೆ ನನ್ನ ಗಮನ ಹರಿಯಿತು. ಜೊತೆಗೆ ಭಾಷೆ, ಕಲೆ–ಸಂಸ್ಕೃತಿ, ಹೋರಾಟ ಹೀಗೆ ಹತ್ತಾರು ಸಂಗತಿಗಳ ಅಧ್ಯಯನದ ಆಸಕ್ತಿಯುಂಟಾಯಿತು. ಅವುಗಳನ್ನು ಸಂದರ್ಭಯೋಚಿತವಾಗಿ ಅಧ್ಯಯನ ಮಾಡುವುದರ ಜೊತೆಗೆ ಲೇಖನ ಬರೆಯುತ್ತಾ ಹೋದೆ. ಅವುಗಳನ್ನು ಪತ್ರಿಕೆ, ವಿಶೇಷ ಸಂಚಿಕೆಗಳಿಗೆ ಬರೆದು ಕಳಿಹಿಸುತ್ತಿದ್ದೆ. ಕೆಲ ಜಾತ್ರೆ ಮತ್ತು ವಿಶೇಷ ಸಂದರ್ಭಗಳಲ್ಲಿ ಪತ್ರಕರ್ತರು ಮತ್ತು ವಿಶೇಷ ಸಂಚಿಕೆ ಸಂಪಾದಕರು ತಾವೇ ವಿಷಯಗಳನ್ನು ಕೊಟ್ಟು ಲೇಖನ ಸಿದ್ಧಪಡಿಸಲು ಹೇಳುತ್ತಿದ್ದರು. ಅದರಂತೆ ನಾನು ಸಿದ್ಧಪಡಿಸಿ ಕೊಡುತ್ತಿದ್ದೆ. ಲೇಖನ ಎಂದರೆ ಕೇವಲ ಪರಿಚಯ ಮಾಡುವುದಷ್ಟೇ ಆಗಿರಲಿಲ್ಲ. ಆ ವಿಷಯದ ಮೂಲ, ಆಳಗಳನ್ನು ಸಂಶೋಧನಾ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿ ಲೇಖನ ಸಿದ್ಧಪಡಿಸುತ್ತಿದ್ದೆ. ಆ ರೀತಿಯಲ್ಲೇ ಅತಂಹ ಲೇಖನಗಳನ್ನು ಮತ್ತು ಪ್ರಕಟಿತ ಮತ್ತು ಅಪ್ರಕಟಿತ ಎಲ್ಲವುಗಳನ್ನು ಒಂದೆಡೆ ಸೇರಿಸಿ ಪ್ರಕಟಗೊಂಡದ್ದೇ **"ಕೊಪ್ಪಳ ಚರಿತ್ರೆ ಮತ್ತು ಸಂಸ್ಕೃತಿಯ ಹುಡುಕಾಟ"** ಈ ಕೃತಿಯಾಗಿದೆ. ನಾನು ಕೊಪ್ಪಳ ಪರಿಸರದ ಚರಿತ್ರೆಯನ್ನಷ್ಟೇ ಅಧ್ಯಯನ ಮಾಡಿದವನಲ್ಲ. ಉಳಿದ ಶೋಧಗಳೂ ಸಾಕಷ್ಟಿವೆ. ಆದರೆ ಇಲ್ಲಿ ಒಂದು ಪ್ರದೇಶಕ್ಕೆ ಸೀಮಿತಗೊಳಿಸಿಕೊಂಡಿದ್ದರಿಂದ ಕೊಪ್ಪಳ ಚರಿತ್ರೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದವುಗಳು ಮಾತ್ರ ಒಂದೆಡೆ ಸೇರಿಸುವ ಪ್ರಯತ್ನ ಮಾಡಿದ್ದೇನೆ. ಪತ್ರಿಕೆ, ಸ್ಮರಣ ಸಂಚಿಕೆ, ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡ ಲೇಖನಗಳು ಅಂದಂದಿಗೆ ಓದಿ ರದ್ದಿಗೆ ಸೇರುತ್ತಿದ್ದವು. ಆ ಶೋಧ ಅಲ್ಲಿಗೆ ಮಾತ್ರ ಸೀಮಿತವಾಗಬಾರದು, ಮುಂದೆಯೂ ಸಹ ಅಧ್ಯಯನಕಾರರಿಗೆ ಸಿಗುವಂತಾಗಬೇಕು ಎಂಬ ಆಲೋಚನೆಯೊಂದಿಗೆ ಈ ಕೃತಿಯನ್ನು ಪ್ರಕಟಿಸುತ್ತಿದ್ದೇನೆ.

ಈ ಕೃತಿ ಪ್ರಕಟಣೆ ಸಹಾಯ ಮಾಡಿದ ಸರ್ವರನ್ನೂ ನೆನೆಯುತ್ತೇನೆ. ಮುನ್ನುಡಿ ಬರೆದ ಡಾ.ಶರಣಬಸಪ್ಪ ಕೋಲ್ಕಾರ್, ಬೆನ್ನುಡಿ ಬರೆದ ಡಾ.ಬಸವರಾಜ ಪೂಜಾರ ಮತ್ತು ಅಂದವಾಗಿ ಮುದ್ರಿಸಿದ ಐಶ್ವರ್ಯ ಪ್ರಿಂಟಿಂಗ್ ಪ್ರೆಸ್, ಕೊಪ್ಪಳ ಇವರಿಗೆ ಅನಂತ ಧನ್ಯವಾದಗಳು. ಕೃತಿ ಹೊರಬರಲು ಪ್ರತ್ಯಕ್ಷ ಹಾಗೂ ಪರೋಕ್ಷ ಸಹಾಯ ಮಾಡಿದ ಸರ್ವರಿಗೂ ನಮನಗಳು.

**–ಡಾ. ಸಿದ್ಧಲಿಂಗಪ್ಪ ಕೊಟ್ನೆಕಲ್**

ಕನ್ನಡ ಉಪನ್ಯಾಸಕರು, ಕೊಪ್ಪಳ

* * * * *

## ಒಳಪುಟಗಳಲ್ಲಿ.....................

### ಚರಿತ್ರೆ



### ಶಾಸನ



### ಭಾಷೆ



### ಹೋರಾಟ





# ಕೊಪ್ಪಳ ಸ್ಥಳನಾಮ; ಒಂದು ವಿಶ್ಲೇಷಣೆ

ಮಾನವ ತನ್ನ ಅಲೆಮಾರಿ ಜೀವನವನ್ನು ತ್ಯಜಿಸಿ, ಒಂದು ಕಡೆ ನೆಲೆ ಕಂಡುಕೊಂಡ ಮೇಲೆ ಇತರರೊಂದಿಗಿನ ಸಹಜೀವನದಿಂದಾಗಿ ಭಾವನೆ, ಅನಿಸಿಕೆ, ಅಭಿಪ್ರಾಯಗಳನ್ನು ಹಂಚಿಕೊಳ್ಳುವ ಅವಶ್ಯಕತೆ ಉಂಟಾಯಿತು. ಮನುಷ್ಯನ ಸಂಸ್ಕೃತಿ ಬೆಳೆದಂತೆ ಭಾಷೆಯನ್ನು ಕಂಡುಕೊಂಡನು. ಜೊತೆಗೆ ಒಂದುಕಡೆ ಬೀಡುಬಿಟ್ಟು ಮನೆ, ಆಸ್ತಿ, ಬದುಕನ್ನು ಕಟ್ಟಿಕೊಂಡದ್ದೇ 'ಹಳ್ಳಿ'ಗಳ ಉಗಮಕ್ಕೆ ನಾಂದಿಯಾಯಿತು. ತಾನು ವಾಸಿಸಿರುವ ಈ ಹಳ್ಳಿಗಳನ್ನು ಗುರುತಿಸಲು ಒಂದು ಹೆಸರು ಬೇಕಲ್ಲವೇ? ಹಾಗಾಗಿ ಮಾನವ ಹಳ್ಳಿಗೆ ಒಂದಲ್ಲಾ ಒಂದು ಹೆಸರು ಇಡುವುದನ್ನು ರೂಢಿಸಿಕೊಂಡನು. ಗಿಡ–ಮರ, ಕಲ್ಲು–ಬಂಡೆ, ನದಿ, ಬೆಟ್ಟ, ಪರ್ವತ, ತಗ್ಗು–ದಿನ್ನೆ ಹೀಗೆ ತಾನಿರುವ ಪ್ರದೇಶಕ್ಕೆ, ತಾನು ವಾಸಿಸುವ ಸ್ಥಳಗಳಿಗೆ ಭೌಗೋಳಿಕ, ಸ್ವರೂಪ, ಲಕ್ಷಣಗಳ ಆಧಾರದ ಮೇಲೆ ಗ್ರಾಮಗಳ ಹೆಸರುಗಳನ್ನು ಕರೆಯುತ್ತಿದ್ದನು. ಭೌಗೋಳಿಕ ಕಾರಣಗಳ ಜೊತೆಗೆ ಪುರಾಣಾತ್ಮಕ, ಐತಿಹಾಸಿಕ, ವ್ಯಕ್ತಿಗತ, ಕಸುಬಿನ ಆಧಾರದ ಮೇಲೆ, ಜಾತಿ–ಜನಾಂಗ, ಪ್ರಾಣಿ, ಪಶು–ಪಕ್ಷಿಗಳ ಆಧಾರದ ಮೇಲೆಯೂ ಸ್ಥಳಗಳಿಗೆ ಹೆಸರು ಇಡುವುದನ್ನು ಕಲಿತನು.

ದೇಶದ ಬಹುತೇಕ ಗ್ರಾಮನಾಮಗಳ ಅಂತ್ಯದಲ್ಲಿ ಹಳ್ಳಿ, ಪಳ್ಳಿ, ಕೆರೆ, ಗೆರೆ, ಪುರ, ವಾಡಿ, ಪಾಡಿ, ಊರು, ಗ್ರಾಮ, ಹುಂಡಿ, ದಿನ್ನೆ, ಗುಡ್ಡ, ಕಲ್ಲು, ಗಿರಿ, ತಾಣ, ಹಟ್ಟಿ, ಪೇಟೆ, ನಗರ, ದಿಬ್ಬ, ಗುಂಡಿ, ನಾಳ, ಹಾಳ ಹೀಗೆ ನಾನಾ ರೀತಿಯಲ್ಲಿ ಸ್ಥಳನಾಮಗಳ ಹೆಸರುಗಳು ಕೊನೆಗೊಳ್ಳುತ್ತವೆ. ಅವುಗಳಲ್ಲಿ ಅಂತ್ಯಗೊಂಡ ಬಹುತೇಕ ಪದಗಳು ಊರು ಅಥವಾ ಗ್ರಾಮ ಎಂಬ ಅರ್ಥವನ್ನೇ ಕೊಡುತ್ತವೆ. ಹೀಗಾಗಿ ಕೊನೆಗೆ ಇಂತಹ ಪದಗಳ ಬಳಕೆ ಮಾಡಿರಬಹುದು.

ಸ್ಥಳನಾಮಗಳ ಕುರಿತು ಹೆಚ್ಚಿನ ಅಧ್ಯಯನಗಳು ನಡೆದಿಲ್ಲ ಎಂದೇ ಹೇಳಬಹುದು. ಸಂಶೋಧನೆಗೆ ಪಾಶ್ಚಾತ್ಯರ ಕೊಡುಗೆ ಹೇಗೆ ಅಪಾರವಾಗಿದೆಯೋ, ಸ್ಥಳನಾಮಗಳ ಅಧ್ಯಯನಕ್ಕೂ ಸಹ ಅವರ ಕೊಡುಗೆ ಅಪಾರ ಎಂಬುದನ್ನು ನಾವು ಮರೆಯುವಂತಿಲ್ಲ. ಲ್ಯಾಂಬರ್ಟ್, ಮೇರಿಯಾ ಪೈ, ಇಕ್ವಾಲ್ ಇಲೆರ್ಟ್, ಜೆ.ಜೆ.ಯಗ್ಲಿ, ಸ್ಕೀಟ್, ಸ್ಟೂಟನ್ ಡೌಜನ್, ಆಟ್ಲೆ, ನೋರಿನ್ ಮುಂತಾದವರು ಸ್ಥಳನಾಮಗಳ ಕುರಿತು ಅಧ್ಯಯನ ಮಾಡಿದ್ದಾರೆ.

ಭಾರತದಲ್ಲಿಯೂ ಸಹ ಸ್ಥಳನಾಮಗಳ ಕುರಿತು ಅಧ್ಯಯನ ಮಾಡಿದ ಅನೇಕ ವಿದ್ವಾಂಸರಿದ್ದಾರೆ. ಅಪ್ಪಯ್ಯ ದೀಕ್ಷಿತ್, ಎಸ್.ಕೆ.ಚಟರ್ಜಿ, ಎಚ್.ಬಾಲಲೋಚನ, ಹೀರಾಲಾಲ್

ಹೆಚ್.ಡಿ, ಕೆ.ಪಿ.ಪದ್ಮನಾಭ ಮೆನನ್, ಎನ್.ಕೆ.ಬೋಸ್, ರಾಮಚಂದ್ರ ಚೆಟ್ಟಿಯಾರ್, ಎಸ್.ಎಸ್. ರಾಮಚಂದ್ರಮೂರ್ತಿ ಮುಂತಾದವರು ಅಧ್ಯಯನ ಮಾಡಿದ್ದಾರೆ. ಅದೇ ರೀತಿಯಾಗಿ ಕರ್ನಾಟಕದಲ್ಲಿಯೂ ಸಹ ಅನೇಕ ವಿದ್ವಾಂಸರು ಅನೇಕ ಸ್ಥಳನಾಮಗಳ ಕುರಿತು ವಿವಿಧ ರೀತಿಯಲ್ಲಿ ಅಧ್ಯಯನ ಮಾಡಿದ್ದಾರೆ. ಸಿ.ಹಯವದನರಾವ್, ಶಂಬಾ ಜೋಷಿ, ಆರ್.ಸಿ. ಹಿರೇಮಠ, ಕೆಮ್ಮೂರು ರಘುನಾಥ ಭಟ್ಟ, ದೇ.ಜವರೇಗೌಡ, ವಿ.ಗೋಪಾಲಕೃಷ್ಣ, ಬೆ.ಗೋ.ರಮೇಶ, ವಿಶ್ವನಾಥ, ಎಂ.ಚಿದಾನಂದಮೂರ್ತಿ, ಎಂ.ಎಂ.ಕಲಬುರ್ಗಿ, ಕೆ.ಆರ್.ಮೋಹನ್, ಬಿ.ಎನ್.ಚಂದ್ರಯ್ಯ ಹೀಗೆ ಮುಂತಾದವರು ಸ್ಥಳನಾಮಗಳ ಅಧ್ಯಯನ ಮಾಡಿದವರ ಸಾಲಿನಲ್ಲಿದ್ದಾರೆ. ಆದರೆ ಕೊಪ್ಪಳ ಸ್ಥಳನಾಮದ ಕುರಿತು ಅಧ್ಯಯನ ಮಾಡಿದವರ ಸಂಖ್ಯೆ ತೀರಾ ಕಡಿಮೆ ಎಂದು ಹೇಳಬಹುದು. ನಾ.ಭಾ.ಶಾಸ್ತ್ರಿಗಳು, ಬಿ.ಸಿ.ಪಾಟೀಲ, ಷ.ಶೆಟ್ಟರ್, ಡಾ.ಬಿ.ರಾಜಶೇಖರಪ್ಪ, ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್ ಹೀಗೆ ಕೆಲವೇ ಕೆಲವರು ಮಾತ್ರ ಕೊಪ್ಪಳ ಸ್ಥಳನಾಮದ ಕುರಿತು ಅಧ್ಯಯನ ಮಾಡಿದ್ದಾರೆ.

ಕೊಪ್ಪಳದ ಚರಿತ್ರೆ ಬಹು ಪುರಾತನವಾದುದು. ಕ್ರಿ.ಪೂ. ಸುಮಾರು 5000ಕ್ಕೂ ಮೊದಲಿನ ಅವಶೇಷಗಳು ಇಲ್ಲಿ ಲಭ್ಯವಾಗಿವೆ. ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳಲ್ಲಿಯೂ ಸಹ ಈ ಪರಿಸರದ ಬಗ್ಗೆ ಉಲ್ಲೇಖವಿರುವುದರಿಂದ, ಈ ಪ್ರದೇಶದ ಇತಿಹಾಸದ ಕಾಲ ಬಹುದೂರ ಹಿಂದೆ ಸರಿಯುತ್ತದೆ. ಕ್ರಿ.ಪೂ. ಸುಮಾರು 3–2ನೇ ಶತಮಾನದಲ್ಲಿನ ಅಶೋಕನ ಶಾಸನಗಳೇ ಕೊಪ್ಪಳದ ಇತಿಹಾಸದ ಮೊದಲ ಅಧಿಕೃತ ಲಿಖಿತ ದಾಖಲೆಗಳು ಎಂದು ಹೇಳಬಹುದು. ಕ್ರಿ.ಪೂ. ಕಾಲದಲ್ಲಿಯಾಗಲಿ ಅಥವಾ ನಂತರದ ಅಶೋಕನ ಶಾಸನಗಳಲ್ಲಾಗಲಿ ಲಭ್ಯವಾದ ದಾಖಲೆಗಳಲ್ಲಿ ಕೊಪ್ಪಳ ಸ್ಥಳನಾಮದ ಬಗ್ಗೆ ಉಲ್ಲೇಖವಿರುವುದಿಲ್ಲ.

**ತಪ್ಪಲು:–**

ಕೊಪ್ಪಳದ ಹಿರಿಯ ಸಂಶೋಧಕರಾಗಿದ್ದ ದಿ॥ ಶ್ರೀ ಬಿ.ಸಿ.ಪಾಟೀಲರು ಕೊಪ್ಪಳಕ್ಕೆ ಮೊದಲು 'ತಪ್ಪಲು' ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು ಎಂದಿದ್ದಾರೆ. ನಂತರ ಅದು 'ಕೊಪ್ಪಳ' ಆಗಿದೆ ಎಂದು ಉದಾಹರಿಸಿದ್ದಾರೆ. "ಆದಿ ಮಾನವನು ತಪ್ಪಲ ಪ್ರದೇಶಗಳಲ್ಲಿ ವಾಸ ಮಾಡುತ್ತಿದ್ದುದರಿಂದ ಸಹಜವಾಗಿಯೇ ತಾನಿರುವ ಪ್ರದೇಶಕ್ಕೆ ತಪ್ಪಲು ಎಂದು ಕರೆದಿರುವ ಸಾಧ್ಯತೆಯಿದೆ" ಎಂಬುದು ಅವರ ಅಭಿಪ್ರಾಯವಾಗಿದೆ. ಇಲ್ಲಿ ಬಿ.ಸಿ.ಪಾಟೀಲರ ಅಭಿಪ್ರಾಯದಲ್ಲಿ ಜನಸಾಮಾನ್ಯರ ಬಾಯಲ್ಲಿ 'ತಪ್ಪಲು' ಎಂಬ ನಾಮವು 'ಕೊಪ್ಪಳ' ಆಗಿ

ಪರಿವರ್ತನೆಯಾಗಿರಬಹುದೇ? ಯಾಕೆಂದರೆ 'ಲ' ಅಂತ್ಯಾಕ್ಷರವು 'ಳ'ಕಾರವಾಗಿ ಅನೇಕ ಪದಪ್ರಯೋಗ ಸಂದರ್ಭದಲ್ಲಿ ಕಂಡುಬರುತ್ತದೆ. ಉದಾಹರಣೆಗೆ ನೋಡುವುದಾದರೆ, ಸ್ಥಲ>ಸ್ಥಳ, ಫಲ>ಫಳ, ಕಲೆ>ಕಳೆ, ಕಮಲ>ಕಮಳ ಹೀಗೆ ಅನೇಕ ಪದಗಳನ್ನು ನೋಡಬಹುದಾಗಿದೆ. ಈ ಪದಗಳ ಅಂತ್ಯಾಕ್ಷರಗಳ ಬದಲಾವಣೆಗಳನ್ನು ಗಮನಿಸಿದಾಗ 'ಲ' ಅಂತ್ಯಾಕ್ಷರವು 'ಳ'ಕಾರವಾಗಿ ಬದಲಾಣೆಯಾಗಿರುವಂತೆ 'ತಪ್ಪಲ'ವು>'ಕೊಪ್ಪಳ'ವಾಗಿ ಬದಲಾವಣೆ ಆಗಿರುವಂತೆ ಬಿ.ಸಿ.ಪಾಟೀಲರ ಅಭಿಪ್ರಾಯವನ್ನು ಒಪ್ಪಬಹುದೇ? ಇದು ಎಷ್ಟು ಸೂಕ್ತ ಎಂಬ ಪ್ರಶ್ನೆ ಮೂಡುತ್ತದೆ. ಇಲ್ಲಿ ಶ್ರೀ ಬಿ.ಸಿ.ಪಾಟೀಲರು ಕೊನೆಗೆ ಉತ್ತರ ತಂದಿಟ್ಟಂತೆ ಕಾಣುತ್ತದೆ. 'ತಪ್ಪಲ'ದಿಂದ 'ಕೊಪ್ಪಳ' ಎಂಬ ಸಿದ್ಧಉತ್ತರ ಕಂಡರೂ ಮಧ್ಯದಲ್ಲಿ ಕೊಪ್ಪಳದ ಯಾವುದೇ ನಾಮಗಳ ಬಗ್ಗೆಯಾಗಲಿ ಅಥವಾ ಬದಲಾವಣೆಯಾಗಲಿ ಶ್ರೀ ಬಿ.ಸಿ.ಪಾಟೀಲರು ಚರ್ಚಿಸಿಲ್ಲ. ತಪ್ಪಲದಿಂದ>ಕುಪಣ>ಕೊಪಣ ಇತ್ಯಾದಿ ಇಂತಹ ಯಾವುದೇ ಬದಲಾವಣೆಗಳನ್ನು ಚರ್ಚಿಸದೇ ಕೊನೆಯ ಸಿದ್ಧ (ಕೊಪ್ಪಳ) ಉತ್ತರವನ್ನಷ್ಟೇ ತಂದಿಟ್ಟರೆ ಅದನ್ನು ಒಪ್ಪಲಾಗದು. ಕೇವಲ ಅಕ್ಷರಗಳ ಬದಲಾವಣೆ ಅಥವಾ ಸ್ಥಾನಪಲ್ಲಟವಾದ ಅಂಶಗಳಿಂದ ಒಂದು ಗ್ರಾಮದ ನಾಮವನ್ನು ಅಳೆಯುವುದು ಅಷ್ಟು ಸೂಕ್ತವೆನಿಸುವುದಿಲ್ಲ. ಅಲ್ಲಿನ ಪುರಾತತ್ವ, ಇತಿಹಾಸ, ಪ್ರಕೃತಿ, ನೈಸರ್ಗಿಕ ಮುಂತಾದ ಅಂಶಗಳ ಆಧಾರದ ಮೇಲೆಯೇ ಅಧ್ಯಯನ ಮಾಡಿದಾಗ ಮಾತ್ರ ಅದರ ನಾಮದ ಬಗ್ಗೆ ಸಂಪೂರ್ಣ ಹಿನ್ನೆಲೆ, ಚರಿತ್ರೆ ಮತ್ತು ಮಾಹಿತಿ ತಿಳಿದುಬರುತ್ತದೆ.

**ಕುಪಣ:–**

'ಕೊಪ್ಪಳದ ಹೆಸರು ಅಧಿಕೃತವಾಗಿ ಕ್ರಿ.ಶ. 4ನೇ ಶತಮಾನದ ಚಿತ್ರದುರ್ಗದ ಚಂದ್ರವಳ್ಳಿ ಶಾಸನದಲ್ಲಿ 'ಕುಪಣದ ಚಮ' ಎಂಬ ಹೆಸರು ಉಲ್ಲೇಖವಿರುವುದನ್ನು ಡಾ. ಬಿ.ರಾಜಶೇಖರಪ್ಪನವರು ಪ್ರಸ್ತಾಪಿಸಿದ್ದಾರೆ. ಈ ಶಾಸನದ ಭಾಷೆ ಸಂಸ್ಕೃತವಾಗಿದ್ದರೂ ಅಲ್ಲಲ್ಲಿ ಕನ್ನಡ ಪದಗಳ ಬಳಕೆಯಿದೆ. ಇಲ್ಲಿ ಉಲ್ಲೇಖಿತ 'ಕುಪಣದ ಚಮ'ನು ಕೊಪ್ಪಳದವನಾಗಿರಬೇಕು ಎಂಬುದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಅಭಿಪ್ರಾಯವನ್ನು ಒಪ್ಪುವುದಾದರೆ ಕೊಪ್ಪಳಕ್ಕೆ ಕ್ರಿ.ಶ. 4ನೇ ಶತಮಾನದಲ್ಲಿ 'ಕುಪಣ' ಎಂದು ಕರೆಯಲಾಗುತ್ತಿತ್ತು ಎಂದಂತಾಗುತ್ತದೆ. ಇದನ್ನು ಬಹುತೇಕ ವಿದ್ವಾಂಸರು ಒಪ್ಪಿರುವ ಶೋಧವಾಗಿದೆ.

ಮೊದಲು 'ಕುಪಣ' ಎಂಬ ಉಲ್ಲೇಖದ ಬಗ್ಗೆ ಚರ್ಚಿಸುವುದಾದರೆ; ಇತಿಹಾಸಕಾರರು, ಸಂಶೋಧಕರು, ಜನಪದರು, ಜನಸಾಮಾನ್ಯರು ಹೆಚ್ಚು ಒಪ್ಪಿದಂತೆ ಇಲ್ಲಿ 'ಕುಪಣ' ಎಂಬ ಒಬ್ಬ ಮುನಿ ಇದ್ದನಂತೆ. ಅವನ ಹೆಸರಿನ ಮೇಲೆಯೇ ಈ ಗ್ರಾಮ ಕರೆಸಿಕೊಳ್ಳುತ್ತಿತ್ತು ಎಂದು ಅಭಿಪ್ರಾಯಪಟ್ಟಿದ್ದಾರೆ. ಅದಕ್ಕೆ ನಿದರ್ಶನ ಎಂಬುವಂತೆ ಸಂಶೋಧಕರಾದ ಷ.ಶೆಟ್ಟರರವರು ಇಲ್ಲಿ ಮೂರು ಜನ 'ಕುಪಣ' ಎಂಬ ಭಿಖ್ಖುಗಳಿದ್ದರು ಎಂದು ದಿನಾಂಕ: 02–02–2020ರ ಪ್ರಜಾವಾಣಿ ಪತ್ರಿಕೆಯಲ್ಲಿ 'ಕುಪಣ ಎಂಬೋ ಕೊಪ್ಪಳ' ಎನ್ನುವ ಲೇಖನದಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಒಬ್ಬ ಪುಘಹನಿಯೊಂದನ್ನು ದಾನಮಾಡಿದ ಕುಪನನೆಂಬುವನು ತಾನೊಬ್ಬ ಉಪಾಸಕನೆಂದು ಗುರುತಿಸಿಕೊಂಡಿರುವನು. ಈತನು ಬುದ್ಧನ ಅನುಯಾಯಿಯಾದ ಒಬ್ಬ ಗೃಹಸ್ಥನೆಂದು ತಾನು ಹುಟ್ಟಿದ ಸ್ಥಳನಾಮದಿಂದ ಗುರುತಿಸಿಕೊಂಡಿದ್ದನೆಂದು ಅರ್ಥೈಸಬಹುದು (ಸಂ–22).

ಎರಡು ಪುಘಗಹನಿಗಳನ್ನು ದಾನಮಾಡಿದ ಇನ್ನೊಬ್ಬ ಕುಪನನು ಖಜನಕರ ಪದದೊಡನೆ ತಾನು ಬರೆಸಿದ ಎರಡೂ ಶಾಸನಗಳಲ್ಲಿ ಗುರುತಿಸಿಕೊಂಡಿರುವನು. ಖಜನಾಕರಸ ಮಹಿಸಕಸ ಕುಪನನ ದಾನ ಎಂಬುದು ಪೂರ್ಣಪಠ್ಯ. ಮಹಿಸಕದ ಖಜನಾಕರರ ನಿವಾಸಿಯಾದ ಕುಪನ ಮತ್ತು ಮಹಿಸಕದ ಖಜನಕಾರ ಕುಪನ ಎಂದು ಎರಡೂ ಬಗೆಯಲ್ಲಿ ಇದನ್ನು ಅರ್ಥೈಸಬಹುದು. ಎರಡನೆಯದನ್ನು ಕುಪನನು ಖಜನಕಾರ (ಭಂಡಾರಿ ಅಥವಾ ಖಜಾನೆಯ ಅಧಿಕಾರಿ) ಎಂದು ಅರ್ಥಮಾಡಬಹುದು. ಈತನು ಸ್ಥಳನಾಮದಿಂದ ಗುರುತಿಸಿಕೊಂಡದ್ದು ಮತ್ತು ಈ ಸ್ಥಳವು ಖಜಾನೆಯ ಕೇಂದ್ರವಾಗಿದ್ದು ಇಲ್ಲಿ ಸ್ಪಷ್ಟವಾಗಿದೆ (ಸಂ–24–25).

ಇನ್ನೊಬ್ಬ ಕುಪನನ ಉಲ್ಲೇಖವು ಒಂದು ತೃಟಿತ ಶಾಸನದಲ್ಲಿ ಕಾಣಿಸಿಕೊಂಡಿದ್ದು. ಕುಪನ ರಠಕಸಅಯ ಎಂಬ ಪಾಠವನ್ನು ಹೊಂದಿದೆ. ದಾನಿಯಾದರೂ ಈತನು ಕೊಟ್ಟ ದಾನವಾವುದೆಂಬುದು ಸ್ಪಷ್ಟವಾಗುತ್ತಿಲ್ಲ. ಅಲ್ಲದೆ ತನ್ನ ಹೆಸರನ್ನು ತಿಳಿಸದೆ ಆಯ (ಆರ್ಯ)ನೆಂದು ಕರೆದುಕೊಂಡಿರುವ ಈತನು ಗೃಹಸ್ಥನಾಗಿರಲಿಲ್ಲ, ಭಿಖ್ಖುವಾಗಿದ್ದನು ಎನ್ನಬಹುದು. ಗೌರವಯೋಗ್ಯ ಅಥವಾ ಪೂಜಾರ್ಹ ಎಂಬುದು ಆಯಾ ಪದದ ಅರ್ಥ. ಈ ಭಿಖ್ಖು ತನ್ನ (ಪೂರ್ವಾಶ್ರಮದಲ್ಲಿ) ಕುಪನರಠಿಕ, ಅಂದರೆ ಕುಪನ ರಾಷ್ಟ್ರದವನಾಗಿರುವ ಸಾಧ್ಯತೆ ಇದೆ ಎಂದು ಮೇಲಿನ ಲೇಖನದಲ್ಲಿ ಷ.ಶೆಟ್ಟರ್ ಅವರು ಕೊಪ್ಪಳದ 'ಕುಪಣ' ಅಥವಾ 'ಕುಪನ'ನ ಉಲ್ಲೇಖದ ಬಗ್ಗೆ ವಿವರಿಸಿದ್ದಾರೆ. ಹೀಗೆ ಶ್ರೀ

ಶೆಟ್ಟರ್‌ರವರು ಮೂರು 'ಕುಪಣ' ಮುನಿಗಳ ಬಗ್ಗೆ ಉಲ್ಲೇಖಿಸಿದ್ದಾರೆ. ಆದರೆ ಷ.ಶೆಟ್ಟರ್‌ರವರು ಈ ಮೇಲಿನ ಲೇಖನದಲ್ಲಿ ಉಲ್ಲೇಖಿಸಿದ ಶಾಸನಗಳ ಸಂಖ್ಯೆ 22, 24, 25 ಇವು ಯಾವುವೆಂಬುದೇ ತಿಳಿಸಿರುವುದಿಲ್ಲ. ಅವುಗಳ ಕಾಲ, ಭಾಷೆ, ಶಾಸನ ಲಭ್ಯವಾದ ಸ್ಥಳ ಯಾವುದನ್ನೂ ಇಲ್ಲಿ ಉಲ್ಲೇಖಿಸಿರುವುದಿಲ್ಲ. ಇದು ಸ್ವಲ್ಪ ಗೊಂದಲವನ್ನು ಉಂಟುಮಾಡುತ್ತದೆ.

ಇದಕ್ಕೆ ಪ್ರತಿಕ್ರಿಯೆ ಎಂಬಂತೆ ಡಾ.ಬಿ.ರಾಜಶೇಖರಪ್ಪನವರು ದಿನಾಂಕ: 09-02-2020 ಪ್ರಜಾವಾಣಿಯಲ್ಲಿ 'ಊಹೆಯ ಮುಸುಕಿನಲ್ಲಿ' ಎಂದು ಬರೆಯುತ್ತಾ, ಷ.ಶೆಟ್ಟರ್‌ರವರ ಲೇಖನಕ್ಕೆ ಪ್ರತಿಕ್ರಿಯೆ ಬರೆದಿದ್ದು, ಶೆಟ್ಟರ್‌ವರು ಉಲ್ಲೇಖಿಸಿದ ಶಾಸನಗಳು ಯಾವು? ಆ ದಾನದ ಶಾಸನಗಳು ಯಾವು? ಕಾಲ ಮತ್ತು ಸ್ಥಳದ ಉಲ್ಲೇಖವಿಲ್ಲ ಎಂದಿದ್ದಾರೆ. ಕುಪಣ ಖಜಾನಾಧಿಕಾರಿ ಎಂಬುದು ಊಹೆಯಾಗಿದ್ದು, ಪ್ರಾಕೃತದ 'ಖಜಾನಾ' ಎಂಬುದು ಅರೇಬಿಕ್, ಫರ್ಷಿಯನ್ ಮೂಲದ 'ಖಜಾನಾ' ಎಂಬ ಶಬ್ದವನ್ನು ಹೋಲುವುದರಿಂದ ಅವರು ಅದಕ್ಕೆ ಖಜಾನೆ ಎಂದು ಅರ್ಥ ಮಾಡಿಕೊಂಡಿರುವ ಸಾಧ್ಯತೆ ಕಾಣುತ್ತದೆ. ಆ ಶಬ್ದದ ಅರ್ಥ ಇನ್ನೂ ತಿಳಿಯಬೇಕಾಗಿದೆ. ಆ ಅರ್ಥದ ಶಬ್ದ ಪ್ರಾಕೃತ ಶಬ್ದಕೋಶದಲ್ಲಿ ಇಲ್ಲ ಎಂಬುದನ್ನು ಅವರು ಎದ್ದು ಕಾಣದಂತೆ ಊಹೆಯ ಮುಸಿಕಿನಲ್ಲಿ ಮರೆ ಮಾಡಿದ್ದಾರೆ ಎಂದು ಪ್ರತಿಕ್ರಿಯಿಸಿದ್ದಾರೆ. ಹೀಗಾಗಿ ಷ.ಶೆಟ್ಟರ್‌ರವರು ಉಲ್ಲೇಖಿಸಿದ ಆ ಮೂರು 'ಕುಪಣ' ಮುನಿವರಿಯರು ಯಾರು ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ ಎಂದು ಡಾ.ಬಿ.ರಾಜಶೇಖರಪ್ಪನವರು ಪ್ರಶ್ನಿಸಿದ್ದಾರೆ.

ಹಾಗಾದರೆ ಆ ಮೂರು 'ಕುಪಣ' ಮುನಿಗಳು ಯಾರು ಎಂಬ ವಿಷಯದ ಮೇಲೆ ನಾನು ಅಧ್ಯಯನ ಮಾಡಿದಾಗ ದೊರೆತ ಸಾಕ್ಷಿಗಳೇ ಕಲಬುರ್ಗಿ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ 'ಕನಗನಹಳ್ಳಿ'ಯ ಪ್ರಾಕೃತ ಭಾಷೆಯ ಶಾಸನಗಳು. (ಈ ಕುರಿತು ಅಧ್ಯಯನಗಳು ಈಗಾಗಲೇ ನಡೆದಿವೆ) ಈ ಗ್ರಾಮದಲ್ಲಿ ಸುಮಾರು 200ಕ್ಕೂ ಅಧಿಕ ಶಾಸನಗಳು ಲಭ್ಯವಾಗಿದ್ದು, ಅವು ಬೇರೆ-ಬೇರೆ ಭಾಷೆಗಳ ಶಾಸನಗಳಾಗಿವೆ. ಅಲ್ಲದೆ ಅನೇಕ ಮೂರ್ತಿ-ಶಿಲ್ಪಗಳು, ಸ್ತೂಪಗಳು ದೊರಕಿವೆ. ಪ್ರಾಚೀನ ಕಾಲದಲ್ಲಿ ಈ ಗ್ರಾಮವು ದಕ್ಷಿಣದ ಪ್ರಸಿದ್ಧ ಬೌದ್ಧ ಕೇಂದ್ರವಾಗಿತ್ತು ಎಂದು ಇತಿಹಾಸದಿಂದ ತಿಳಿದುಬರುತ್ತದೆ. ಇಲ್ಲಿ ಬುದ್ಧನ ಅನೇಕ ಮೂರ್ತಿ-ಶಿಲ್ಪಗಳು, ಅಶೋಕನ ಶಿಲ್ಪಗಳು ಲಭ್ಯವಾಗಿವೆ. ಹೀಗಾಗಿ ಈ ಕನಗನಹಳ್ಳಿ ಗ್ರಾಮವು ಪ್ರಾಚೀನ ಕಾಲದಲ್ಲಿ ಬೌದ್ಧಧರ್ಮದ ಬಹುದೊಡ್ಡ ಶ್ರದ್ಧಾ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಈ ಗ್ರಾಮಗಳ ಶಾಸನಗಳಲ್ಲಿ ಉಲ್ಲೇಖಿತ 'ಕುಪಣ' ಮುನಿಯೇ ಕೊಪ್ಪಳದವನಾಗಿರಬೇಕೆಂದು ಸಂಶೋಧಕರ ಅಭಿಪ್ರಾಯವಾಗಿದೆ. 'ಕುಪಣ'

ಎಂಬ ಮುನಿಯ ಉಲ್ಲೇಖ ಕನಗನಹಳ್ಳಿಯ ಪ್ರಾಕೃತ ಭಾಷೆಯ ಶಾಸನಗಳಲ್ಲಿ ಕಂಡುಬಂದಿರುವುದರಿಂದ ಷ.ಶೆಟ್ಟರ್‌ರವರು ಈ ಶಾಸನಗಳ ಆಧಾರದ ಮೇಲೆಯೇ 'ಕುಪಣ ಎಂಬೋ ಕೊಪ್ಪಳ' ಎಂಬ ಲೇಖನ ಬರೆದಿದ್ದರೂ ಅವುಗಳ ಕಾಲ, ಭಾಷೆ, ಸ್ಥಳಗಳನ್ನು ಸ್ಪಷ್ಟವಾಗಿ ಹೇಳದಿರುವುದೇ ತುಸು ಗೊಂದಲಕ್ಕೆ ಕಾರಣವಾಯಿತು ಎನ್ನಬಹುದು. ಹೀಗಾಗಿ ಪ್ರಾಚೀನ ಕಾಲದಲ್ಲಿ ಈ 'ಕುಪಣ' ಎಂಬ ಮುನಿಯ ಹೆಸರಿನ ಮೇಲೆಯೇ ಈ 'ಕೊಪ್ಪಳ' ಸ್ಥಳನಾಮ ಗುರುತಿಸಿಕೊಂಡಿರಬೇಕು ಎನ್ನುವುದು ಬಹುತೇಕ ಸಂಶೋಧಕರು ಒಪ್ಪಿರುವ ಸಂಗತಿಯಾಗಿದೆ.

ಪ್ರಾಕೃತ ಭಾಷೆಯ ಶಾಸನಗಳನ್ನು ಮೌರ್ಯರು ಮತ್ತು ಶಾತವಾಹನರ ಕಾಲದಲ್ಲಿ ಮಾತ್ರ ಕೊರೆಸಲಾಗಿದೆ. ಮೌರ್ಯರು ಕ್ರಿ.ಪೂ 3ರಿಂದ 1ನೇ ಶತಮಾನದವರೆಗೆ ಮತ್ತು ಶಾತವಾಹನರು ಕ್ರಿ.ಪೂ 1ರಿಂದ ಕ್ರಿ.ಶ 2ನೇ ಶತಮಾನದವರೆಗೆ ಆಡಳಿತ ನಡೆಸಿದ್ದಾರೆ. ಹೀಗಾಗಿ ಈ ಶಾಸನಗಳು ಕ್ರಿ.ಪೂ 3ರಿಂದ ಕ್ರಿ.ಶ 2ರ ಮಧ್ಯದಲ್ಲಿ ರಚಿಸಿದವುಗಳಾಗಿರಬೇಕು. ಮತ್ತು ಆ ಕುಪಣ ಮುನಿಯು ಬೌದ್ಧಧರ್ಮದ ಅನುಯಾಯಿಯಾಗಿದ್ದನು ಎಂಬ ಮಾತಿನ ಮೇಲೆ ಚರ್ಚಿಸುವುದಾದರೆ ಆ ಶಾಸನಗಳನ್ನು ಮೌರ್ಯರೇ ಕೆತ್ತಿಸಿದ ಶಾಸನಗಳೇ ಆಗಿರಬೇಕು. ಯಾಕೆಂದರೆ ಮೌರ್ಯರು ಬೌದ್ಧಧರ್ಮದ ಕಟ್ಟಾ ಅನುಯಾಯಿಗಳಾಗಿದ್ದರು ಮತ್ತು ಆ ಮನೆತನದಲ್ಲಿನ ಸಾಮ್ರಾಟ ಅಶೋಕನು ಕಳಿಂಗ ಯುದ್ಧದ ನಂತರ ಅವನ ಧರ್ಮ ಪ್ರಚಾರದ ಬಗ್ಗೆ ಎಲ್ಲರಿಗೂ ತಿಳಿದಿರುವ ಸಂಗತಿಯಾಗಿದೆ. ಹೀಗಾಗಿ ಬೌದ್ಧಧರ್ಮ ಎಂದಕೂಡಲೇ ಮೌರ್ಯರು ಮತ್ತು ಅಶೋಕನೇ ನೆನಪಿಗೆ ಬರುತ್ತಾನೆ. ಹೀಗಾಗಿ ಅಶೋಕನೇ ಈ 'ಕುಪಣ'ನ ಶಾಸನಗಳನ್ನು ಬರೆಸಿರಬಹುದೇ ಎಂಬ ಅನುಮಾನ ಮೂಡುತ್ತದೆ. ಹಾಗಾಗಿದ್ದರೆ ಕನಗನಹಳ್ಳಿಯಲ್ಲಿ ಉಲ್ಲೇಖಿತ ಕುಪಣ ಮುನಿಯು ಕ್ರಿ.ಪೂ. 3ರಿಂದ 1ನೇ ಶತಮಾನದಲ್ಲಿ ಇದ್ದಿರಬೇಕು, ಇಲ್ಲವೇ ಈ ಮೊದಲೇ ಇದ್ದಿರಬೇಕು ಎಂಬ ಸಂಗತಿ ತಿಳಿದುಬರುತ್ತದೆ. ಬಹಳ ಮುಖ್ಯವಾಗಿ ಪ್ರಾಚೀನ ಕಾಲದ ಕನಗನಹಳ್ಳಿ ಮತ್ತು ಕೊಪ್ಪಳಕ್ಕೂ ಯಾವುದೋ ರೀತಿಯಲ್ಲಿ ಅವಿನಾಭಾವ ಸಂಬಂಧವಿದ್ದ ಬಗ್ಗೆ ತಿಳಿದುಬರುತ್ತದೆ. ಬಹುಶಃ ಆ ವಿಷಯದ ಮೇಲೆ ಅಧ್ಯಯನ ಮಾಡಿದಾಗ ಕುಪಣ ಮುನಿಯು ಬೌದ್ಧ ಧರ್ಮದ ಮುನಿಯಾಗಿರುವುದರಿಂದ ಕುಪಣ, ಇಂದಿನ ಕೊಪ್ಪಳ, ಬೌದ್ಧದರ್ಮ ಮತ್ತು ಕನಗನಹಳ್ಳಿ ಸಂಬಂಧಗಳು ಆ ಕಾಲದಲ್ಲೇ ಗಟ್ಟಿಯಾಗಿದ್ದಿರಬೇಕು ಎಂದೆನಿಸುತ್ತದೆ. ಹೀಗಾಗಿಯೇ ಕನಗನಹಳ್ಳಿ ಶಾಸನಗಳಲ್ಲಿ ಇಂದಿನ ಕೊಪ್ಪಳ ಪ್ರಾಚೀನ ಕಾಲದ ಕುಪಣದ 'ಕುಪಣ' ಮುನಿಯ ಹೆಸರು ಉಲ್ಲೇಖವಾಗಿರಬಹುದು ಎನಿಸುತ್ತದೆ. ಇಲ್ಲಿಯೂ ಸಹ

'ಕುಪಣ' ಎಂಬ ನಾಮವು 'ಕೊಪ್ಪಳ' ಆಗಿ ಪರಿವರ್ತನೆಯಾಗಿರಲು ಸಾಧ್ಯವಿದೆ. 'ಣ' ಅಂತ್ಯಾಕ್ಷರವು 'ಳ'ಕಾರವಾಗಿ ಅನೇಕ ಸಂದರ್ಭದಲ್ಲಿ ಬದಲಾವಣೆಗೊಂಡಿದ್ದನ್ನು ನಾವು ಕಾಣುತ್ತೇವೆ. ಉದಾಹರಣೆಗೆ ನೋಡುವುದಾದರೆ, ಮಣ್ಣು>ಮರಳು, ಕಣಿ>ಕುಳಿ, ಬಣಗ>ಬಳಗ ಇತ್ಯಾದಿಗಳನ್ನು ಕಾಣಬಹುದಾಗಿದೆ. ಹೀಗಾಗಿ 'ಕುಪಣ'ವು 'ಕುಪಳ'ವಾಗಿಯೊ ನಿಷ್ಪತ್ತಿಗೊಂಡು 'ಕೊಪ್ಪಳ'ವಾಗಿ ವಿಸ್ತಾರಗೊಂಡಿರಬೇಕು. ಎಂದೆನಿಸುತ್ತದೆ.

ಮೌರ್ಯರ ಕಾಲದಲ್ಲಿ ಮಹಾರಾಷ್ಟ್ರದ ಪ್ರತಿಷ್ಠಾನ(ಪೈಠಾಣ), ಗೋದಾವರಿ ತೀರದ ಬಾವರಿ ಆಶ್ರಮ, ಆಂಧ್ರಪ್ರದೇಶದ ಅಮರಾವತಿ, ನಾಗಾರ್ಜುನಕೊಂಡ(ಧೈನಕಟಕ), ಪಾಟಲಿಪುತ್ರ ಮತ್ತು ಸಿಂಹಳ(ಶ್ರೀಲಂಕ) ಹಾಗೂ ಕರ್ನಾಟಕದ ಮಸ್ಕಿ, ಕೊಪ್ಪಳ, ಬ್ರಹ್ಮಗಿರಿ, ಬನವಾಸಿ, ಸನ್ನತಿ ಮುಂತಾದವುಗಳು ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳಾಗಿದ್ದವೆಂದು ಇತಿಹಾಸದಿಂದ ತಿಳಿದುಬರುತ್ತದೆ. ಮತ್ತು ಅವರ ಕಾಲಕ್ಕೆ ದಕ್ಷಿಣಕ್ಕೆ ಬರುವ ರಹದಾರಿಗಳನ್ನು ಮಾಡಿಕೊಂಡಿದ್ದರು. ಉತ್ತರದಿಂದ ದಕ್ಷಿಣದ ನಾಗಾವಿ ಮತ್ತು ಸನ್ನತಿಗಳಿಗೆ ಮಹಾರಾಷ್ಟ್ರದ ಮೂಲಕ ಮತ್ತು ಸನ್ನತಿಯಿಂದ ಕನಕಗಿರಿ, ಕೊಪ್ಪಳ ಮೂಲಕ ಬನವಾಸಿಗೆ ಸೇರುವ ರಹದಾರಿಗಳನ್ನಾಗಿ ಮಾಡಿಕೊಂಡಿದ್ದರಂತೆ. ಅಂದರೆ ಆಗಿನ ಕಾಲಕ್ಕೆ ಈ ಕೊಪ್ಪಳವು ಧಾರ್ಮಿಕ, ಸಾಂಸ್ಕೃತಿ ಮತ್ತು ವಾಣಿಜ್ಯ ಕೇಂದ್ರವಾಗಿ ರಹದಾರಿಗಳನ್ನು ಹೊಂದಿತ್ತೆಂದು ದಿನಾಂಕ: 05–12–2021ರ ಪ್ರಜಾವಾಣಿ ದಿನಪತ್ರಿಕೆಯಲ್ಲಿ 'ಸನ್ನತಿ ಬೌದ್ಧ ಸಂಸ್ಕೃತಿಯ ಮಹತಿ' ಎಂಬ ಲೇಖನದಲ್ಲಿ ಶ್ರೀಶೈಲ ನಾಗರಾಳರವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ ಮತ್ತು ವಿಶೇಷವಾಗಿ ಮೌರ್ಯರ ಕಾಲದಲ್ಲಿ ದಕ್ಷಿಣದಲ್ಲಿ ಸನ್ನತಿ ಇಲ್ಲವೆ ಕನಕಗಿರಿ ದಕ್ಷಿಣದ ರಾಜಧಾನಿಯಾಗಿತ್ತು ಎಂದು ಹೇಳಲಾಗುತ್ತಿದೆ. ಒಂದು ವೇಳೆ ಕನಕಗಿರಿಯೇ ಮೌರ್ಯರ ದಕ್ಷಿಣದ ರಾಜಧಾನಿ ಎಂದಾಗಿದ್ದರೆ ತೀರ ಹತ್ತಿರದಲ್ಲೇ ಇರುವ ಕೊಪ್ಪಳದ ಮಹತ್ವ ಸಾಮಾನ್ಯವಾಗಿರಲಿಲ್ಲ ಎಂಬುದಂತೂ ಒಪ್ಪಲೇಬೇಕು. ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಷ.ಶೆಟ್ಟರರವರು ಹೇಳಿರುವಂತೆ ಈ ಕೊಪ್ಪಳವು ಪ್ರಾಚೀನ ಕಾಲದಲ್ಲಿ ಖಜಾನಾ ಕೇಂದ್ರವಾಗಿತ್ತು ಮತ್ತು ಬೌದ್ಧಧರ್ಮದ ಬಹುದೊಡ್ಡ ಸಾಂಸ್ಕೃತಿಕ ಮತ್ತು ಧಾರ್ಮಿಕ ಶ್ರದ್ಧಾಕೇಂದ್ರವಾಗಿತ್ತು ಎಂಬ ಮಾತನ್ನು ಒಪ್ಪಲೇಬೇಕು.

**ಕೊಪಣ:–**

ನಂತರದ ಶಾಸನಗಳಲ್ಲಿ 'ಕೊಪಣ' ಎಂಬ ಹೆಸರು ಉಲ್ಲೇಖಗೊಂಡಿದೆ. ಈ ರೀತಿ ಕ್ರಿ.ಶ ಸುಮಾರು 8ನೇ ಶತಮಾನದ ನಂತರದ ಅನೇಕ ಶಾಸನಗಳಲ್ಲಿ 'ಕೊಪಣ' ಎಂಬ ಉಲ್ಲೇಖ ಕಂಡುಬರುತ್ತದೆ. 'ಕುಪಣ' ಎಂಬ ನಾಮದಿಂದ 'ಕೊಪಣ' ಎಂಬ

ಉಲ್ಲೇಖ ಯಾಕೆ ಬದಲಾಯಿತು? 'ಉ' (ಕು)ಕಾರದಿಂದ 'ಒ' (ಕೊ)ಕಾರ ಯಾವ ಕಾರಣದಿಂದ ಬದಲಾಯಿತು ಎಂಬುದರ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗುವುದಿಲ್ಲ. ಆದರೂ ಒಂದು ಹಿನ್ನೆಲೆ ಮಾತ್ರ ಇದ್ದೇ ಇರುತ್ತದೆ. ಅದು ಇಲ್ಲಿ ತಿಳಿದುಬರುವುದಿಲ್ಲ.

ಕೊಪ್ಪಳದ ಹಿರಿಯ ಸಂಶೋಧಕರಾಗಿದ್ದ ದಿ॥ ನಾ.ಭಾ.ಶಾಸ್ತ್ರಿಗಳು 'ಕೋಪಣ–ಕೊಪ್ಪಳ' ಎಂಬ ತಮ್ಮ ಕಿರು ಪುಸ್ತಕದಲ್ಲಿ ಹಲವು ಕಾವ್ಯ ಮತ್ತು ಶಾಸನಗಳಲ್ಲಿ ಉಲ್ಲೇಖಿತವಾದ ಕೊಪ್ಪಳದ ಇತಿಹಾಸ ಮತ್ತು ಕೊಪ್ಪಳ ನಾಮದ ಉಲ್ಲೇಖದ ಬಗ್ಗೆ ಚರ್ಚಿಸಿದ್ದಾರೆ. ಬಿಜಾಪುರ ಜಿಲ್ಲೆಯ ಇಂಡಿ, ಕಲಬುರ್ಗಿ ಜಿಲ್ಲೆಯ ಚಿನುವಳ್ಳಿ ಹಾಗೂ ಬಂಕೂರ, ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ಮುಂತಾದ ಶಾಸನಗಳಲ್ಲಿ ಉಲ್ಲೇಖಿತ ಕುಪಣ, ಕೊಪಣಪುರವರಾಧೀಶ್ವರ ಎಂಬ ಉಲ್ಲೇಖವನ್ನು ವಿವರಿಸಿದ್ದಾರೆ. ಅಲ್ಲದೆ ಚಾವುಂಡರಾಯನ ಚಾವುಂಡರಾಯ ಪುರಾಣದಲ್ಲಿ ಕೊಪಣಾದ್ರಿ ಉಲ್ಲೇಖವಿರುವ ಬಗ್ಗೆಯೂ ವಿವರಿಸಿದ್ದಾರೆ. ಮತ್ತು ಚಾಲುಕ್ಯ ಚಕ್ರವರ್ತಿ ಶ್ರೀ ವಿನಯಾದಿತ್ಯ ಸತ್ಯಾಶ್ರಯವಲ್ಲಭನರೇಂದ್ರನ ತಾಮ್ರ ಶಾಸನದಲ್ಲಿಯೂ ಸಹ ಶ್ರೀ ಕುಪ್ಪೇನಾಮಗ್ರಾಮ ಎಂಬ ಉಲ್ಲೇಖವನ್ನು ಕೊಟ್ಟು, ಕೊಪ್ಪಳದ ಚರಿತ್ರೆ ಮತ್ತು ಗ್ರಾಮನಾಮದ ಇತಿಹಾಸವನ್ನು ಕುರಿತು ಸದರಿ ಕಿರುಹೊತ್ತಿಗೆಯಲ್ಲಿ ವಿವರಿಸಿರುವುದು ಯೋಗ್ಯವಾಗಿದೆ.

ಈ ಕೊಪಣಪುರವರಾಧೀಶ್ವರರು ಯಾರು ಎಂಬ ಬಗ್ಗೆ ಡಾ.ಬಿ.ವಿ.ಶಿರೂರುರವರು ಕರ್ನಾಟಕ ಇತಿಹಾಸ ಅಕಾಡೆಮಿಯವರ 'ಇತಿಹಾಸ ದರ್ಶನ 2018ರ ಸಂಪುಟ–33ರಲ್ಲಿ' ಸುದೀರ್ಘವಾಗಿ ಚರ್ಚಿಸಿದ್ದಾರೆ. ಕರ್ನಾಟಕದ ಅನೇಕ ಶಾಸನಗಳಲ್ಲಿ ಉಲ್ಲೇಖಿತ ಕೊಪಣಪುರವರಾಧೀಶ್ವರರ ಬಗ್ಗೆ ವಿವರಿಸಿದ್ದಾರೆ. ಅರಸರು, ಮಾಂಡಳಿಕರು ತಮ್ಮ ಬಿರುದು ಬಾವಲಿಗಳಿಂದ ಅಥವಾ ತಮ್ಮ ವಂಶಾವಳಿಗಳ ವಿಶೇಷತೆಗಳಿಂದ ಗುರುತಿಸಿಕೊಳ್ಳುತ್ತಿದ್ದರು. ಕದಂಬರು ಬನವಾಸಿ ಪುರವರಾಧೀಶ್ವರ, ಪಲ್ಲವರು ಕಾಂಚಿಪುರವರಾಧೀಶ್ವರ, ಕಳಚೂರಿಗಳು ಕಾಳಂಜಪುರವರಾಧೀಶ್ವರ, ಸಿಂದರು ಭೋಗಾವತಿಪುರವರಾಧೀಶ್ವರ ಇತ್ಯಾದಿ ಮನೆತನಗಳನ್ನು ಕಾಣಬಹುದಾಗಿದೆ. ಅದರಂತೆ ಕೊಪ್ಪಳದ ಕೊಪಣಪುರವರಾಧೀಶ್ವರಾಗಿದ್ದ ಶಿಲಾಹಾರರನ್ನು ಕುರಿತು ಉಲ್ಲೇಖಿತ ಅನೇಕ ಶಾಸನಗಳನ್ನು ಇಲ್ಲಿ ಗುರುತಿಸಿದ್ದಾರೆ. ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಚಟ್ಟರಕಿ, ಬಾಗೇವಾಡಿ ತಾಲ್ಲೂಕಿನ ಮುತ್ತಗಿ, ಇಂಡಿ ತಾಲ್ಲೂಕಿನ ಹಿರೇಮಗಳೂರು, ಹಿರೇಬೇವನೂರು ಮತ್ತು ಅಗರಖೇಡ, ಕಲಬುರ್ಗಿ ಜಿಲ್ಲೆಯ ಅಫಜಲ್‌ಪುರ ಮತ್ತು ಇದೆ ತಾಲ್ಲೂಕಿನ ಚಿನಮಳ್ಳಿ, ಬಂದರವಾಡ, ಚಿತ್ತಾಪೂರ ತಾಲ್ಲೂಕಿನ ಪೇಠಶಿರೂರ, ಮುಗುಟ, ಹುಣಿಸಿಹಡಗಲಿ, ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ

ರಾಮತೀರ್ಥ ಮುಂತಾದ ಗ್ರಾಮಗಳ ಶಾಸನಗಳಲ್ಲಿ ಕೊಪಣಪುರವರಾಧೀಶ್ವರರ ಉಲ್ಲೇಖವಿರುವ ಬಗ್ಗೆ ವಿವರಿಸಿದ್ದಾರೆ. ಅಷ್ಟೇ ಅಲ್ಲದೆ ಆಂಧ್ರದ ಕರ್ನೂಲ್ ಜಿಲ್ಲೆ ಮತ್ತು ಮಹಾರಾಷ್ಟ್ರದ ಸಾಂಗ್ಲಿ ಜಿಲ್ಲೆಗಳ ಶಾಸನಗಳಲ್ಲಿಯೂ ಸಹ ಕೊಪಣಪುರವರಾಧೀಶ್ವರರ ಉಲ್ಲೇಖಗಳಿವೆ. ಈ ರೀತಿಯಲ್ಲಿ ಉಲ್ಲೇಖಿತ ಕೊಪ್ಪಳದ ಕೊಪಣಪುರವರಾಧೀಶ್ವರ ಶಿಲಾಹಾರ ವಂಶದವರ ರಾಜಧಾನಿ ಕೊಪ್ಪಳ ಎಂದಾಗಲಿ ಅಥವಾ ಅವರ ವಂಶದ ಅರಸ ಕೊಪ್ಪಳದವನಾಗಿದ್ದನೆಂದಾಗಲಿ ಸಮರ್ಥಿಸುವ ಯಾವುದೇ ದಾಖಲೆಗಳಿಲ್ಲ ಎಂದು ಬಿ.ವಿ.ಶಿರೂರುರವರು ಅಭಿಪ್ರಾಯಪಟ್ಟಿದ್ದಾರೆ. ಹಾಗಾದರೆ ಆಂಧ್ರಪ್ರದೇಶ, ಮಹಾರಾಷ್ಟ್ರ ಮತ್ತು ಕರ್ನಾಟಕದ ಅನೇಕ ಶಾಸನಗಳಲ್ಲಿ ಉಲ್ಲೇಖಗೊಂಡ ಕೊಪಣಪುರವರಾಧೀಶ್ವರರು ಯಾರೆಂಬುದು ಪ್ರಶ್ನೆಯಾಗಿ ಉಳಿಯುತ್ತದೆ. ಇದರ ಬಗ್ಗೆಯೂ ಸಹ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ. ಅಷ್ಟೇ ಅಲ್ಲ **'ಕೊಪಣಾಪುರ'** ಎಂಬ ಉಲ್ಲೇಖಗಳು ರಾಜ್ಯದ ಅನೇಕ ಶಾಸನಗಳಲ್ಲಿ ಕಂಡು ಬರುತ್ತದೆ. ಬಹುಶಃ ದೇಶದ, ರಾಜ್ಯದ ಇಷ್ಟು ಶಾಸನಗಳಲ್ಲಿ ಉಲ್ಲೇಖಿತ ಕೊಪ್ಪಳ ಸ್ಥಳನಾಮದಂತೆ ಇತರೆ ಯಾವುದೇ ಗ್ರಾಮನಾಮಗಳು ಉಲ್ಲೇಖವಾಗಿರಲು ಸಾಧ್ಯವಿರಲಿಕ್ಕಿಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ.

**ಸ್ಥಳನಾಮ ವಿಶೇಷಣೆ:–**

ಕ್ರಿ.ಪೂ. ಸುಮಾರು 3ನೇ ಶತಮಾನದಿಂದ ಹಿಡಿದು 19ನೇ ಶತಮಾನದವರೆಗಿನ ಅನೇಕ ಶಾಸನಗಳಲ್ಲಿ ಮತ್ತು ವಿವಿಧ ಕಾವ್ಯಗಳಲ್ಲಿ ವಿವಿಧ ರೀತಿಯಲ್ಲಿ ಕೊಪ್ಪಳ ಸ್ಥಳನಾಮದ ಬಗ್ಗೆ ಉಲ್ಲೇಖವಿದೆ. 'ಕುಪಣ'ದಿಂದ ಪ್ರಾರಂಭಗೊಂಡು **'ಕೊಪ್ಪಳ'** ಎಂಬ ಪದದವರೆಗೆ ಹೇಗೆ ಬದಲಾವಣೆಗೊಳ್ಳುತ್ತಾ ಉಲ್ಲೇಖಗೊಂಡಿದೆ ಎಂಬುದನ್ನು ಈ ಮುಂದಿನಂತೆ ನೋಡಬಹುದಾಗಿದೆ. ಕುಪಣ, ಕುಪ್ಪೆ, ಸಿದ್ಧಕುಪಣದೋಳ್, ಕುಪಣದೊಳ್, ಕುಪಣಕ್ಕೆ, ಕುಪಣಯನಾಳ್ದು, ಕುಪಣತೀರ್ತ್ಥದೊಳ್, ಕುಪಣತೀರ್ತ್ಥಸ್ಥಾನದೊಳ್, ಕುಪಣದೊಳೆ, ಕುಪಣಾಚಳ, ಕುಪಣಾಶ್ರೀ ತೀರ್ತ್ಥ, ತೀರ್ಥಶ್ರೀಕುಪಣೇ, ಕುಪಣಶ್ರೀತೀರ್ತ್ಥಂ, ಕುಪಣಂ, ಕೊಪಣದಾ, ಕೊಪಣ, ಕೊಪಣಂಸ್ಥಾವರತೀರ್ತ್ಥಂ, ಶ್ರೀ ಕೊಪಣದ, ಕುಪಣನಾಡ, ಕೊಪಣತೀರ್ತ್ಥ, ಕೊಪಣದವೆಂಟೆಯ, ಕೊಪಣದ ಸೀಮೆ, ಆದಿತೀರ್ಥ, ಮಹಾತೀರ್ಥ, ಕೊಪಣಪುರಾಧೀಶ, ಕುಪಣಪುರಾಧೀಶ್ವರ, ಕುಪಣಾವರಪುರಾಧೀಶ್ವರ, ಕುಪಾಣಾದ್ರಿ, ಕುಪಣಾಚಲ, ಕೊಪಬಾಲ, ಕೊಪ್ಪಲ್, ಕೊಪ್ಪಳ್, ಕೊಪ್ಪಳದ ಸೀಮೆ ಮತ್ತು ಕೊಪ್ಪಳ ಹೀಗೆ ಕೊಪ್ಪಳ ಸ್ಥಳನಾಮ ಪ್ರಾಚೀನ ಕಾಲದಿಂದಲೂ ಹೇಗೆ ಬದಲಾಗುತ್ತಾ ಬಂದಿದೆ

ಎಂಬುದನ್ನು ಶಾಸನ ಮತ್ತು ಕಾವ್ಯಗಳಲ್ಲಿ ಕಾಣಬಹುದಾಗಿದೆ. ಕಾಲ, ಪರಿಸರ, ಪರಿಸರದ ವ್ಯಕ್ತಿ ಇತ್ಯಾದಿಗಳಿಗೆ ತಕ್ಕಂತೆ ಕೊಪ್ಪಳದ ಸ್ಥಳನಾಮ ವಿವಿಧ ರೀತಿಯಲ್ಲಿ ಕರೆಸಿಕೊಳ್ಳುತ್ತಾ ಅಥವಾ ಬದಲಾಗುತ್ತಾ ಬಂದಿರುವುದಂತೂ ಸತ್ಯದ ಸಂಗತಿ.

**ಕೊಂಕಿನಪುಲೊ:–**

ಚೀನಾ ಯಾತ್ರಿಕ ಹುಯೆನ್–ತ್ಸಾಂಗ್‌ನು ಕ್ರಿ.ಶ. ಸುಮಾರು 7ನೇ ಶತಮಾನದಲ್ಲಿ ಭಾರತದ ಪ್ರವಾಸದ ಸಂದರ್ಭದಲ್ಲಿ ಕೊಪ್ಪಳಕ್ಕೂ ಭೇಟಿಕೊಟ್ಟಿದ್ದನು. ಇವನು ಬಹುತೇಕ ದೇಶಗಳಲ್ಲಿ ಸಂಚರಿಸಿ ಎಲ್ಲೆಲ್ಲಿ ಬೌದ್ಧಧರ್ಮದ ಪ್ರದೇಶಗಳಿವೆ ಮತ್ತು ಎಲ್ಲೆಲ್ಲಿ ಬೌದ್ಧಧರ್ಮದ ಅನುಯಾಯಿಗಳಿದ್ದಾರೆಂದು ಅಧ್ಯಯನ ಮಾಡುತ್ತಾ ಅಲ್ಲಿನ ಮಾಹಿತಿಯನ್ನು ದಾಖಲಿಸುತ್ತಾ ಸಂಚರಿಸಿದ್ದಾನೆ. ಅದರಂತೆ ಕೊಪ್ಪಳಕ್ಕೂ ಭೇಟಿಕೊಟ್ಟಾಗ ಈ ಕೊಪ್ಪಳವನ್ನು 'ಕೊಂಕಿನಪುಲೊ' ಎಂದು ಕರೆದಿದ್ದಾನೆ. ಆದರೆ ಹುಯೆನ್–ತ್ಸಾಂಗ್‌ನು ಈ ಮೊದಲು ಶಾಸನ, ಪುರಾಣ, ಕಾವ್ಯ ಮತ್ತು ಮಹಾಕಾವ್ಯಗಳಲ್ಲಿ ಅಷ್ಟೇ ಅಲ್ಲಾ ಎಲ್ಲಿಯೂ ಉಲ್ಲೇಖವಿರದ ಈ ಶಬ್ದವನ್ನು ಯಾಕೆ ಉಲ್ಲೇಖಿಸಿದನು? ಮತ್ತು ಯಾವ ಆಧಾರದ ಮೇಲೆ 'ಕೊಂಕಿನಪುಲೊ' ಎಂದು ಕರೆದನು ಎಂಬುದು ಮಾತ್ರ ಇನ್ನೂ ಅಸ್ಪಷ್ಟವಾಗಿಯೇ ಉಳಿದಿದೆ.

ಕೆಲ ವಿದ್ವಾಂಸರು ಹುಯೆನ್–ತ್ಸಾಂಗ್‌ನು ಈ ಕೊಪ್ಪಳಕ್ಕೆ ಅಕ್ಷಾಂಶ ಮತ್ತು ರೇಖಾಂಶದ ಆಧಾರದ ಮೇಲೆಯೇ 'ಕೊಂಕಿನಪುಲೊ' ಎಂದು ಕರೆದಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಇನ್ನೂ ಕೆಲ ವಿದ್ವಾಂಸರು 'ಕೊಂಕಿನಪುಲೊ' ಎಂದರೆ ಕೊಪ್ಪಳ ಅಲ್ಲ ಅದು ಬನವಾಸಿ ಆಗಿರಬಹುದು ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಭಾಸ್ಕರ್ ಆನಂದ ಸಲೆತೊರೆ ಎಂಬ ವಿದ್ವಾಂಸರು ಕೊಪ್ಪಳವೇ ಹುಯೆನ್–ತ್ಸಾಂಗ್‌ನು ಉಲ್ಲೇಖಿತ 'ಕೊಂಕಿನಪುಲೊ' ಎಂದು ಅಭಿಪ್ರಾಯಪಟ್ಟಿದ್ದಾರೆ. ಅವರು ತಮ್ಮ 'MEDIEVAL JAINISM' ಎಂಬ ಕೃತಿಯಲ್ಲಿ ಚೀನಾ ಯಾತ್ರಿಕ ಹುಯೆನ್–ತ್ಸಾಂಗ್‌ನ 'ಕೊಂಕಿನಪುಲೊ' ಎಂಬ ಈ ಉಲ್ಲೇಖದ ಬಗ್ಗೆ ವಿವಿಧ ರೀತಿಯಲ್ಲಿ ಚರ್ಚಿಸಿದ್ದಾರೆ. 'ಕೊಪಣಪುರ' ಎಂದು ಕರೆಯಲು ಹೋಗಿ "KONGKIN(KAN)NAPULO" ಎಂದು ಕರೆದಿರುವ ಸಾಧ್ಯತೆಯಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಭಾಗದಲ್ಲಿ ಅನೇಕ 'ಮೋರೆರ್ ಮನೆಗಳಿವೆ'(ಶಿಲಾಸಮಾಧಿಗಳು), ಇಲ್ಲಿಯ ಜನ ಅರಸರಂತೆ ಇದ್ದರು, ಆ ಕಾಲದಲ್ಲಿ ಇದು ದೊಡ್ಡ ನಗರದಂತೆ(KINGDOM) ಇದ್ದಿರಬೇಕು ಇಲ್ಲವೆ ಕಂಡಿರಬೇಕು ಹೀಗಾಗಿ "KONGKIN(KAN)NAPULO" ಎಂದು ಕರೆದಿರಬಹುದು ಎಂಬ ಚರ್ಚೆಯೊಂದಿಗೆ

ಇನ್ನೂ ಹಲವು ಪ್ರಶ್ನಾರ್ಥಕ ಊಹೆಗಳನ್ನೂ ಇಲ್ಲಿ ಕಾಣಿಸಿದ್ದಾರೆ. ಉದಾಹರಣೆಗೆ ನೋಡುವುದಾದರೆ ಇಲ್ಲಿನ ಜನರ ಸ್ವಭಾವ, ವರ್ಣ, ವಿದ್ವತ್ ಆಧಾರದ ಮೇಲೆಯೂ ಕರೆದಿರಬಹುದೋ? ಇಲ್ಲಿದ್ದ ಬುದ್ಧನ ಅನುಯಾಯಿಗಳು ಮತ್ತು ಪ್ರಮುಖ ಬೌದ್ಧನೆಲೆಯ ಆಧಾರದ ಮೇಲೆ ಕರೆದಿರಬಹುದೇ? ಅಥವಾ ಇದು ಅಡ್ಡಹೆಸರೂ ಆಗಿರಬಹುದೇ? ಎಂಬ ಅನೇಕ ಊಹೆಗಳನ್ನು ಭಾಸ್ಕರ್ ಆನಂದರವರು ವ್ಯಕ್ತಪಡಿಸಿದ್ದಾರೆಯಾದರೂ ಸಹ ಅವರು ಸ್ಪಷ್ಟ ಮತ್ತು ನಿಖರ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದಿಲ್ಲ. ಇಂಗ್ಲೀಷ್ ಪ್ರಾಧ್ಯಾಪಕರಾದ ಅರುಣಕುಮಾರ ಎ.ಜಿ.ಯವರ ಅಭಿಪ್ರಾಯದಂತೆ "KONGKIN(KAN)NAPULO"ವನ್ನು ಚೀನಿ ಭಾಷೆಯಲ್ಲಿ ಅವಲೋಕಿಸಿದಾಗ "CON-KINAPU-LO" ಎಂದಾಗುತ್ತದೆ. "CON" ಎಂದರೆ ಬೌದ್ಧ ಸನ್ಯಾಸಿ, ಸಂಘ ಅಥವಾ ಆಳವಾದ ಜ್ಞಾನ ಎಂಬ ಅರ್ಥ ಬರುತ್ತವೆ. "(K)INAPU" ಎಂದರೆ ಸಂಬಂಧಿತ ಅಥವಾ ಕಠೋರ ಎಂಬ ಅರ್ಥಗಳು ಬಂದರೆ "LO" ಎಂದರೆ ಕೇಳು, ಅವಧಾನ ಎಂಬ ಅರ್ಥಗಳೊಂದಿಗೆ ಅಲ್ಲಿನ ಅಡ್ಡಹೆಸರೂ ಬರುತ್ತವೆ" ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ. ನಾವು ಫೋನಾಯಿಸಿದಾಗಲೂ "HELLO" ಎಂಬ ಶಬ್ಧವನ್ನು ಬಳಸಿ ಅವರನ್ನು ಕೇಳಿ ಕೇಂದ್ರೀಕರಿಸುವಂತೆ ಮಾತನಾಡುವ ಶಬ್ಧ ಇಂದಿಗೂ ಸಹ ದಿನನಿತ್ಯ ಬಳಕೆ ಸಾಮಾನ್ಯವಾಗಿದೆ.

ಬಹುಶಃ ಹುಯೆನ್–ತ್ಸಾಂಗ್‌ನು ಆಗಮಿಸಿದ್ದ ಕಾಲದಲ್ಲಿ ಈ ಕೊಪ್ಪಳ ನಗರವು ಬೌದ್ಧ ಸನ್ಯಾಸಿಗಳಿಂದ, ಸಂಘಗಳಿಂದ ತುಂಬಿರಬೇಕು. ಇಲ್ಲಿ ಅಂತಹ ಆಳವಾದ ಜ್ಞಾನವುಳ್ಳ ಮುನಿಗಳಿಂದ ಕೂಡಿದ ನಗರ ಅಥವಾ ಜ್ಞಾನಕೇಂದ್ರವೇ ಆಗಿರಬಹುದಾದ ಸಾಧ್ಯತೆ ಹೆಚ್ಚು. ಹಾಗಾಗಿಯೇ ಈ ನಗರಕ್ಕೆ 'ಕೊಂಕಿನಪುಲೊ' ಎಂದು ಕರೆದಿರಬಹುದು. ಒಟ್ಟಾರೆಯಾಗಿ ಬೌದ್ಧ ಭಿಖ್ಖುಗಳು ಆಳವಾದ ಅಥವಾ ಕಠೋರ ಜ್ಞಾನ, ವಿದ್ವತ್ ಸಂಪಾದನೆಗಾಗಿ ಸಾಂಘಿಕವಾಗಿ ನೆಲೆಸಿದ್ದ ಸ್ಥಳವಾಚಕವಾಗಿ ಈ 'ಕೊಂಕಿನಪುಲೊ' ಎಂಬ ಶಬ್ಧವನ್ನು ಹುಯೆನ್–ತ್ಸಾಂಗ್‌ನು ಬಳಸಿರಬಹುದು.

ಇದಲ್ಲದೆ ಈ 'ಕೊಂಕಿನಪುಲೊ' ಎಂಬ ನಾಮವನ್ನು ವಿದೇಶಿ ವಿದ್ವಾಂಸರಾದ ಬಿ.ಎಲ್.ರೈಸ್‌ರವರೂ ಕೂಡ ಉಲ್ಲೇಖ ಮಾಡಿದ್ದಾರೆ. ಆದರೆ ರೈಸ್‌ರವರು ಈ ನಾಮದ ಬಗ್ಗೆ ಹೆಚ್ಚಿನ ಚರ್ಚೆ ಮಾಡಿರುವುದಿಲ್ಲ. ಹೀಗಾಗಿ 'ಕೊಂಕಿನಪುಲೊ' ಎಂಬ ಉಲ್ಲೇಖದ ಬಗ್ಗೆ ತುಸು ಅಸ್ಪಷ್ಟತೆಯಿಂದ ಚರ್ಚೆ ಮುಕ್ತಾಯವಾಗುತ್ತದೆ. ಅದೇನೇ ಇದ್ದರೂ ಚೀನಾ

ಯಾತ್ರಿಕ ಹುಯೆನ್–ತ್ಸಾಂಗ್‌ನು ಮತ್ತು ಇತರ ವಿದ್ವಾಂಸರ ಉಲ್ಲೇಖಿತ 'ಕೊಂಕಿನಪುಲೊ' ಉಲ್ಲೇಖದ ಮೇಲೆ ಇನ್ನೂ ಹೆಚ್ಚಿನ ರೀತಿಯಲ್ಲಿ ಅಧ್ಯಯನಗಳು ನಡೆಯಬೇಕಿದೆ. ಆಗ ಮಾತ್ರ ಸದರಿ ಉಲ್ಲೇಖದ ನಿಖರತೆ ತಿಳಿದುಬರುತ್ತದೆ.

**ಕೊಪಣಾಚಲ/ಳ:–**

ಬಹಳ ವಿಶೇಷವಾಗಿ ರನ್ನನು ತನ್ನ ಅಜಿತನಾಥ ಪುರಾಣದಲ್ಲಿ ಅತ್ತಿಮಬ್ಬೆಯ ಕುರಿತು ವರ್ಣನೆಯನ್ನು ಮಾಡುತ್ತಾ ಕೊಪ್ಪಳದ ಬಗ್ಗೆಯೂ ಸಹ ಉಲ್ಲೇಖ ಮಾಡಿದ್ದಾನೆ. "ಬಿಳಿಯರಳಿಯಂತೆ ಗಂಗಾಜಳದಂತೆಸೆವಜಿತಸೇನಮುನಿಪತಿಯ ಗುಣಾವಳಿಯಂತೆ ನೆಗಳ್ದಿ ಕೊಪಣಾಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ"(12–6) ಎಂದು ಅತ್ತಿಮಬ್ಬೆಯ ಪವಿತ್ರ ಗುಣವು ಕೊಪ್ಪಳದಂತೆ ಇತ್ತೆಂದು ವರ್ಣಿಸಿದ್ದಾನೆ. ಬಿಳಿಯ ಅರಳಿ(ಹತ್ತಿ), ಗಂಗಾನದಿ, ಅಜಿತಾಸೇನಾಮುನಿ, ಅತ್ತಿಮಬ್ಬೆ ಮತ್ತು ಕೊಪ್ಪಳ ಈ ಐದೂ ಪವಿತ್ರರು ಎಂದು ಹೇಳಿದ್ದಾನೆ. ಹೀಗಾಗಿ ಈ ಕೊಪ್ಪಳವೂ ಸಹ ಪವಿತ್ರವಾದ ಸ್ಥಳವಾಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ಸುಮಾರು 10ನೇ ಶತಮಾನದ ಹಳೆಗನ್ನಡ ಸಾಹಿತ್ಯದ ಶ್ರೇಷ್ಠ ಕವಿಯಾದ ರನ್ನನೇ ಈ ಕೊಪ್ಪಳ ಪವಿತ್ರವಾಗಿತ್ತೆಂದು ಹೇಳಿರುವುದರಿಂದ ಇಲ್ಲಿ ಹೆಚ್ಚಿನ ಚರ್ಚೆಗೆ ಅವಕಾಶ ಇಲ್ಲವೆನ್ನಬಹುದು.

ಕನ್ನಡ ಸಹಾಯಕ ಪ್ರಾಧ್ಯಾಪಕರಾದ ಪ್ರೊ.ಶಂಕ್ರಯ್ಯ ಅಬ್ಬಿಗೇರಿಮಠರವರು ಭಾಷಿಕ ಆಯಾಮದಲ್ಲಿ 'ಕೊಪಣಚಳ'ವು 'ಕೊಪ್ಪಳ'ವಾಗಿ ನಿಷ್ಪತ್ತಿ ಹೊಂದಿರುವುದನ್ನು ವಿಶ್ಲೇಷಿಸಿದಂತೆ "ರನ್ನನ ಅಜಿತನಾಥ ಪುರಾಣದಲ್ಲಿ ಉಲ್ಲೇಖಿಸಿರುವ 'ಕೊಪಣಾಚಳ'ವು ಆ ಕಾಲದ ಪ್ರಸಿದ್ಧ ಜೈನ ಪರಂಪರೆಯ ತಾಣವಾಗಿದ್ದರಿಂದ ಈ 'ಕೊಪಣಾಚಳ'ದ ಪದಬಳಕೆ ಜನಜನಿತವಾಗಿದ್ದುದು ಗಮನಕ್ಕೆ ಬರುತ್ತದೆ. ಈ ಸ್ಥಳನಾಮದ ಭಾಷಿಕ ಆಯಾಮವನ್ನು ಗಮನಿಸಿದಾಗ ಆಯಾ ಕಾಲಘಟ್ಟದ ಭಾಷಿಕ ಅವಸ್ಥಾಬೇಧದಲ್ಲಿ ಅಕ್ಷರಪಲ್ಲಟ, ಅಕ್ಷರಲೋಪ, ದ್ವಿತ್ವ ಬದಲಾವಣೆಯ ಆಧಾರದ ಮೇಲೆ ವಿಶ್ಲೇಷಿಸಿದಾಗ 'ಕೊಪಣಾಚಳ'ವೇ ಮುಂದೆ 'ಕೊಪ್ಪಳ'ವಾಗಿರುವುದು ಕಂಡುಬರುತ್ತದೆ. ಭಾಷಾವಿಜ್ಞಾನದ ನೆಲೆಯಲ್ಲಿ ನೋಡುವುದಾದರೆ, ಒಂದು ಪದದಲ್ಲಿರುವ ವ್ಯಂಜನ ದುರ್ಬಲವಾದರೆ ಅಥವಾ ಲೋಪವಾದರೆ ಅದರ ನಷ್ಟವನ್ನು ತುಂಬಲು ಹಿಂದಿನ ವ್ಯಂಜನಾಕ್ಷರ ದ್ವಿತ್ವವಾಗುವುದು. 'ಕೊಪಣಾಚಳ'ವು>'ಕೊಪ್ಪಳ'ವಾಗಿ 10ನೇ ಶತಮಾನದ ನಂತರ ವಿವಿಧ ಭಾಷಿಕ ವ್ಯತ್ಯಾಸಕ್ಕೆ ಒಳಗಾಗಿದೆ. ಡಾ.ಎಂ.ಚಿದಾನಂದಮೂರ್ತಿಯವರು ಪ್ರತಿಪಾದಿಸುವ 'ಪರಿಹಾರ

ದೀರ್ಘೀಕರಣ' ತತ್ವದಂತೆ ಇಲ್ಲಿ 'ಪರಿಹಾರ ದ್ವಿತ್ವ'ವನ್ನು ಅನ್ವಯಿಸಬಹುದು. 'ಕೊಪಣಾಚಳ' ಪದದಲ್ಲಿಯ 'ಣ್' ವ್ಯಂಜನವು ಉಚ್ಚಾರದಲ್ಲಿ ದುರ್ಬಲವಾಗಿರುವುದರಿಂದ ಕಾಲಾನಂತರದ ಭಾಷಿಕ ವ್ಯತ್ಯಾಸದಲ್ಲಿ ಈ ಪದದಲ್ಲಿಯ 'ಣ್' ಎಂಬ ದುರ್ಬಲ ವ್ಯಂಜನ ಮತ್ತು ಇದರ ನಂತರದ 'ಚ್' ವ್ಯಂಜನ ಲೋಪವಾಗಿ 'ಪ್'ಕಾರವು ದ್ವಿತ್ವವಾಗಿ(ಪ್ಪ) ಕೊನೆಯ 'ಲ್' ವ್ಯಂಜನ 'ಳ್' ವ್ಯಂಜನವಾಗಿ ಭಾಷಿಕ ಬದಲಾವಣೆಯಾಗಿದೆ. 10ನೇ ಶತಮಾನದ ಹಳಗನ್ನಡದಲ್ಲಿ ಜನಜನಿತವಾಗಿದ್ದ 'ಕೊಪಣಚಳ'ವೇ ಮುಂದೆ ನಡುಗನ್ನಡ ಮತ್ತು ಹೊಸಗನ್ನಡದ ಕಾಲಕ್ಕೆ ಅಕ್ಷರಲೋಪ, ಸೌಲಭ್ಯಾಕಾಂಕ್ಷಿ ಮತ್ತು ದ್ವಿತ್ವ ವ್ಯತ್ಯಾಸವನ್ನು ಹೊಂದಿ, 'ಕೊಪ್ಪಳ' ಪದ ಬಳಕೆ ರೂಢಿಯಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ" ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ.

ಕಾವ್ಯಗಳಲ್ಲಿ ಉಲ್ಲೇಖಿತ "ಕೊಪಣಾಚಲ"ವನ್ನು ಸಾಮಾನ್ಯ ಅರ್ಥದಲ್ಲಿ ನೋಡುವುದಾದರೆ 'ಅಚಲ' ಎಂದರೆ ಬೆಟ್ಟ, ಚಲಿಸಲಾರದು, ನಂಬಿಕೆಯುಳ್ಳದ್ದು, ಶ್ರದ್ಧೆಯುಳ್ಳದ್ದು, ದೃಢವಾದುದು, ಕದಲದು, ಅನನ್ಯ, ಸ್ಥಾವರ ಎಂಬ ಅರ್ಥಗಳು ಬರುತ್ತವೆ. ಅಂದರೆ ಈ ಕೊಪ್ಪಳ ಅಚಲವಾದ ಸ್ಥಳವಾಗಿತ್ತೆಂದು ತಿಳಿದುಬರುತ್ತದೆ. ಇಂದಿಗೂ ಸಹ ಭವ್ಯವಾದ ಮತ್ತು ವಿಶಾಲವಾದ ಕೊಪ್ಪಳ ಬೆಟ್ಟವನ್ನು ನೋಡಿದಾಗ ಅದು ಅಚಲವಾದದ್ದೇ ಎಂದೆನಿಸುತ್ತದೆ. ಪ್ರಾಚೀನ ಕಾಲದಲ್ಲಿ ಕೋಟೆ, ಬೆಟ್ಟ, ಬೌದ್ಧಧರ್ಮ ಮತ್ತು ಜೈನಧರ್ಮಗಳ ಅನುಯಾಯಿಗಳಿಗೆ ಈ ಸ್ಥಳದ ಮೇಲೆ ಅಚಲವಾದ ನಂಬಿಕೆ ಇತ್ತು. ಆ ನಂಬಿಕೆ ಮತ್ತು ಶ್ರದ್ಧೆಗಳ ಆಧಾರದ ಮೇಲೆಯೇ ಈ ಅಚಲವಾದ ಕೊಪ್ಪಳಕ್ಕೆ ಭೇಟಿನೀಡಿದ್ದಾರೆ. ಅಂತಹ ಭೇಟಿಕೊಟ್ಟಿದ್ದರ ಕುರುಹುಗಳು ಶಾಸನ, ಮೂರ್ತಿ-ಶಿಲ್ಪಗಳು ಮತ್ತು ಅನೇಕ ಸ್ಮಾರಕಗಳು ಇಂದಿಗೂ ಸಹ ಕಾಣಸಿಗುತ್ತವೆ.

### ವಿದಿತ ಮಹಾಕೊಪಣನಗರ:-

ಸುಮಾರು 7-8ನೇ ಶತಮಾನದಲ್ಲಿ ಶ್ರೀ ವಿಜಯನು ಬರೆದ ತನ್ನ 'ಕವಿರಾಜಮಾರ್ಗ'ದಲ್ಲಿ ಕರ್ನಾಟಕದ ವ್ಯಾಪ್ತಿಯನ್ನು ವಿವರಿಸುತ್ತಾ "ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಲಯವಿಲೀನವಿಶದವಿಷಯವಿಶೇಷಂ"(1-36) ಎಂದು ಕನ್ನಡ ನಾಡಿನ ಸರಹದ್ದನ್ನು ಹೇಳಿದ್ದಾನೆ. ಮತ್ತು ಹಾಗೆಯೇ ಮುಂದುವರೆದು ಅದರೊಳಗೆ"ಅದರೊಳಗಂ ಕಿಸುವೊಳಲಾ ವಿದಿತ ಮಹಾಕೊಪಣನಗರದಾ ಪುಲಿಗೆರೆಯಾ ಸದಭಿಸ್ತುತಮಪ್ಪೊಂಕುಂದದ

ನಡುವಣ ನಾಡೆ ಕನ್ನಡದ ತಿರುಳ್"(1–37) ಎಂದು ತಿರುಳ್ಗನ್ನಡ ನಾಡಿನ ವ್ಯಾಪ್ತಿಯನ್ನೂ ಹೇಳಿದ್ದಾನೆ. ಅಂದರೆ ಕಾವೇರಿಯಿಂದ ಗೋದಾವರಿವರೆಗೆ ಇದ್ದ ಕನ್ನಡ ನಾಡಿನೊಳಗೆ ಇರುವ ತಿರುಳ್ಗನ್ನಡ ನಾಡಿನ ವ್ಯಾಪ್ತಿಯೊಳಗೆ ಈ ಕೊಪ್ಪಳ ಇತ್ತೆಂದು ತಿಳಿದುಬರುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಕ್ರಿ.ಶ. 7–8ನೇ ಶತಮಾನದಲ್ಲೇ ಈ ಕೊಪ್ಪಳ ಎಷ್ಟು ಪ್ರಸಿದ್ಧಿ ಪಡೆದಿತ್ತೆಂದು ತಿಳಿಯಬಹುದಾಗಿದೆ. ಮತ್ತು ಮುಖ್ಯವಾಗಿ ಕನ್ನಡ ನಾಡು, ನಾಡಿನ ವ್ಯಾಪ್ತಿ, ನಾಡಿನ ಜನತೆಯ ವರ್ಣನೆ, ಭಾಷೆ, ಛಂದಸ್ಸು ಹೀಗೆ ಮುಂತಾದ ಸಂಗತಿಗಳ ಕುರಿತು ಬರೆದ ಇಂತಹ ಮಹತ್ವದ ಕೃತಿಯಲ್ಲಿ ಕೊಪ್ಪಳದ ಉಲ್ಲೇಖವಿದೆ ಎಂದರೆ ಅದು ಸಾಮಾನ್ಯವಾದ ಸಂಗತಿಯಲ್ಲ. ಈ ಕೃತಿಯ ಮತ್ತೊಂದು ವಿಶೇಷವೆಂದರೆ ಕನ್ನಡದಲ್ಲಿ ರಚಿತವಾದ ಮತ್ತು ಉಪಲಬ್ದವಾದ ಮೊದಲ ಕೃತಿಯೇ ಈ 'ಕವಿರಾಜಮಾರ್ಗ' ಎಂದು ಹೇಳಲಾಗುತ್ತಿದೆ. ಕನ್ನಡದ ಮೊದಲ ಇಂತಹ ಮೇರು ಕೃತಿಯಲ್ಲಿ ಕೊಪ್ಪಳದ ಉಲ್ಲೇಖವಿರುವುದು ಹೆಮ್ಮೆಯ ಸಂಗತಿ ಎನ್ನಬಹುದು ಮತ್ತು ಕೊಪ್ಪಳಕ್ಕೆ ಅಂತಹ ಮಹತ್ವದ ಸ್ಥಾನವಿರುವ ಬಗ್ಗೆಯೂ ತಿಳಿದುಬರುತ್ತದೆ.

**ಆದಿತೀರ್ಥ–ಮಹಾತೀರ್ಥ:–**

ಇನ್ನು ಶಾಸನ ಮತ್ತು ಕಾವ್ಯಗಳಲ್ಲಿ ಉಲ್ಲೇಖಿತ ಕೊಪ್ಪಳದ ಹೆಸರಿನ ಮುಂದೆ "ಆದಿತೀರ್ಥ" ಎಂಬ ಪದದ ಬಗ್ಗೆ ನೋಡುವುದಾದರೆ, 'ಆದಿ' ಮತ್ತು 'ತೀರ್ಥ' ಎಂಬ ಎರಡು ಶಬ್ಧಗಳು ಸೇರಿ 'ಆದಿತೀರ್ಥ' ಮಿಳಿತವಾಗಿವೆ. ಎರಡೂ ಶಬ್ಧಗಳು ಬಹಳ ಮಹತ್ವದ ಅರ್ಥಗಳನ್ನು ಒಳಗೊಂಡ ಶಬ್ಧಗಳೇ ಆಗಿವೆ. ಈ ಉಲ್ಲೇಖಗಳು ಹೆಚ್ಚಾಗಿ ಜೈನ ಶಾಸನ ಮತ್ತು ಕಾವ್ಯಗಳಲ್ಲಿ ಕಂಡುಬರುತ್ತವೆ. 'ಆದಿ' ಎಂಬ ಉಲ್ಲೇಖವನ್ನು ಸುಖಾಸುಮ್ಮನೆ ಉಲ್ಲೇಖಿಸಿದ್ದಲ್ಲಾ ಎಂಬುದು ನನ್ನ ಅಭಿಪ್ರಾಯವಾಗಿದೆ. ಪ್ರಾಚೀನ ಕರ್ನಾಟಕದಲ್ಲಿ ಜೈನ ಧರ್ಮದ ಎರಡು ಪ್ರಮುಖ ಶ್ರದ್ಧಾ ಕೇಂದ್ರಗಳಿದ್ದ ಬಗ್ಗೆ ಇತಿಹಾಸದಿಂದ ತಿಳಿದುಬರುತ್ತದೆ. ಒಂದು 'ಶ್ರವಣಬೆಳಗೋಳ' ಮತ್ತೊಂದು 'ಕೊಪ್ಪಳ'. ಕೊಪ್ಪಳಕ್ಕೆ 'ಆದಿ' ಎಂಬ ಹೆಸರು ಉಲ್ಲೇಖಗೊಂಡಿರುವುದರಿಂದ ಜೈನಧರ್ಮ ಆದಿ ಕೇಂದ್ರ ಅಂದರೆ ಮೊದಲ ಕೇಂದ್ರವೇ ಈ ಕೊಪ್ಪಳವಾಗಿರಬೇಕು. ಆದ್ದರಿಂದ ಈ ಗ್ರಾಮಕ್ಕೆ ಕುಪಣ, ಕೊಪಣ, ತೀರ್ಥ ಎಂಬ ಹಲವು ಹೆಸರಿನ ಮುಂದೆ 'ಆದಿ' ಎಂಬ ಶಬ್ಧ ಉಲ್ಲೇಖಿಸಿರಬೇಕು. ಜೈನ ಧರ್ಮವು ಮುನಿಗಳ ಮೂಲಕ ಉತ್ತರದಿಂದ ದಕ್ಷಿಣಕ್ಕೆ ಬಂದ ಬಗ್ಗೆ ಚರಿತ್ರೆಯಲ್ಲಿ ದಾಖಲೆಗಳಿವೆ. ಹೀಗಾಗಿ ಉತ್ತರದಿಂದ ದಕ್ಷಿಣಕ್ಕೆ ಬರುವಾಗ ಸಿಗುವ ಮೊದಲ ಸ್ಥಳವೇ

ಕೊಪ್ಪಳ. ನಂತರದ ಸ್ಥಳ ಶ್ರವಣಬೆಳಗೋಳ ಎಂಬುದು ಪ್ರಾದೇಶಿಕ ವ್ಯಾಪ್ತಿಯ ಮೇಲೆ ತಿಳಿಯಬಹುದಾಗಿದೆ. ಹೀಗಾಗಿ ಜೈನಧರ್ಮದ ಮೊದಲ ಮತ್ತು ಆದಿ ಶ್ರದ್ಧಾಕೇಂದ್ರ ಕೊಪ್ಪಳ ಇರಬಹುದೆಂದೆನಿಸುತ್ತದೆ. ಪ್ರಾಚೀನ ಕಾಲದಲ್ಲಿ ಕೊಪ್ಪಳ ಸ್ಥಳವು ಜೈನಧರ್ಮದ ಹಿನ್ನೆಲೆಯಲ್ಲಿ ಶ್ರವಣಬೆಳಗೋಳಕ್ಕಿಂತಲೂ ಹೆಚ್ಚಿನ ಪ್ರಾಮುಖ್ಯತೆ ಮತ್ತು ಐತಿಹಾಸಿಕತೆಯಿಂದ ಕೂಡಿತ್ತೆಂದು ತಿಳಿಯಬಹುದು. ಕೊಪ್ಪಳದಲ್ಲಿ ದೊರೆತ ಅನೇಕ ಜೈನ ಶಾಸನಗಳು, ಮೂರ್ತಿ–ಶಿಲ್ಪಗಳು, ಸ್ಮಾರಕಗಳು, ಬಸದಿಗಳು ಶ್ರವಣಬೆಳಗೋಳಕ್ಕಿಂತಲೂ ಇಲ್ಲಿ ವಿಶಿಷ್ಟತೆಯಿಂದ ಕೂಡಿವೆ ಎಂಬುದನ್ನು ಒಪ್ಪಲೇಬೇಕು. ಇಲ್ಲಿ ಸುಮಾರು 772 ಜೈನ ಬಸದಿಗಳಿದ್ದವೆಂದು ಹೇಳಲಾಗುತ್ತಿದೆ. ಅಲ್ಲದೇ ಅನೇಕ ಜೈನ ಮುನಿಗಳು ಈ ಕೊಪ್ಪಳಕ್ಕೆ ಭೇಟಿಕೊಟ್ಟಿದ್ದಾರೆ. ಜೈನ ಮುನಿಗಳಿಗೆ ತಮ್ಮ ಸ್ಥಳಗಳಲ್ಲಿ ಮುಕ್ತಿದೊರೆಯದಿದ್ದಾಗ ಕೊಪ್ಪಳದಲ್ಲೇ ಬಂದು ಸಲ್ಲೇಖನ ವ್ರತ ಆಚರಣೆ ಮಾಡಿ ಮುಡುಪಿದರೆಂದು ಇಲ್ಲಿನ ಶಾಸನಗಳಲ್ಲಿ ಉಲ್ಲೇಖವಿದೆ. ಅಂದರೆ ಜೈನ ಧರ್ಮಿಯರಿಗೆ ಇದು ಅಷ್ಟೊಂದು ಪವಿತ್ರವಾದ ಸ್ಥಳವಾಗಿತ್ತೆಂದು ತಿಳಿದುಬರುತ್ತದೆ. ಹಿಂದುಗಳಿಗೆ ಹೇಗೆ ಕಾಶಿ ಪವಿತ್ರವಾದ ಸ್ಥಳವಾಗಿದೆಯೊ ಅದರಂತೆ ಇದು 'ಜೈನರ ಕಾಶಿ' ಎಂದು ಕರೆಯಲಾಗುತ್ತಿತ್ತು. ಮತ್ತು ಇಂದಿಗೂ ಸಹ ಇದನ್ನು ಜೈನರ ಕಾಶಿ ಎಂದೇ ಕರೆಯಲಾಗುತ್ತಿದೆ. ಆ ಜೈನ ಮುನಿಗಳು ಭೇಟಿಕೊಟ್ಟ ಕುರುಹುಗಳಾಗಿ ಕೊಪ್ಪಳದ ಅನೇಕ ಶಾಸನಗಳಲ್ಲಿ ಉಲ್ಲೇಖವಿದೆ. ಕೊಪ್ಪಳ ನಗರದಲ್ಲೇ ಸುಮಾರು 120ಕ್ಕೂ ಅಧಿಕ ಶಾಸನಗಳು ಲಭ್ಯವಾಗಿವೆ. ಅದರಲ್ಲಿ ಸುಮಾರು 100ಕ್ಕೂ ಅಧಿಕ ಜೈನ ಶಾಸನಗಳಾಗಿವೆ. ಹೀಗಾಗಿ ಕೊಪ್ಪಳವು ಶ್ರವಣಬೆಳಗೋಳಕ್ಕಿಂತಲೂ ಮೊದಲು ಜೈನಧರ್ಮದ ಕೇಂದ್ರವಾಗಿರಬೇಕು ಎನಿಸುವುದು ಸಹಜ. ಹೀಗಾಗಿ ಈ ಕೊಪ್ಪಳವನ್ನು 'ಆದಿ' ಎಂದು ಸಂಭೋಧಿಸಿರಬೇಕು.

ಇನ್ನು 'ತೀರ್ಥ' ಎಂಬ ಪದದ ಬಗ್ಗೆ ನೋಡುವುದಾದರೆ, ತೀರ್ಥ ಎಂಬ ಪದ ಗೌರವಾರ್ಥವಾಗಿ ಬಳಸಲಾಗುತ್ತದೆ. 'ತೀರ್ಥ' ಎಂದರೆ ಪವಿತ್ರವಾದ ಜಲ ಎಂದು ಅರ್ಥ ಬರುತ್ತದೆ. ಬಹುಶಃ ಪ್ರಾಚೀನ ಕಾಲದಲ್ಲಿ ಇದು ಬಹಳ ಪವಿತ್ರವಾದ ಸ್ಥಳವಾಗಿದ್ದುದರಿಂದ ಇಂತಹ ಪದಗಳ ಉಲ್ಲೇಖ ಬಂದಿರಲು ಸಾಧ್ಯವಿದೆ. ಒಂದು ಶಾಸನದಲ್ಲಿ "ತೀರ್ಥವಂದನಾರ್ಥವಾಗಿ" ಎಂದು ಉಲ್ಲೇಖಿಸಲಾಗಿದೆ. ಅಂದರೆ ತೀರ್ಥವಾದ ಅಥವಾ ಪವಿತ್ರವಾದ ಸ್ಥಳಕ್ಕೆ ವಂದನೆ ಸಲ್ಲಿಸಲು, ನಮಿಸಲು ಇಲ್ಲಿಗೆ ಬಂದಿರಬೇಕು. ಆದ್ದರಿಂದ ಇಂತಹ ಮಾತಿನ ಉಲ್ಲೇಖ ಬಂದಿರಬೇಕು. ಇನ್ನು ಕೆಲ ಶಾಸನ ಮತ್ತು ಕಾವ್ಯಗಳಲ್ಲಿ 'ಮಹಾತೀರ್ಥ' ಎಂತಲೂ ಉಲ್ಲೇಖಗೊಂಡಿದೆ. ತೀರ್ಥ ಸ್ಥಳಗಳಲ್ಲಿ

ಮುಖ್ಯವಾದುದೊ, ಪವಿತ್ರವಾದುದೊ ಅಥವಾ ಮಹಾನ್ ಕ್ಷೇತ್ರವೊ ಈ ಕೊಪ್ಪಳ ಇದ್ದಿರಬೇಕು. ಆದ್ದರಿಂದ ಈ ಉಲ್ಲೇಖ ಬಂದಿರಬಹುದೇನೋ ಅನಿಸುತ್ತದೆ. ಇದರ ಬಗ್ಗೆಯೂ ಸಹ ಇನ್ನೂ ಹೆಚ್ಚಿನ ರೀತಿಯಲ್ಲಿ ಅಧ್ಯಯನಗಳು ನಡೆಯಬೇಕಿದೆ.

9ನೇ ಶತಮಾನದಲ್ಲಿ ಕವಿರಾಜಮಾರ್ಗಕಾರ ಶ್ರೀವಿಜಯ ಉಲ್ಲೇಖಿಸಿದ "ವಿಧಿತ ಮಹಾ ಕೊಪಣನಗರ", 10ನೇ ಶತಮಾನದಲ್ಲಿ ರನ್ನನ ಅಜಿತನಾಥ ಪುರಾಣದಲ್ಲಿ ಉಲ್ಲೇಖಿಸಿದ "ನೆಗಳ್ದ ಕೊಪಣಾಚಳ" ಮತ್ತು ಇದೇ ಕಾಲದ ಚಾವುಂಡರಾಯನ ಚಾವುಂಡರಾಯ ಪುರಾಣದಲ್ಲಿ ಪ್ರಸ್ತಾಪಿಸಿದ "ಕೊಪಣಾದ್ರಿ" ಎಂಬ ಪ್ರಾಚೀನ ಉಲ್ಲೇಖಗಳು ಕೊಪ್ಪಳದ ಹಿರಿಮೆಯನ್ನು ಸಾರುತ್ತವೆ. ಈ ಮೇಲೆ ಉಲ್ಲೇಖಿತ 'ವಿಧಿತ' ಮತ್ತು 'ನೆಗಳ್ದ' ಎಂಬ ಪದಗಳು ಸುಪ್ರಸಿದ್ಧಿ ಎಂಬ ಅರ್ಥವನ್ನು ಕೊಡುತ್ತವೆ. ಈ ಪದಗಳ ಅರ್ಥಗಳ ಹಿನ್ನೆಲೆಯಲ್ಲಿ ನೋಡಿದಾಗ ಪ್ರಾಚೀನ ಕಾಲದಲ್ಲಿ ಕೊಪ್ಪಳವು ಸುಪ್ರಸಿದ್ಧ ' ಮಹಾನಗರವಾಗಿತ್ತೆಂದು ತಿಳಿದುಬರುತ್ತದೆ.

**ಕೊಪ್ಪಂ :–**

"ಕ್ರಿ.ಶ 1054ರಲ್ಲಿ ಚಾಲುಕ್ಯ ಮತ್ತು ಚೋಳರ ನಡುವೆ ನಡೆದ ಯುದ್ಧವು 'ಕೊಪ್ಪಂ' ಯುದ್ಧವೆಂದು ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಚೋಳ ಅರಸ ರಾಜಾಧಿರಾಜನು ತನ್ನ ತಮ್ಮ ಇಮ್ಮಡಿ ರಾಜೇಂದ್ರನೊಂದಿಗೆ ಕೊಪ್ಪಳವನ್ನು ಮುತ್ತಿದನು. ಮೊದಲನೆಯ ಸೋಮೇಶ್ವರನ ನೇತೃತ್ವದಲ್ಲಿ ಚಾಲುಕ್ಯ ಸೈನ್ಯವು ತನ್ನ ಗಮನವೆಲ್ಲ ಆನೆಯ ಮೇಲೆ ಕುಳಿತು ಯುದ್ಧ ಮಾಡುತ್ತಿದ್ದ ಚೋಳ ಅರಸನ ಮೇಲೆ ಕೇಂದ್ರೀಕರಿಸಿತು. ಮೊದಲು ಆನೆಯನ್ನು ಬಾಣಗಳಿಂದ ಘಾಸಿಗೊಳಿಸಿ ನಂತರ ಅರಸನ ಮೇಲೆ ಬಾಣಗಳನ್ನು ಬಿಟ್ಟು ಹತ್ಯೆಮಾಡಲಾಯಿತು. ಈ 'ಕೊಪ್ಪಂ'ನ್ನು 'ಕೊಪ್ಪಳ'ವೆಂದು ಗುರಿತಿಸಿದರೂ ಕೆಲವು ವಿದ್ವಾಂಸರು ಮಹಾರಾಷ್ಟ್ರದಲ್ಲಿಯ ಖಿದ್ರಾಪುರವೆಂದು, ಇನ್ನು ಕೆಲವರು ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಕೊಪ್ಪರವೆಂದೂ ಗುರುತಿಸುತ್ತಾರೆ" ಎಂದು ಡಾ. ಚನ್ನಬಸಪ್ಪ ಎಸ್.ಪಾಟೀಲರವರು ತಮ್ಮ 'ಕರ್ನಾಟಕ ಕೋಟೆಗಳು' ಎಂಬ ಕೃತಿಯಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದರ ಬಗ್ಗೆ ಇನ್ನೂ ಅನೇಕ ಚರ್ಚೆಗಳು ನಡೆಯುತ್ತಿವೆ. ಶಿವಮೊಗ್ಗ ಜಿಲ್ಲೆಯ 'ಕೊಪ್ಪ' ಮತ್ತು ಆಂದ್ರಪ್ರದೇಶದ ಕುಪ್ಪಂ ಗ್ರಾಮಗಳು ಅಂದಿನ 'ಕೊಪ್ಪಂ' ಆಗಿರಬಹುದೇ ಎಂಬ ಚರ್ಚೆಗಳೂ ನಡೆಯುತ್ತಿವೆ. ಅದೇನೆ ಇದ್ದರೂ 'ಕೊಪ್ಪಂ'(ಮ್) ಯಾವುದು ಎಂದು ಚರ್ಚೆಗಳ ಮಧ್ಯೆ ಈ 'ಕೊಪ್ಪಳ'ವೇ ಅಂದಿನ ಆ 'ಕೊಪ್ಪಂ' ಎಂದಾದರೆ ಕೊಪ್ಪಳದ ಇತಿಹಾಸದ ಸ್ಥಾನ–ಮಾನ ಸಾಮಾನ್ಯವಾಗಿರಲು ಸಾಧ್ಯವಿಲ್ಲ.

## ಮುಜಾಫರ್ ನಗರ:–

ಈ ಕೊಪ್ಪಳವನ್ನು ಬಿಜಾಪುರದ ಆದಿಲ್‌ಶಾಹಿಗಳ ಕಾಲದಲ್ಲಿ 'ಮುಜಾಫರ್ ನಗರ' ಎಂತಲೂ ಕರೆಯಲಾಗುತ್ತಿತ್ತು ಎಂದು ಸಂಶೋಧಕರಾದ ಡಾ.ಬಿ.ವಿ.ಶಿರೂರುರವರು ದಾಖಲಿಸಿದ್ದಾರೆ. ಆದಿಲ್‌ಶಾಹಿಗಳು ತಮ್ಮ ಕಾಲಾವಧಿಯಲ್ಲಿ ಈ ಪ್ರದೇಶದಲ್ಲಿ ಆಡಳಿತ ಸುಗಮವಾಗಿ ನಡೆಸಲು ಅಧಿಕಾರಿ ವರ್ಗದವರನ್ನು ನೇಮಿಸಿಕೊಳ್ಳುತ್ತಿದ್ದರು. ಅದರಂತೆ ಈ ಕೊಪ್ಪಳ ಪ್ರದೇಶಕ್ಕೂ 'ಮುಜಾಫರ್' ಎಂಬ ಆಡಳಿತ ಅಧಿಕಾರಿಯನ್ನು ನೇಮಿಸಿಕೊಂಡಿದ್ದರಂತೆ. ಅವನ ಹೆಸರಿನ ಮೇಲೆಯೇ ಈ 'ಮುಜಾಫರ್ ನಗರ' ಕರೆಸಿಕೊಂಡಿರಬೇಕೆಂದು ಊಹಿಸಲಾಗಿದೆ. ಆದರೆ ಸಂಶೋಧಕರಾದ ಡಾ. ಶರಣಬಸಪ್ಪ ಕೋಲ್ಕಾರ್‌ರವರು ಹೇಳುವಂತೆ "ಈ ರೀತಿ ಅಧಿಕಾರಿ ಅಥವಾ ಕೆಳಹಂತದ ನೌಕರರ ಹೆಸರಿನ ಮೇಲೆ ಗ್ರಾಮಗಳ ಹೆಸರು ಕರೆದಿರಲಿಕ್ಕಿಲ್ಲ. ಅರಸರು, ಸುಲ್ತಾನರು ತಮ್ಮ ಹೆಸರಿನ ಅಥವಾ ತಮ್ಮ ಬಿರುದು–ಬಾವಲಿಗಳ ಮೇಲೆಯೇ ಗ್ರಾಮಗಳ ಹೆಸರುಗಳನ್ನು ಬದಲಾಯಿಸಿರುವ ಇಲ್ಲವೇ ಕರೆದಿರುವ ಬಗ್ಗೆ ಇತಿಹಾಸದಲ್ಲಿ ದಾಖಲಾಗಿವೆ. ಹೀಗಾಗಿ ಇದು 'ಮುಜಾಫರ್' ಎಂಬುದು ವ್ಯಕ್ತಿ ಆಗಿರಬಹುದು, ಆದರೆ ಅಧಿಕಾರಿಯಾಗಿರಲು ಸಾಧ್ಯವಿಲ್ಲ" ಎಂದು ಅಭಿಪ್ರಾಯಪಟ್ಟಿದ್ದಾರೆ. ಅವರ ಮತ್ತೊಂದು ಅಭಿಪ್ರಾಯದಂತೆ "ಈ ಕೊಪ್ಪಳವನ್ನು ಯುದ್ಧದಲ್ಲಿ ಗೆದ್ದ ವಿಜಯದ ಸಂಕೇತವಾಗಿ 'ಮುಜಾಫರ್' ಎಂದು ಬಳಸಿರಬಹುದು. ಹೇಗೆಂದರೆ 'ಮುಜಾಫರ್' ಎಂದರೆ ವಿಜಯ ಸಂಕೇತ ಎಂತಲೂ ಇತಿಹಾಸದಲ್ಲಿ ಬಳಸಲಾಗುತ್ತಿತ್ತು. ಹೀಗಾಗಿ ಈ ನಗರಕ್ಕೆ 'ಮುಜಾಫರ್ ಎಂದು ಬಳಸಿರಬಹುದೇನೋ" ಎಂದು ಡಾ.ಕೋಲ್ಕಾರ ಅವರು ಅಭಿಪ್ರಾಯಪಟ್ಟಿದ್ದಾರೆ. ಸುಲ್ತಾನರು ತಮ್ಮ ಹೆಸರಿನ ಮೇಲೆ ಗ್ರಾಮಗಳ ಹೆಸರನ್ನು ಬದಲಾಯಿಸಿರುವುದನ್ನು ಅಥವಾ ಗೆದ್ದ– ವಿಜಯದ ಸಂಕೇತವಾಗಿ ಬದಲಾಯಿಸಿರುವ ಉದಾಹರಣೆಗಾಗಿ ನೋಡುವುದಾದರೆ ಕೊಪ್ಪಳದ ಪಕ್ಕದಲ್ಲಿಯೇ ಇರುವ 'ಬಹದ್ದೂರಬಂಡಿ'ಯ ಕೋಟೆಯನ್ನು ವಶಪಡಿಸಿಕೊಂಡ ನಂತರ ಹೈದರಲಿಯು ಈ ಗ್ರಾಮಕ್ಕೆ ತನ್ನ ಬಿರುದು 'ಬಹದ್ದೂರ್' ಎಂಬ ಹೆಸರನ್ನಿಟ್ಟು ಕರೆದ ಬಗ್ಗೆ ಇತಿಹಾಸದಲ್ಲಿ ದಾಖಲಾಗಿದೆ. ಆದರೆ ಈ 'ಬಹದ್ದೂರ್‌ಬಂಡಿ' ಗ್ರಾಮದ ಮೊದಲಿನ ಹೆಸರು ಮಾತ್ರ ನನಗೆ ಇದುವರೆಗೂ ತಿಳಿದುಬಂದಿರುವುದಿಲ್ಲ. ಹೀಗಾಗಿ 'ಮುಜಫರ್' ಎಂಬ ವ್ಯಕ್ತಿ ಅಧಿಕಾರಿಯಾಗರಲಿಕ್ಕಿಲ್ಲ ಎಂಬ ಅಭಿಪ್ರಾಯ ಇಲ್ಲಿ ವ್ಯಕ್ತವಾಗುತ್ತದೆ. ಹಾಗಾದರೆ ಆ ಮುಜಾಫರ್ ಯಾರು ಎಂಬ ಬಗ್ಗೆ ಸ್ವಲ್ಪಗೊಂದಲ ಸೃಷ್ಟಿಯಾಗುತ್ತದೆ. ಆದರೂ 'ಮುಜಾಫರ್' ಎನ್ನುವುದು ವ್ಯಕ್ತಿಯ ಹೆಸರು ಎಂಬುದು ಮಾತ್ರ ಸತ್ಯ. ಇಂದು

ಉತ್ತರ ಭಾರತದಲ್ಲಿಯೂ ಸಹ ಅನೇಕ 'ಮುಜಾಫರ್' ನಗರಗಳಿವೆ. ಹಾಗಾದರೆ ಕೊಪ್ಪಳದ ಆ 'ಮುಜಾಫರ್' ಯಾರು? ಈ ನಾಮಕರಣವನ್ನು ಮಾಡಿವರು ಯಾರು? ಯಾವ ಕಾಲದಲ್ಲಿ ಮತ್ತು ಯಾವ ಕಾರಣಕ್ಕಾಗಿ 'ಮುಜಾಫರ್' ಎಂದು ಕರೆದರು ಎನ್ನುವುದು ಮಾತ್ರ ಅಸ್ಪಷ್ಟ. ಇದರ ಮೇಲೆ ಹೆಚ್ಚಿನ ಇನ್ನೂ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ. ಆಗ ಮಾತ್ರ 'ಮುಜಾಫರ್'ನ ಪೂರ್ಣ ಹಿನ್ನೆಲೆ ದೊರೆಯುತ್ತದೆ.

**ಸುಲ್ತಾನಗಡ:–**

ಕೊಪ್ಪಳವನ್ನು 'ಸುಲ್ತಾನಗಡ' ಎಂಬ ಹೆಸರಿನಿಂದಲೂ ಕರೆದ ಬಗ್ಗೆ ಸಂಶೋಧಕರಾದ ಡಾ.ಬಿ.ವಿ.ಶಿರೂರುರವರು ದಾಖಲಿಸಿದ್ದಾರೆ. ಟಿಪ್ಪುಸುಲ್ತಾನನು ಮರಾಠರೊಂದಿಗೆ ಹೋರಾಟ ಮಾಡಿ ಈ ಸ್ಥಳವನ್ನು ವಶಪಡಿಸಿಕೊಂಡ ನಂತರ ಈ ಸ್ಥಳಕ್ಕೆ 'ಸುಲ್ತಾನಗಡ' ಎಂದು ಕರೆದನೆಂದು ಚರಿತ್ರೆಯಲ್ಲಿ ದಾಖಲಾಗಿದೆ. ಇಲ್ಲಿ 'ಸುಲ್ತಾನಗಡ' ಎಂಬ ಶಬ್ದವು 'ಸುಲ್ತಾನ' ಮತ್ತು 'ಗಡ' ಎಂಬ ಎರಡು ಶಬ್ದಗಳಿಂದ ಮಿಳಿತವಾಗಿದೆ. ಎರಡೂ ಶಬ್ದಗಳು ಫರ್ಷಿಯನ್ ಭಾಷೆಯ ಶಬ್ದಗಳಾಗಿವೆ. 'ಸುಲ್ತಾನ' ಎಂದರೆ ಮುಸಲ್ಮಾನ ದೊರೆ ಅಥವಾ ರಾಜ ಎಂಬ ಅರ್ಥಗಳನ್ನು ಕೊಟ್ಟರೆ, 'ಗಡ' ಎಂದರೆ ಕೋಟೆ ಎಂಬ ಅರ್ಥವನ್ನು ಕೊಡುತ್ತದೆ. ಹೀಗಾಗಿ ಈ ಗ್ರಾಮವನ್ನು ಸುಲ್ತಾನನು ತನ್ನ ಹೆಸರಿನ ಮೇಲೆ ಕರೆದಿರುವ ಅಥವಾ ಸುಲ್ತಾನರಿಗೆ ಸೇರಿದ ಗ್ರಾಮ ಅಥವಾ ಕೋಟೆ ಎಂಬ ಅರ್ಥದಲ್ಲಿಯೂ ಬಳಸಿರುವ ಸಾಧ್ಯತೆಯಿದೆ.

ಬಿಜಾಪುರ ಆದಿಲ್‌ಶಾಹಿಗಳ ಕಾಲದಲ್ಲಿ ಆಡಳಿತದ ಅನುಕೂಲಕ್ಕಾಗಿ ಮುವಾಮಲಾ, ಖಲಾಹ ಮತ್ತು ಪರಗಣ ಎಂಬ ಆಡಳಿತದ ಘಟಕಗಳನ್ನು ರಚಿಸಿಕೊಂಡಿದ್ದರು. ಕೊಪ್ಪಳವು 'ಖಲಾಹ' ಎಂಬ ಆಡಳಿತದ ಘಟಕದೊಳಗೆ ಸೇರಿಕೊಂಡಿತ್ತು. ಇನ್ನೂ ಇಪ್ಪತ್ತು ನಗರಗಳು ಈ ಘಟಕದೊಳಗೆ ಸೇರಿಕೊಂಡಿದ್ದವು. ಮುವಾಮಲಾ, ಪರಗಣ ಮತ್ತು ಖಲಾಹ ಎಂಬ ಶಬ್ದಗಳು ಅರೇಬಿಕ್ ಭಾಷೆಯ ಪದಗಳಾಗಿವೆ. ಖಲಾಹ ಎಂದರೆ 'ಕೋಟೆ' ಅಥವಾ 'ಶ್ರೀಮಂತ ಗೃಹ' ಎಂಬ ಅರ್ಥಗಳನ್ನು ಕೊಡುತ್ತದೆ. ಇಂದಿಗೂ ಸಹ ಸಾಮಾನ್ಯವಾಗಿ ಬೆಟ್ಟದಮೇಲಿರುವ ಕೋಟೆಗಳನ್ನು ಖಿಲ್ಲೆ, ಖಿಲ್ಲಾ ಎಂದೂ ಕರೆಯಲಾಗುತ್ತಿದೆ. ಈ 'ಖಲಾಹ' ಘಟಕಗಳಲ್ಲಿ ಬಂದ ಉತ್ಪನ್ನದಲ್ಲಿ ಹೆಚ್ಚಿನ ಮೊತ್ತವನ್ನು ಕೋಟೆಯ ನಿರ್ವಾಹಣೆಗಾಗಿ ನೀಡಬೇಕಿತ್ತು. ಈ ಪದ್ಧತಿ ಇತರೆ ಪರಗಣ ಅಥವಾ ಮುವಾಮಲಾ ಘಟಕಗಳಿಗೆ ಅನ್ವಯಿಸುತ್ತಿರಲಿಲ್ಲ. ಹೀಗಾಗಿ ಕೋಟೆಯ ಈ ಗ್ರಾಮದಲ್ಲಿ ಕೋಟೆಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗುತ್ತಿತ್ತೆಂದು ತಿಳಿದುಬರುತ್ತದೆ.

ಒಟ್ಟಾರೆಯಾಗಿ ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಇದಕ್ಕೆ ಸುಲ್ತಾನಗಡ, ಸುಲ್ತಾನನ ಕೋಟೆಯ ಗ್ರಾಮ ಅಥವಾ ಅರಸನ ಕೋಟೆಯ ಗ್ರಾಮ ಎಂದು ಕರೆದಿರುವ ಸಾಧ್ಯತೆಯಿದೆ.

### ಕುಪ್ಪೆ:–

ಇನ್ನು ಕೆಲ ಕಾವ್ಯ ಮತ್ತು ಶಾಸನಗಳಲ್ಲಿ ಈ ಕೊಪ್ಪಳಕ್ಕೆ 'ಕುಪ್ಪೆ' ಎಂದೂ ಉಲ್ಲೇಖವಾಗಿದೆ. ನಾವು ಸಾಮಾನ್ಯವಾಗಿ ಕುಪ್ಪೆ ಎಂದರೆ ಗುಡ್ಡೆ, ದಿಬ್ಬ, ದಿನ್ನೆ ಮುಂತಾಗಿ ಕರೆಯುತ್ತೇವೆ. ಶಾಸನ ಮತ್ತು ಕಾವ್ಯಗಳಲ್ಲಿ ಉಲ್ಲೇಖಿತ, ವರ್ಣಿಸಿದ ಕೊಪ್ಪಳ ಬೆಟ್ಟವು ಅಚಲವಾದದ್ದು ಮತ್ತು ವಿಶಾಲವಾದದ್ದು. ಇಂತಹ ಬೆಟ್ಟದ ಮೇಲೆ ಆ ಪ್ರದೇಶದಲ್ಲಿ ವಾಸಿಸುವವರಿಗೆ ಮತ್ತು ಆ ಪ್ರದೇಶಕ್ಕೆ 'ಕುಪ್ಪೆ' ಎಂದು ಕರೆದಿರುವ ಸಾಧ್ಯತೆಯಿದೆ.

### ಕೊಪ್ಪಲ>ಲ್–ಕೊಪ್ಪಳ್>ಳ:–

ಕ್ರಿ.ಶ ಸುಮಾರು 17ನೇ ಶತಮಾನದಿಂದ 19ನೇ ಶತಮಾನದವರೆಗಿನ ಬ್ರಿಟಿಷರ ಮತ್ತು ನಿಜಾಮರ ಅವಧಿಯಲ್ಲಿಯೂ ಈ ಕೊಪ್ಪಳದ ನಾಮವು ವಿಶಿಷ್ಟವಾಗಿ ಕರೆಸಿಕೊಳ್ಳುತ್ತಾ ಬಂದಿರುವುದು ಇತಿಹಾಸದಲ್ಲಿ ಕಾಣುತ್ತೇವೆ. ಕೊಪ್ಪಳ್, ಕೊಪ್ಪಲ, ಕೊಪ್ಪಲ್, ಕೊಪಬಾಲ, ಮುಂತಾಗಿ ಕರೆಸಿಕೊಂಡಿದೆ. ಇಲ್ಲಿ ಇಂಗ್ಲೀಷ್, ಉರ್ದು ಮತ್ತು ಉತ್ತರ ಭಾರತದ ಹಲವು ಭಾಷೆಗಳ ಪ್ರಭಾವದಿಂದ ಹೀಗೆ ಕರೆಸಿಕೊಂಡಿರುವ ಸಾಧ್ಯತೆ ಇರುವುದನ್ನು ನಾವು ಕಾಣುತ್ತೇವೆ. ಉತ್ತರ ಭಾರತದ ಬಹುತೇಕ ಭಾಷೆಗಳಲ್ಲಿ 'ಳ'ಕಾರದ ಬದಲಾಗಿ 'ಲ'ಕಾರವನ್ನು ಬಳಸಲಾಗುತ್ತಿದೆ. ಮತ್ತು 'ಳ' ಮತ್ತು 'ಲ' ಕಾರಗಳನ್ನು ವ್ಯಂಜನಗಳನ್ನಾಗಿ ಬಳಸಲಾಗುತ್ತಿದೆ. ಹೀಗಾಗಿ 'ಕೊಪ್ಪಳ'ವು 'ಕೊಪ್ಪಳ್' ಆಗಿ 'ಕೊಪ್ಪಲ'ವು 'ಕೊಪ್ಪಲ್' ಆಗಿ ಪರಿವರ್ತನೆಯಾಗಿರುವುದು ಸಾಮಾನ್ಯವಾದ ಸಂಗತಿಯಾಗಿದೆ.

ಹೀಗೆ ಕೊಪ್ಪಳ ಸ್ಥಳನಾಮವು ವಿವಿಧ ರೀತಿಯಲ್ಲಿನ ಪ್ರಯೋಗಗಳು ಕಂಡುಬರುತ್ತಿವೆ. ಕ್ರಿ.ಪೂ. ಸುಮಾರು 3ನೇ ಶತಮಾನದಿಂದ ಹಿಡಿದು ಕ್ರಿ.ಶ 19ನೇ ಶತಮಾನದವರೆಗೆ ಹೇಗೆ ವಿವಿಧ ಆಯಾಮಗಳಲ್ಲಿ ಪ್ರಯೋಗಗೊಳ್ಳುತ್ತಾ ಬಂದಿರುವುದು ಕಂಡುಬರುತ್ತದೆ. ಸರಿ ಸುಮಾರು ಎರಡೂವರೆ ಸಾವಿರ ವರ್ಷಗಳ ಕಾಲ ಕೊಪ್ಪಳ ಸ್ಥಳನಾಮದ ಹೆಸರು ಹೀಗೆ ವಿಶಿಷ್ಟವಾಗಿ ಕರೆಸಿಕೊಂಡಿದೆ ಎಂಬುದನ್ನು ಇತಿಹಾಸದಲ್ಲಿ ಕಾಣುತ್ತೇವೆ. ಅದು ಬರೀ ಪ್ರಯೋಗಗೊಂಡ ಹೆಸರಷ್ಟೇ ಅಲ್ಲ. ಅದು ಇತಿಹಾಸ, ಸಂಸ್ಕೃತಿ, ಪರಿಸರದ ಪರಿಚಯ ಎಂಬಂತೆ ಪ್ರಯೋಗವಾಗುತ್ತಾ ಬಂದಿದೆ. ಇಂದು ಎಲ್ಲರ ಬಾಯಲ್ಲಿ 'ಕೊಪ್ಪಳ' ಎಂದು ಕರೆಸಿಕೊಳ್ಳುತ್ತಿದೆ.

ಇಂದು ಗ್ರಾಮಗಳು ನಗರೀಕರಣದತ್ತ ಸಾಗುತ್ತಿರುವ ಕಾಲ. ಹಳ್ಳಿಗಳು ಜಾಗತೀಕರಣದ ಕಡೆಗೆ ನಡೆಯುತ್ತಿರುವ ಇಂತಹ ಕಾಲದಲ್ಲಿ ವಿದೇಶಿ ಪ್ರಭಾವ, ಇಂಗ್ಲೀಷ್ ಪ್ರಭಾವ, ಅನ್ಯ ಸಂಸ್ಕೃತಿಗಳ ಪ್ರಭಾವದಿಂದ ಗ್ರಾಮನಾಮಗಳ ಮೇಲೂ ಜಾಗತೀಕರಣದ ವಾಸನೆ ಬೀರುತ್ತಿದೆ. ಇಂಗ್ಲೀಷ್ ಪ್ರಭಾವದ ಮೇಲೆ ಗ್ರಾಮನಾಮಗಳು ರಚನೆಯಾಗುತ್ತಿವೆ. ಆದರೆ ಅವುಗಳಿಗೆ ಯಾವುದೇ ಹಿನ್ನೆಲೆ ಇರುವುದಿಲ್ಲ, ಐತಿಹಾಸಿಕತೆ ಇರುವುದಿಲ್ಲ, ಪ್ರಾಕೃತಿಕ ಅಂಶಗಳೂ ಸಹ ಅಲ್ಲಿ ಕಂಡುಬರುವುದಿಲ್ಲ. ಅಷ್ಟೇ ಅಲ್ಲ ಇಂದು ಎಷ್ಟೋ ಗ್ರಾಮ ನಾಮಗಳು ಕಾಟಾಚಾರಕ್ಕೆ ಎಂಬಂತೆ ಕರೆಯಲಾಗುತ್ತಿವೆ. ಅಂತಹವುಗಳಿಂದ ಯಾವುದೇ ಚಾರಿತ್ರಿಕ ಅಂಶಗಳು ಲಭ್ಯವಾಗುವುದಿಲ್ಲ, ಇಂತಹ ಗ್ರಾಮಗಳ ಹೆಸರಿನಿಂದ ಏನೂ ತಿಳಿಯದು ಎಂಬುದು ನನ್ನ ಭಾವನೆ.

**ಆಕರ ಗ್ರಂಥಗಳು :–**


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಸಂ. ಹನುಮಾಕ್ಷಿ ಗೋಗಿ, ಕಲಬುರ್ಗಿ ಜಿಲ್ಲೆಯ ಶಾಸನಗಳು,–ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ–1996
3) ಬಿ.ಸಿ.ಪಾಟೀಲ, ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಹರಿಹರ ಪ್ರಕಾಶನ ಕೊಪ್ಪಳ–1998
4) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020
5) ಸಂ. ಡಾ.ಆರ್. ಗೋಪಾಲ್, ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು–2010
6) ಸಂ. ಎಚ್.ಎಸ್.ಪಾಟೀಲ, ಕೊಪಣಸಿರಿ, ಅಖಿಲ ಭಾರತ 78ನೇ ಕನ್ನಡ ಸಾಹಿತ್ಯ ಸಮ್ಮೇಳನ, ಗಂಗಾವತಿ–2011
7) ಎಸ್.ವೈ.ಸೋಮಶೇಖರ ಮತ್ತು ಇತರರು ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–2001
8) ಹಂಪ ನಾಗರಾಜಯ್ಯ, ಕೊಪ್ಪಳ ಶಾಸನಗಳು, ರತ್ನತ್ರಯ ಪ್ರಕಾಶನ, ಮೈಸೂರು–1998
9) ಡಾ. ಜಾಜಿ ದೇವೇಂದ್ರಪ್ಪ, ಸ್ಥಳನಾಮಗಳು; ತೌಲನಿಕ ಅಧ್ಯಯನ (ಮೂರನೆ ಮುದ್ರಣ), ಎಸ್.ಎಲ್.ಎನ್. ಪಬ್ಲಿಕೇಷನ್, ಬೆಂಗಳೂರು–2018

10) ಸಂ. ಕೆ.ವಿ.ನಾರಾಯಣ, ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
11) ಸಂ.ಪ್ರೊ.ಡಿ.ಲಿಂಗಯ್ಯ ಮತ್ತು ಡಾ.ಚಕ್ಕೆರೆ ಶಿವಶಂಕರ, ಸ್ಥಳನಾಮಗಳ ಅಧ್ಯಯನ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು–2008
12) ಡಾ. ಎಂ. ನಂಜಯ್ಯ ಹೊಂಗನೂರು, ಸ್ಥಳನಾಮಗಳು, ಮೈಸೂರು ವಿಶ್ವವಿದ್ಯಾಲಯ–2009
13) ಡಾ.ಕೂಡ್ಲೂರು ವೆಂಕಟಪ್ಪ, ಸ್ಥಳನಾಮ ವೀರರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–2007
14) ಗುರುಮೂರ್ತಿ ಪೆಂಡಕೂರು, ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–2006
15) ಡಾ.ಎಚ್.ಎಲ್.ನಾಗೇಗೌಡ, ಪ್ರವಾಸಿ ಕಂಡ ಇಂಡಿಯಾ ಸಂಪುಟ– 1, ಐಬಿಎಚ್ ಪ್ರಕಾಶನ, ಬೆಂಗಳೂರು–2006
16) ಡಾ.ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ.450–1150),(5ನೇ ಮುದ್ರಣ), ಸ್ವಪ್ನಬುಕ್ ಹೌಸ್, ಬೆಂಗಳೂರು–ನ.2011
17) ಕೆ.ಪಿ. ಪೂಣಚ್ಚ, ಎಕ್ಸವೆಷನ್ ಎಟ್ ಕನಗನಹಳ್ಳಿ, ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ, ಧಾರವಾಡ – 2011
18) ನಾ.ಭಾ.ಶಾಸ್ತ್ರಿಗಳು, ಕೋಪಣ–ಕೊಪ್ಪಳ, ನ್ಯೂ ಗದಗ ಪ್ರಿಂಟರಿ, ಗದಗ–1987
19) ಹಂಪ ನಾಗರಾಜಯ್ಯ, ರನ್ನ ಸಂಪುಟ –2, ಕನ್ನಡ ವಿಶ್ವವಿದ್ಯಾಲಯ, ಹಂಪಿ–2006
20) ಕವಿರಾಜಮಾರ್ಗ (ಅಂತರಜಾಲದಿಂದ)
21) ಡಾ.ಎಂ.ಚಿದಾನಂದಮೂರ್ತಿ, ಭಾಷಾ ವಿಜ್ಞಾನ ಮೂಲ ತತ್ವಗಳು, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು–2013 (ಹನ್ನೆರಡನೆಯ ಮುದ್ರಣ)
22) ಸಂ. ಡಾ.ದೇವರಕೊಂಡಾರಡ್ಡಿ, ಇತಿಹಾಸ ದರ್ಶನ–2018, ಸಂಪುಟ–33, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು–2018
23) ಡಾ.ಎಸ್.ಎಂ.ವೃಷಭೇಂದ್ರಸ್ವಾಮಿ, ಗವಿದೀಪ್ತಿ, ಶ್ರೀ ಗವಿಸಿದ್ಧೇಶ್ವರ ಕೃಪಾಪೋಷಿತ ವಿದ್ಯಾರ್ಥಿ ಬಳಗ, ಶ್ರೀ ಗವಿಮಠ, ಕೊಪ್ಪಳ–1976
24) ಡಾ.ಆರ್.ಕೆ.ಕುಲಕರ್ಣಿ, ಆದಿಲಶಾಹಿ ಸಾಹಿತ್ಯ ಸಂಪುಟ–17, ವಚನಪಿತಾಮಹ ಡಾ.ಫ.ಗು.ಹಳಕಟ್ಟಿ ಸಂಶೋಧನಾ ಕೇಂದ್ರ, ಬಿಜಾಪುರ–2017
25) ಡಾ.ಕೃಷ್ಣ ಕೋಲ್ಹಾರಕುಲಕರ್ಣಿ, ಆದಿಲಶಾಹಿ ಸಾಹಿತ್ಯ ಸಂಪುಟ–18, ವಚನಪಿತಾಮಹ ಡಾ.ಫ.ಗು.ಹಳಕಟ್ಟಿ ಸಂಶೋಧನಾ ಕೇಂದ್ರ, ಬಿಜಾಪುರ–2017

26) ಡಾ. ಚನ್ನಬಸಪ್ಪ ಎಸ್. ಪಾಟೀಲ್, ಕರ್ನಾಟಕ ಕೋಟೆಗಳು, ಸಂಪುಟ–1, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999

27) ಸಂ. ಹನುಮಂತಪ್ಪ ಅಂಡಗಿ ಚಿಲವಾಡಗಿ, ಗವಿ ಬೆಳಕು, ಜನಪದ ಪ್ರಕಾಶನ, ಭಾಗ್ಯನಗರ–ಕೊಪ್ಪಳ–2011

28) 75 ಸ್ವಾತಂತ್ರ್ಯದ ಅಮೃತ ಮಹೋತ್ಸವ 2022 ವಿಶೇಷಾಂಕ, ಬಹುತ್ವ ಭಾರತ ಕನ್ನಡನೆಟ್.ಕಾಂ ಆನ್‌ಲೈನ್ ಪತ್ರಿಕೆ, ಕೊಪ್ಪಳ–2022

29) ದಿನಾಂಕ 02–02–2020, 09–02–2020 ಮತ್ತು 05–12–2021ರ ಪ್ರಜಾವಾಣಿ ಸಾಪ್ತಾಹಿಕ ಪುರವಣಿಗಳು

30) P. B. Desai,Jainism In South India and some Jain Epigraphs, Gulabchand Hirachand Doshi-1957

31) Bhasker Anand Saletor, Medieval Jainism, Karnataka Publishing, Bombay-1938

* * * * *

# ಕೊಪ್ಪಳ ಇಂದ್ರಕೀಲ ಪರ್ವತದ ಮಳೆಮಲ್ಲೇಶ್ವರ ಮತ್ತು ಪರಿಸರದ ಇತಿಹಾಸ

ಕೊಪ್ಪಳದ ಇತಿಹಾಸವು ಪುರಾಣ ಕಾಲದ ಚರಿತ್ರೆಯೊಂದಿಗೆ ತಳುಕು ಹಾಕಿಕೊಂಡಿದೆ. ಪುರಾಣವೆಂದರೆ ನಿನ್ನೆ-ಮೊನ್ನೆ ರಚಿಸಿದ ಪುರಾಣಗಳಲ್ಲ. ಸಾವಿರಾರು ವರ್ಷಗಳ ಹಿಂದೆ ರಚಿಸಿದ ಪುರಾಣಗಳಲ್ಲಿ ಕೊಪ್ಪಳದ ಪ್ರದೇಶಗಳ ಉಲ್ಲೇಖಗಳು ಬರುವುದರಿಂದ ಇದರ ಚರಿತ್ರೆ ಅರಿಯುವುದು ಅಷ್ಟು ಸುಲಭವಲ್ಲ. ಕ್ರಿ.ಶ.ಪೂ ಸಾವಿರಾರು ವರ್ಷಗಳ ಹಿಂದೆ ರಚಿಸಿದ ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳಲ್ಲೇ ಈ ಪರಿಸರದ ಬಗ್ಗೆ ಉಲ್ಲೇಖವಿದೆ. ಹೀಗಾಗಿ ಕೊಪ್ಪಳದ ಚರಿತ್ರೆ ಬಹಳ ದೂರವೇ ಇದೆ ಎನ್ನಬಹುದು.

ಕೊಪ್ಪಳ ಪ್ರದೇಶಗಳ ಬಗ್ಗೆ ರಾಮಾಯಣ ಕಾವ್ಯದಲ್ಲಿ ಕಿಷ್ಕಿಂದೆ ಪ್ರದೇಶ ಮತ್ತು ಮಹಾಭಾರತದಲ್ಲಿ ಇಂದ್ರಕೀಲ ಪರ್ವತದ ಉಲ್ಲೇಖಗಳಿವೆ. ರಾಮಾಯಣದ ಕಿಷ್ಕಿಂದೆಯು ಇಂದಿನ ಆನೆಗುಂದಿ-ಹಂಪಿ ಪ್ರದೇಶ ಎಂದು ಹೇಳಲಾಗುತ್ತಿದೆ. ಅದಕ್ಕೆ ಸಾಕ್ಷಿ ಎಂಬಂತೆ ಈ ಪ್ರದೇಶದಲ್ಲಿ ಅನೇಕ ಪುರಾಣಗಳು, ಶಾಸನಗಳು, ಪ್ರಾಕೃತಿಕ ಆಧಾರಗಳು, ನಂಬಿಕೆ-ಐತಿಹ್ಯಗಳು ಇಲ್ಲಿ ದೊರಕಿವೆ. ಅದರಂತೆ ಮಹಾಭಾರತದಲ್ಲಿ ಉಲ್ಲೇಖಿತ ಇಂದ್ರಕೀಲ ಪರ್ವತವೇ ಕೊಪ್ಪಳದ ಹತ್ತಿರವಿರುವ ಇಂದಿನ 'ಮಳೆಮಲ್ಲೇಶ್ವರ ಪರ್ವತ' ಎಂದು ಹೇಳಲಾಗುತ್ತಿದೆ. ಅದಕ್ಕೆ ಸಾಕ್ಷಿ ಎಂದರೆ ಸಾವಿರಾರು ವರ್ಷಗಳಿಂದ ನಂಬಿಕೊಡು ಬಂದಿರುವ ಇಲ್ಲಿನ ಅನೇಕ ಪುರಾಣಗಳು, ಐತಿಹ್ಯಗಳೇ ಆಧಾರಗಳಾಗಿವೆ.

ಮಳೆಮಲ್ಲೇಶ್ವರ ಪರ್ವತ, ಮಳೆಮಲ್ಲೇಶ್ವರ ಬೆಟ್ಟ, ಮಳೆಮಲ್ಲಪ್ಪನ ಬೆಟ್ಟ, ಮಳೆಮಲ್ಲಪ್ಪನ ಪರ್ವತ, ಇಂದ್ರಕೀಲ ಪರ್ವತ ಇತ್ಯಾದಿ ಹೆಸರುಗಳಿಂದ ಕರೆಸಿಕೊಳ್ಳುತ್ತಿರುವ ಈ ಪರ್ವತವು ಕೊಪ್ಪಳ ನಗರದಿಂದ ಸುಮಾರು ಎರಡು-ಮೂರು ಕಿ.ಮೀ ದೂರದಲ್ಲಿದೆ. ನಗರದ ದಕ್ಷಿಣಕ್ಕಿರುವ ಈ ಪರ್ವತವು ವಿಶಾಲವಾಗಿ ಪೂರ್ವದವರೆಗೂ ಸುಮಾರು ನಾಲ್ಕಾರು ಕಿ.ಮೀ.ಗಳವರೆಗೂ ವಿಶಾಲವಾಗಿ ಹರಡಿಕೊಂಡಿದೆ. ಇಂದು ಈ ಪರ್ವತವು ಕೇವಲ 'ಇಂದ್ರಕೀಲ ಪರ್ವತ' ಅಥವಾ 'ಮಳೆಮಲ್ಲೇಶ್ವರ ಬೆಟ್ಟ' ಎಂದಷ್ಟೇ ಕರೆಸಿಕೊಳ್ಳುತ್ತಿರಬಹುದು. ಆದರೆ ಈ ಪರ್ವತದ ಪ್ರಾಚೀನ ಕಾಲದ ಚರಿತ್ರೆಯನ್ನು ಅಧ್ಯಯನ ಮಾಡಿದಾಗ ಅದರ ಇತಿಹಾಸದ ಮಹತ್ವ ತಿಳಿದುಬರುತ್ತದೆ. ಕ್ರಿ.ಶ.ಪೂ ಸುಮಾರು ಹತ್ತು-ಹದಿನೈದು ಸಾವಿರ ವರ್ಷದ ಹಿಂದಿನ ಚರಿತ್ರೆಯಿಂದ ಇಂದಿನವರೆಗೂ ತಿಳಿದುಬರುತ್ತದೆ. 'ಮಲೆ' ಎಂದರೆ ಸಾಮಾನ್ಯ ಅರ್ಥದಲ್ಲಿ 'ಬೆಟ್ಟ' ಅಥವಾ 'ಪರ್ವತ' ಎಂದಾಗುತ್ತದೆ. ಸಾಮಾನ್ಯವಾಗಿ ಅದನ್ನು

'ಮಲೆ'ಯ ಬದಲಾಗಿ 'ಮಳೆ' ಎಂಬ ಪದ ಪ್ರಯೋಗಿಸಲಾಗುತ್ತಿದೆ. ಹೀಗಾಗಿ ಇದಕ್ಕೆ 'ಮಳೆ'ಮಲ್ಲೇಶ್ವರ ಎಂದು ಕರೆದಿರಬಹುದು.

**ಮಹಾಭಾರತದ ಇಂದ್ರಕೀಲ ಪರ್ವತವೇ?:–** ಇದನ್ನು ಮಹಾಭಾರತದ ಇಂದ್ರಕೀಲ ಪರ್ವತ ಎಂದು ಕರೆಯಲಾಗುತ್ತಿದೆ. ಅರ್ಜುನನು ತಪಸ್ಸಿಗೆ ಕುಳಿತದ್ದು ಇದೇ ಪರ್ವತದಲ್ಲಿ ಎಂದು ಹೇಳಲಾಗುತ್ತಿದೆ. ಅರ್ಜುನನ ತಪಸ್ಸನ್ನು ಭಂಗಗೊಳಿಸಲು ಶಿವನು ಹಂದಿಯ ವೇಷದಲ್ಲಿ ಬಂದು ಭಂಗಗೊಳಿಸುತ್ತಾನೆ. ಆಗ ಕುಪಿತನಾದ ಅರ್ಜುನನು ಶಿವನ ಮೇಲೆ ಯುದ್ಧ ಮಾಡುತ್ತಾನೆ. ಆ ಯುದ್ಧದಲ್ಲಿ ಅರ್ಜುನನು ಜಯಗಳಿಸುತ್ತಾನೆ. ಆಗ ಅರ್ಜುನನ್ನು ಮೆಚ್ಚಿದ ಶಿವನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ನೀಡುತ್ತಾನೆ. ಅದನ್ನೇ ಕೊನೆಗೆ ಕರ್ಣನ ಮೇಲೆ ಪ್ರಯೋಗಮಾಡಿ ಸಾಯಿಸುತ್ತಾನೆಂದು ಹೇಳಲಾಗುತ್ತಿದೆ. ಅರ್ಜುನನು ತಪಸ್ಸು ಮಾಡಿದ ಮತ್ತು ಶಿವನ ಜೊತೆ ಯುದ್ಧ ಮಾಡಿದ ಇಂದ್ರಕೀಲ ಪರ್ವತವೇ ಇಂದಿನ ಕೊಪ್ಪಳದ ಈ ಮಳೆಮಲ್ಲೇಶ್ವರ ಪರ್ವತ ಎಂದು ಇಲ್ಲಿನ ಜನರ ನಂಬಿಕೆಯಾಗಿದೆ. ಪುರಾತತ್ವ ಇಲಾಖೆ ಸಂಶೋಧಕರಾಗಿದ್ದ ಶ್ರೀ ಯಾಜ್ದಾನಿಯವರೇ ಇದನ್ನು ಮೊದಲು ಇಂದ್ರಕೀಲ ಪರ್ವತ ಎಂದು ಕರೆದರೆಂದು ತಿಳಿದು ಬಂದರೂ ದಿ॥ನಾ.ಭಾ.ಶಾಸ್ತ್ರಿಗಳು ವಿವರಿಸಿದ್ದಂತೆ ಅದನ್ನು ಇಲ್ಲಿನ ಜನರ ಬಾಯಿಂದಲೇ ವಿಷಯ ಸಂಗ್ರಹಿಸಿದ ಮೇಲೆಯೇ ಶ್ರೀ ಯಾಜ್ದಾನಿಯವರು ಉಲ್ಲೇಖಿಸಿದ್ದಾರೆಂದು ವಿವರಿಸಿದ್ದಾರೆ. ಅದೇನೇ ಇದ್ದರೂ ಇಲ್ಲಿನ ಜನರು ಈ ಪರ್ವತವನ್ನು ಅರ್ಜುನನು ತಪಸ್ಸು ಮಾಡಿದ 'ಇಂದ್ರಕೀಲ ಪರ್ವತವೇ' ಇದು ಎಂದು ಸಾವಿರಾರು ವರ್ಷಗಳಿಂದ ನಂಬಿಕೊಂಡು ಬಂದಿರುವ ನಂಬಿಕೆ ಮಾತ್ರ ಸುಳ್ಳಲ್ಲ.

**ಶಿಲಾಸಮಾಧಿಗಳು:–** ಈ ಪರ್ವತದ ಮೇಲೆ ಅನೇಕ ಶಿಲಾಸಮಾಧಿಗಳನ್ನು ಕಾಣಬಹುದಾಗಿದೆ. ಇವು ಕ್ರಿ.ಪೂ ಸುಮಾರು 1500 ವರ್ಷಗಳ ಕೆಳಗೆ ನಿರ್ಮಾಣಗೊಂಡಿರಬಹುದೆಂದು ಇತಿಹಾಸಕಾರರ ಅಭಿಪ್ರಾಯವಾಗಿದೆ. ಅವು ಆದಿಮಾನವರ ಸಮಾಧಿಗಳಾಗಿವೆ. ಪ್ರಾಚೀನ ಕಾಲದಲ್ಲಿ ಮಾನವರು ಸತ್ತಾಗ ಕ್ರಮಬದ್ಧವಾಗಿ ಈ ರೀತಿಯಲ್ಲಿ ಶವಸಂಸ್ಕಾರ ಮಾಡುವ ಪದ್ಧತಿಯನ್ನು ಇಟ್ಟುಕೊಂಡಿದ್ದರು. ಅವುಗಳು ಕುರುಹುಗಳು ಎಂಬಂತೆ ಇಂದು ಶಿಲಾಸಮಾಧಿಗಳ ರೂಪದಲ್ಲಿ ನಿಂತಿವೆ. ಇಂತಹ ಶಿಲಾಸಮಾಧಿಗಳು ಜಿಲ್ಲೆಯ ಕೆಲ ಭಾಗಗಳಲ್ಲಿ ಕಂಡುಬಂದರೂ ಗಂಗಾವತಿಯ ಹಿರೇಬೆಣಕಲ್ ಗ್ರಾಮದ ಬೆಟ್ಟದ ಮೇಲೆ ಹೆಚ್ಚಾಗಿ ಇರುವುದನ್ನು ಕಾಣಬಹುದಾಗಿದೆ. ಜಿಲ್ಲೆಯ ಹಿರೇಬೆಣಕಲ್ ಹೊರತುಪಡಿಸಿದರೆ ಹೆಚ್ಚಿನ ಪ್ರಮಾಣದಲ್ಲಿ ಶಿಲಾಸಮಾಧಿಗಳು ಸಿಗುವ ಪ್ರದೇಶವೇ ಈ ಮಳೆಮಲ್ಲೇಶ್ವರ ಪರ್ವತ. ಅದರೆ ಇಲ್ಲಿರುವ ಸಮಾಧಿಗಳು ಸಂಪೂರ್ಣ ನೆಲಕಚ್ಚಿ ಬಿದ್ದಸ್ಥಿತಿಯಲ್ಲಿವೆ.

ಅವು ನೆಲದ ಮೇಲೆ ಬಿದ್ದ ಕಲ್ಲುಗಳಂತೆ ಕಾಣುತ್ತವೆ. ಹೀಗಾಗಿ ಅವುಗಳ ಸಂಖ್ಯೆಗಳಾಗಲಿ ಇಲ್ಲವೇ ಹೆಚ್ಚಿನ ಮಾಹಿತಿಗಳು ಲಭ್ಯವಾಗುವುದಿಲ್ಲ. ಒಟ್ಟಿನಲ್ಲಿ ಈ ಬೆಟ್ಟದ ಮೇಲೆ ಆದಿಮಾನವರು ವಾಸವಾಗಿದ್ದರೆಂದು ಮತ್ತು ಅವರ ಸಾಂಸ್ಕೃತಿಕ ಜೀವನಕ್ಕೆ ಇವು ಸಾಕ್ಷಿ ಎನ್ನುವುದು ಮಾತ್ರ ಸತ್ಯ.

**ಗುಹೆಗಳು:–** ಈ ಬೆಟ್ಟದ ಮೇಲೆ ಅಲ್ಲಲ್ಲಿ ಗುಹೆಗಳಿವೆ. ಇವು ಆದಿ ಮಾನವರ ವಾಸಸ್ಥಾನಗಳಾಗಿದ್ದವು. ಪ್ರಾಚೀನ ಕಾಲದಲ್ಲಿ ಆದಿಮಾನವರು ಈ ಬೆಟ್ಟದ ಮೇಲಿರುವ ಗುಹೆಗಳಲ್ಲಿಯೇ ವಾಸವಾಗಿದ್ದರೆಂದು ಇಲ್ಲಿನ ಕುರುಹುಗಳ ಆಧಾರದ ಮೇಲೆ ತಿಳಿದುಬರುತ್ತದೆ.

**ಗುಹಾಚಿತ್ರಗಳು:–** ಈ ಬೆಟ್ಟದ ಗುಹೆಗಳೊಳಗೆ ಗುಹಾಚಿತ್ರಗಳಿವೆ. ಇವು ಆದಿಮಾನವನ ಕಲಾವಂತಿಕೆಯನ್ನು ತೋರುತ್ತವೆ. ಆ ಚಿತ್ರಗಳಲ್ಲಿ ಪ್ರಾಣಿಗಳು, ಬೇಟೆಯಾಡುವ ಚಿತ್ರಗಳು ಮತ್ತು ಬೇರೆ–ಬೇರೆ ಅಸ್ಪಷ್ಟ ಚಿತ್ರಗಳು ಇಲ್ಲಿವೆ. ಅವು ಆದಿಮಾನವರ ಸಂಸ್ಕೃತಿ ಎಂಬಂತೆ ಬಳಸಿದ ಬಗ್ಗೆ ತಿಳಿದುಬರುತ್ತದೆ. ಇವು ಎಷ್ಟೋ ಸಾವಿರ ವರ್ಷಗಳಾದರೂ ನಶಿಸದೇ ಇರುವುದು ಬಹಳ ವಿಶೇಷ ಎನ್ನಬಹುದು.

**ಕಮಲ ಸರೋವರ:–** ಈ ಇಂದ್ರಕೀಲ ಪರ್ವತದ ಮೇಲೆ ಬಹಳ ಸುಂದರವಾಗಿ ಕಾಣುವ ಒಂದು ಹೊಂಡವಿದೆ. ಅದು ಸರೋವರದಂತೆ ಕಾಣುತ್ತಿದ್ದು ಅದನ್ನು ಕಮಲ ಸರೋವರ ಎಂದು ಕರೆಯಲಾಗುತ್ತಿದೆ. ಈ ಸರೋವರವು ಸದಾ ನೀರಿನಿಂದ ತುಂಬಿಕೊಂಡಿರುವ ಸೆಲೆಯಾಗಿದೆ. ಅದರಲ್ಲಿ ಅನೇಕ ಸುಂದರವಾದ ಕಮಲಗಳನ್ನು ಕಾಣಬಹುದಾಗಿದೆ. ಅವು ಚಳಿ, ಮಳೆ ಮತ್ತು ಬೇಸಿಗೆ ಎಲ್ಲಾ ಕಾಲಗಳಲ್ಲೂ ಸದಾ ಅರಳಿ ನಿಂತ ಕಮಲಗಳು ಸಹೃದಯರನ್ನು ಆಕರ್ಷಿಸುತ್ತವೆ. ಮಳೆಮಲ್ಲೇಶ್ವರನಿಗೆ ಅಲ್ಲಿನ ಕಮಲದ ಹೂಗಳಿಂದಲೇ ನಿತ್ಯ ಪೂಜೆ ಸಲ್ಲಿಸಲಾಗುತ್ತಿದೆ. ಇದು ಪ್ರಾಚೀನ ಕಾಲದಿಂದಲೂ ಮುಂದುವರೆದುಕೊಂಡು ಬಂದಿರುವ ಸಂಪ್ರದಾಯವಾಗಿದೆ.

**ಅಶೋಕನ ಶಿಲಾಶಾಸನ:–** ಕ್ರಿ.ಪೂ 3–2ನೇ ಶತಮಾನದಲ್ಲಿ ಅಶೋಕನು ಕೊಪ್ಪಳದಲ್ಲಿ ಎರಡು ಶಾಸನಗಳನ್ನು ಕೆತ್ತಿಸಿದ್ದಾನೆ. ಒಂದು ಶ್ರೀ ಗವಿಮಠದ ಹಿಂದಿರುವ ಬಂಡೆಯ ಮೇಲೆ, ಮತ್ತೊಂದು ಈ ಮಳೆಮಲ್ಲೇಶ್ವರ ಪರ್ವತದ ಮೇಲಿದೆ. ಈ ಎರಡೂ ಶಾಸನಗಳ ಪಠ್ಯ ಒಂದೇ ಆಗಿದ್ದು, ಪ್ರಾಕೃತ ಭಾಷೆಯ ಬ್ರಾಹ್ಮಿ ಲಿಪಿಯಲ್ಲಿವೆ. ಆದರೆ ಮಳೆಮಲ್ಲೇಶ್ವರ ಬೆಟ್ಟದ ಮೇಲಿರುವ ಶಾಸನದ ಲಿಪಿ ಬಹುತೇಕ ಅಳಿಸಿಹೋಗಿದ್ದು, ಓದಲು ಸಾಧ್ಯವಾಗುವುದಿಲ್ಲ. ಇವು ಧರ್ಮಪ್ರಚಾರದ ಶಾಸನಗಳಾಗಿದ್ದು, ಕ್ಷುದ್ರ ಜನರೂ ಕೂಡ ಧರ್ಮಾಚರಣೆ ಮಾಡಬಹುದೆಂದು ಹೇಳಲಾದ ಶಾಸನಗಳು ಇವಾಗಿವೆ. ಇಂತಹ ಧರ್ಮ ಪ್ರಚಾರದ ಶಾಸನಗಳು ಈ ಪರ್ವತದ ಮೇಲಿರುವುದು ವಿಶೇಷವಾಗಿದೆ.

**ಇತರೆ ಶಾಸನಗಳು:–** ಈ ಬೆಟ್ಟದ ಮೇಲೆ ಅಶೋಕನ ಶಾಸನವಲ್ಲದೇ ಇತರೆ ಸುಮಾರು ಇಪ್ಪತ್ತಕ್ಕೂ ಅಧಿಕ ಶಾಸನಗಳಿವೆ. ಅದರಲ್ಲಿ ಬಹುತೇಕ ಶಾಸನಗಳು ಒಂದು ಸಾಲಿನ ಇಲ್ಲವೆ ಎರಡು ಸಾಲಿನವುಗಳಾಗಿವೆ. ಮತ್ತು ವಿಶೇಷವಾಗಿ ಅದರಲ್ಲಿ ಹೆಚ್ಚಿನವುಗಳು ಜೈನಶಾಸನಗಳಾಗಿವೆ. ಕೊಪ್ಪಳವು ಜೈನಧರ್ಮದ ಪವಿತ್ರ ಸ್ಥಳವಾಗಿತ್ತು ಎಂಬುದು ಎಲ್ಲರಿಗೂ ತಿಳಿದ ಇತಿಹಾಸ. ಇಂತಹ ಪವಿತ್ರ ಮತ್ತು ಶ್ರದ್ಧಾ ಕೇಂದ್ರಕ್ಕೆ ಅನೇಕ ಜೈನ ಮುನಿಗಳು ಭೇಟಿಕೊಟ್ಟ ಉದಾಹರಣೆಗಳು ಇಂದಿಗೂ ಸಹ ದೊರೆಯುತ್ತಿವೆ. ಈ ಬೆಟ್ಟದ ಮೇಲಿರುವ ಅನೇಕ ಶಾಸನಗಳು ಜೈನಮುನಿಗಳು ಭೇಟಿಕೊಟ್ಟ ಕಾರಣಕ್ಕಾಗಿ ಕೊರೆಸಿದವುಗಳಾಗಿವೆ. ಸುಮಾರು ಹದಿನೈದು ಶಾಸನಗಳು ಮುನಿಗಳ ಭೇಟಿಕೊಟ್ಟದ್ದನ್ನು ಸಾಕ್ಷೀಕರಿಸುತ್ತವೆ. ಇಷ್ಟು ಶಾಸನಗಳನ್ನು ಇದೇ ಬೆಟ್ಟದ ಮೇಲೆಯೇ ಏಕೆ ಕೆತ್ತಿಸಲಾಯಿತು ಎಂಬ ಪ್ರಶ್ನೆ ಉಂಟಾಗುವುದು ಸಹಜ. ಬಹುಶಃ ಈ ಪರ್ವತವು ಪ್ರಾಚೀನ ಕಾಲದಲ್ಲಿ ಜೈನರ ಪವಿತ್ರ ಸ್ಥಳವಾಗಿರಬೇಕು ಅದಕ್ಕಾಗಿ ಇಲ್ಲಿಯೇ ಶಾಸನಗಳನ್ನು ಕೊರೆಸಿರಬಹುದು. ಪಾರಿಸಕೀರ್ತಿ, ಇಂದ್ರನಾಗಮ್ಮ, ಪಾಯಣ, ಮಸೋಪವಾಸಿ ಮಹಾನಂದಿ, ಬಸದಿಯ ಸಾಂತಪ್ಪ, ಚಿಕ್ಕಜೀಯ ಚಂದ್ರಪ್ಪ, ಲಕ್ಕಣ್ಣ, ವರ್ಧಮಾನ, ಕೊಲ್ಲಾಪುರದ ಸೋಬಣ್ಣ, ತೆಂಗುಳಿಯ ಸಂಗಪ್ಪ, ಗುಂಡಕಲ್ಲ ಸೋವಿಗುಡ್ಡ, ಬ್ರಹ್ಮ ಸಮುದ್ರ, ತೋಡರಮಲ್ಲ ನಂಜಿನಾಥ, ಮೀಸರ ಗಂಡ ಎಂಬ ಬಿರುದುಳ್ಳ ಕಲ್ಲಪ್ಪ ನಾಯಕ, ಮಲ್ಲಾನೆಯ(ಮಲ್ಲಯ್ಯ) ಮಗ ನಂಜರಾಯ ಹೀಗೆ ಮುಂತಾದವರು ಕೊಪ್ಪಳಕ್ಕೆ ಭೇಟಿಕೊಟ್ಟದ್ದಕ್ಕೆ ಶಾಸನಗಳನ್ನು ಕೆತ್ತಿಸಲಾಗಿದೆ. ಆದರೆ ಅವರು ಯಾವಕಾರಣಕ್ಕಾಗಿ ಇಲ್ಲಿಗೆ ಭೇಟಿಕೊಟ್ಟರು ಮತ್ತು ಇತರೆ ಯಾವುದೇ ಮಾಹಿತಿಗಳು ಆ ಶಾಸನಗಳಲ್ಲಿ ಉಲ್ಲೇಖ ಇರುವುದಿಲ್ಲ. ಆದರೂ ಇಷ್ಟೆಲ್ಲಾ ಹಿರಿಯರು ಈ ಪರ್ವತಕ್ಕೆ ಭೇಟಿಕೊಟ್ಟಿದ್ದಾರೆ ಎಂದರೆ ಅದು ಸಾಮಾನ್ಯವಾದ ಪರ್ವತವಾಗಿರಲಿಕ್ಕಿಲ್ಲ ಎಂದೆನಿಸುತ್ತದೆ.

ಈ ಬೆಟ್ಟದ ಮೇಲೆ ಮತ್ತೊಂದು ವಿಶೇಷವಾದ ಶಾಸನವನ್ನು ಕಾಣಬಹುದಾಗಿದೆ. ಕ್ರಿ.ಶ 1008ರ ಶಾಸನದಲ್ಲಿ ಆಚಾರ್ಯ ಸಿಂಹನಂದಿಯು 'ಇಂಗಿಣಿ ಮರಣ' ಹೊಂದಿದ್ದನ್ನು ತಿಳಿಸುತ್ತದೆ. ಸಿಂಹನಂದಿ ಆಚಾರ್ಯರು ಕಡುತಪಸ್ಸಿನಿಂದ ಆಚರಣೆ ಮಾಡಿ ಮೋಕ್ಷಕ್ಕೆ ಸಂದರೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಈ 'ಇಂಗಿಣಿ ಮರಣ'ವೇ ಬಹಳ ಕಠಿಣವಾದ ಮೋಕ್ಷದ ವ್ರತವಾಗಿದೆ. ಸಲ್ಲೇಖ ವ್ರತಗಳಲ್ಲೇ ಇದು ಅತ್ಯಂತ ಕಠಿಣವಾದ ವ್ರತವಾಗಿದೆ. ಇಂತಹ ವ್ರತವನ್ನಾಚರಣೆ ಮಾಡಿ ಮೋಕ್ಷ ಹೊಂದಿದ ಬಗ್ಗೆ ಇತಿಹಾಸದಲ್ಲಿ ಕೆಲವೇ ಕೆಲವು ಉದಾಹರಣೆಗಳು ನಮಗೆ ದೊರೆಯುತ್ತವೆ. ಅದರಲ್ಲಿ ಇಂತಹ ಇಂಗಿಣಿ ಮರಣದ ಬಗ್ಗೆ ಕೊಪ್ಪಳದಲ್ಲಿ ಉಲ್ಲೇಖವಿದೆ ಎಂದರೆ ಇದು ಸಾಮಾನ್ಯವಾದ ಸಂಗತಿಯಲ್ಲ. ಮತ್ತು ಅದು ವಿಶೇಷವಾಗಿ ಈ ಮಳೆಮಲ್ಲೇಶ್ವರ ಪರ್ವತದಲ್ಲಿ ಆ ಶಾಸನ ದೊರಕಿರುವುದು ಬಹಳ ವಿಶೇಷ.

**ಮೂರ್ತಿಶಿಲ್ಪಗಳು:–** ಈ ಪರ್ವತದ ಮೇಲೆ ಅಲ್ಲಲ್ಲಿ ಭಗ್ನಗೊಂಡ ಅನೇಕ ಮೂರ್ತಿ–ಶಿಲ್ಪಗಳನ್ನು ಕಾಣಬಹುದಾಗಿದೆ. ಕ್ರಿ.ಶ. 10ನೇ ಶತಮಾನದ ಒಂದು ಶಾಸನದಲ್ಲಿ ಜಾವಯ್ಯನೆಂಬುವ ಶಿಷ್ಯನು ತನ್ನ ಗುರುಗಳಾದ ಜಟಾಸಿಂಗ ಆಚಾರ್ಯರ ಪಾದುಕೆಗಳನ್ನು ಶಿಲೆಯಲ್ಲಿ ಕೆತ್ತಿಸಿದನೆಂದು ಶಾಸನದಲ್ಲಿ ಬರೆಸಲಾಗಿದೆ. ಅಲ್ಲದೆ ಭಟ್ಟಾರಕರ ಪ್ರಿಯ ಶಿಷ್ಯ ವರ್ಧಮಾನದೇವರು ಛಾಯಾಚಂದ್ರನಾಥಸ್ವಾಮಿಯ ಬಿಂಬವನ್ನು ಮಾಡಿಸಿದನೆಂದು ಕ್ರಿ.ಶ 18ನೇ ಶತಮಾನದ ಶಾಸನದಲ್ಲಿ ವಿವರವನ್ನು ಕಾಣಬಹುದು. ಅಲ್ಲದೇ ಅಲ್ಲಲ್ಲಿ ಬಿದ್ದ, ಭಗ್ನಗೊಂಡ, ಚೂರಾದ ಮೂರ್ತಿ–ಶಿಲ್ಪಗಳು ಕಂಡುಬರುತ್ತಿವೆ.

**ಮಳೆಮಲ್ಲೇಶ್ವರ ದೇವಸ್ಥಾನ:–** ಈ ಬೆಟ್ಟದ ಕೆಳಗೆ ಮಳೆಮಲ್ಲೇಶ್ವರ ದೇವಸ್ಥಾನವಿದೆ. ಇದು ಕ್ರಿ.ಶ. ಸುಮಾರು 12–13ನೇ ಶತಮಾನದಲ್ಲಿ ನಿರ್ಮಾಣವಾಗಿರಬಹುದೆಂದು ಇತಿಹಾಸ ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಈ ದೇವಸ್ಥಾನದೊಳಗಿರುವ ಲಿಂಗವನ್ನು 'ಉದ್ಭವಲಿಂಗ' ಎಂದು ಹೇಳಲಾಗುತ್ತಿದೆ. ಅಂದರೆ ಆ ಲಿಂಗವು ಸ್ವಯಂಭುವಾಗಿ ಉದ್ಭವಗೊಂಡ ಲಿಂಗವಾಗಿದ್ದು; ಮಾನವರಿಂದ ಸ್ಥಾಪಿತವಾದುದಲ್ಲ. ಈ ರೀತಿ ಉದ್ಭವಲಿಂಗಗಳನ್ನು ಹೊಂದಿರುವ ಅನೇಕ ದೇವಾಲಯಗಳು ಕರ್ನಾಟಕದಲ್ಲಿವೆ. ಅದರಂತೆ ಕೊಪ್ಪಳದ ಮಳೆಮಲ್ಲೇಶ್ವರ ದೇವಸ್ಥಾನದಲ್ಲಿಯೂ ಸಹ 'ಉದ್ಭವಲಿಂಗ' ಇರುವುದು ವಿಶೇಷ ಎನ್ನಬಹುದು. ಆದರೆ ಈ ದೇವಸ್ಥಾನ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿರುವುದರಿಂದ ಇದರ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗುವುದಿಲ್ಲ. ಆದರೂ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಈ ಬೆಟ್ಟಕ್ಕೆ 'ಮಳೆಮಲ್ಲೇಶ್ವರ ಬೆಟ್ಟ' ಅಥವಾ 'ಪರ್ವತ' ಎಂದು ಕರೆಯುತ್ತಿರುವುದು. ಪರ್ವತಕ್ಕಿರುವ ಈ ಹೆಸರು ಅನಾದಿಕಾಲದಿಂದಲೂ ಬಂದಿರಬಹುದು. ಹಾಗಾದರೆ ಈ ದೇವಾಲಯವೂ ಸಹ ಅನಾದಿಕಾಲದಿಂದಲೂ ಇದ್ದಿರಬೇಕು. ಯಾಕೆಂದರೆ ಅನಾದಿಕಾಲದಿಂದ ಬಂದ ಪರ್ವತದ ಹೆಸರೇ 'ಮಳೆಮಲ್ಲೇಶ್ವರ ಪರ್ವತ' ಮತ್ತು ಆ ಪರ್ವತದ ಕೆಳಗೆ ಇರುವ ಈಶ್ವರನ ದೇವಸ್ಥಾನದ ಹೆಸರೂ ಸಹ 'ಮಳೆಮಲ್ಲೇಶ್ವರ ದೇವಸ್ಥಾನ' ಎಂದಾದರೆ, ಅದು ಪರ್ವತದ ಜೊತೆ–ಜೊತೆಯಲ್ಲೇ ಈ ದೇವಸ್ಥಾನ ಬಂದಿರಬೇಕು. ಅದರ ಬಗ್ಗೆಯೂ ಹೆಚ್ಚಿನ ಮಾಹಿತಿಗಳು ಲಭ್ಯವಾಗುವುದಿಲ್ಲ. ಯಾಕೆಂದರೆ ಆ ಪರ್ವತ ಮತ್ತು ದೇವಸ್ಥಾನದ ಕಾಲದ ಇತಿಹಾಸ ಎಷ್ಟು ಸಾವಿರ ವರ್ಷಗಳದ್ದೆಂದು ತಿಳಿದುಬರುವುದಿಲ್ಲ. ಮತ್ತು ಆದರೂ ವಾಸ್ತು ಶಿಲ್ಪವನ್ನು ಗಮನಿಸಿದಾಗ ಈ ದೇವಸ್ಥಾನ ಕ್ರಿ.ಶ.ಸು 11–12ನೇ ಶತಮಾನದ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಅಂದಾಜಿಸಲಾಗಿದೆ. ಈ ದೇವಸ್ಥಾನವನ್ನು ಆಗಾಗ್ಗೆ ಜೀರ್ಣೋದ್ಧಾರ ಮಾಡುತ್ತಾ ಬಂದಿದೆ. ಅದರ ಬಗ್ಗೆಯೂ ಸಹ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ. ಹೀಗಾಗಿ ಈ ಮಳೆಮಲ್ಲೇಶ್ವರ ದೇವಸ್ಥಾನದ ಕಾಲ ತಿಳಿದುಬರುವುದಿಲ್ಲ.

**ನೀರಿನ ಝುರಿ ಹರಿವು:–** ಈ ಬೆಟ್ಟದ ಮತ್ತೊಂದು ವಿಶೇಷತೆ ಎಂದರೆ, ಇಲ್ಲಿ ಅಘೋಚರವಾಗಿ ಹರಿದುಬರುತ್ತಿರುವ ನೀರಿನ ಝುರಿ. ಇದು ಎಲ್ಲಿಂದ ಮೂಲ ಉತ್ಪತ್ತಿಯಾಗಿ ಹರಿದು ಬರುತ್ತಿದೆ ಎಂಬುದೇ ನಿಗೂಢ. ಎಲ್ಲಿಂದಲೋ ಹರಿದು ಬರುವ ನೀರು ಉದ್ಭವ ಲಿಂಗದ ಪಕ್ಕದಲ್ಲಿ ಹರಿದು ಮುಂದೆ ಸಾಗುತ್ತಿರುವುದು ಬಹಳ ವಿಶೇಷ. ಹೀಗಾಗಿ ಭಕ್ತರು ಆ ಲಿಂಗ ಸೋಂಕಿದ ನೀರನ್ನು ತೀರ್ಥ ಎಂದು ಭಾವಿಸಿ ಸ್ವೀಕರಿಸುತ್ತಾರೆ. ಆ ನೀರಿಗೆ ಚರ್ಮರೋಗ ಇತ್ಯಾದಿ ಸೋಂಕಿನ ರೋಗನಿವಾರಕ ಶಕ್ತಿ ಇದೆ ಎಂದು ಭಕ್ತರ ನಂಬಿಕೆಯಾಗಿದೆ. ಇದು ಒಂದು ಪವಾಡ ಸದೃಶ್ಯವೇ ಸರಿ.

**ಶ್ರೀ ಗವಿಸಿದ್ಧೇಶ್ವರರ ತಪೋಭೂಮಿ:–** ಈ ಬೆಟ್ಟದಲ್ಲಿ ಶ್ರೀ ಗವಿಮಠದ ಹನ್ನೊಂದನೆ ಪೀಠಾಧಿಪತಿಗಳಾದ ಶ್ರೀ ಗವಿಸಿದ್ಧೇಶ್ವರ ಮಹಾಸ್ವಾಮಿಗಳು ಇದೇ ಪರ್ವತದ ಮೇಲೆಯೇ ತಪಸ್ಸು ಮಾಡಿದ್ದರಂತೆ. ಶ್ರೀಗಳು ಬಾಲಕನಾಗಿದ್ದಾಗ ಇದೇ ಬೆಟ್ಟದ ಮೇಲೆ ದನಗಳನ್ನು ಕಾಯುತ್ತಿದ್ದನೆಂದು ಹೇಳಲಾಗುತ್ತದೆ. ಅವರು ಈ ಪರ್ವತದ ಮೇಲೆಯೇ ಅನೇಕ ಪವಾಡಗಳನ್ನು ಮಾಡಿದರೆಂಬ ಐತಿಹ್ಯಗಳಿವೆ. ಶ್ರೀಗಳ ಮೊದಲನಾಮ 'ಗುಡ್ಡದಯ್ಯ' ಎಂದಿತ್ತಂತೆ. ಅಂದರೆ ಶ್ರೀಗಳು ಇದೇ ಬೆಟ್ಟದ(ಗುಡ್ಡ) ಮೇಲೆ ವಾಸಮಾಡುತ್ತಿದ್ದುದರಿಂದ 'ಗುಡ್ಡದಯ್ಯ' ಎಂದು ಕರೆದಿರಬಹುದೇ? ಯಾವುದೇ ದಾಖಲೆಗಳಿಲ್ಲಾ. ನಂತರ ನಗರಕ್ಕೆ ಬಂದು ಜಡೆಗೌಡರ ಮನೆಯಲ್ಲಿ ವಾಸಮಾಡಿದರೆಂದು ಹೇಳಲಾಗುತ್ತಿದೆ.

**ಪ್ರಾಣಿಸಂಕುಲಗಳ ವಾಸಸ್ಥಾನ:–** ಇಂದು ಈ ಬೆಟ್ಟದಲ್ಲಿ ಅನೇಕ ಪ್ರಾಣಿ ಸಂಕುಲಗಳು ವಾಸಿಸುತ್ತಿವೆ. ಕಪಿ, ಹಾವು, ನವಿಲು, ಜಿಂಕೆ, ನರಿ, ಮುಂಗುಸಿ ಮತ್ತು ಅನೇಕ ಪಕ್ಷಿಸಂಕುಲಗಳು, ವಿವಿಧ ಪ್ರಾಣಿಗಳು ಇಲ್ಲಿ ವಾಸಿಸುತ್ತಿವೆ. ಆಗಾಗ ಚಿರತೆ ಮತ್ತು ಕರಡಿಗಳೂ ಓಡಾಡಿದ್ದೂ ಉಂಟು. ಈ ಬೆಟ್ಟ ಪ್ರಾಚೀನ ಕಾಲದಿಂದಲೂ ಸರಿಸೃಪಗಳ ವಾಸಸ್ಥಾನವಾಗಿದ್ದು, ಇಂದಿಗೂ ಸಹ ಅವು ನಿರ್ಭಯವಾಗಿ ಈ ಪರ್ವತದ ಮೇಲೆ ನೆಲೆಸಿರುವುದು ಕಂಡುಬರುತ್ತಿವೆ.

ಹೀಗೆ ಕೊಪ್ಪಳದ ಮಳೆಮಲ್ಲೇಶ್ವರ ಪರ್ವತವು ಅನೇಕ ಚರಿತ್ರೆ, ಪವಾಡ ಮತ್ತು ಐತಿಹ್ಯಗಳನ್ನು ತನ್ನೊಡಲೊಳಗೆ ಇಟ್ಟುಕೊಂಡು ಸಾವಿರಾರು ವರ್ಷಗಳಿಂದ ಮುಂದೆ ಸಾಗುತ್ತಾ ಬಂದಿರುವುದನ್ನು ಕಾಣಬಹುದಾಗಿದೆ. ಆದರೆ ಇಂದು ಜನ ಮತ್ತು ಜನಪ್ರತಿನಿಧಿಗಳ ನಿರ್ಲಕ್ಷದಿಂದ ಅಲ್ಲಿನ ಪರ್ವತಕ್ಕೆ ಧಕ್ಕೆ ಬಂದಿದೆ. ಇಂತಹ ಅಮೋಘ ಇತಿಹಾಸ ಮತ್ತು ಪುರಾಣಗಳ ಹಿನ್ನೆಲೆಯುಳ್ಳ ಈ ಮಳೆಮಲ್ಲೇಶ್ವರ ಪರ್ವತವನ್ನು ಉಳಿಸಿ, ಮುಂದಿನ ಜನಾಂಗಕ್ಕೆ ಕೊಂಡೊಯ್ಯಬೇಕಾಗಿದೆ. ಅಂತಹ ಜವಾಬ್ದಾರಿ ಸಮಾಜ, ಜನಪ್ರತಿನಿಧಿಗಳು, ಸರಕಾರ ಮತ್ತು ಪುರಾತತ್ವ ಇಲಾಖೆಗಳ ಮೇಲಿದೆ.

**ಆಕರ ಗ್ರಂಥಗಳು :–**


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999

2) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020

3) ಎಸ್.ವೈ.ಸೋಮಶೇಖರ ಮತ್ತು ಇತರರು ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–2001

4) ನಾ.ಭಾ.ಶಾಸ್ತ್ರಿಗಳು, ಕೋಪಣ–ಕೊಪ್ಪಳ, ನ್ಯೂ ಗದಗ ಪ್ರಿಂಟರಿ, ಗದಗ–1987

5) ಬಿ.ಸಿ.ಪಾಟೀಲ, ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಹರಿಹರ ಪ್ರಕಾಶನ ಕೊಪ್ಪಳ–1998

6) ಹಂಪ ನಾಗರಾಜಯ್ಯ, ಕೊಪ್ಪಳ ಶಾಸನಗಳು, ರತ್ನತ್ರಯ ಪ್ರಕಾಶನ, ಮೈಸೂರು–1998


* * * * *

# ಜೈನ ಕಾಶಿಯಾಗಿ ಕೊಪ್ಪಳ

ಕ್ರಿ.ಶ 10ನೇ ಶತಮಾನದಲ್ಲಿ ಕೊಪ್ಪಳದ ಈ ಪ್ರದೇಶವು ಜೈನ ಧರ್ಮದ ಹೃದಯ ಭಾಗವಾಗಿತ್ತು; ಅದು ಜೈನರ ಕಾಶಿಯಾಗಿತು. ಇಲ್ಲಿಂದಲೇ ಸುತ್ತಲಿನ ಪ್ರದೇಶಗಳಿಗೆ ಜೈನಧರ್ಮವನ್ನು ಪ್ರಚುರ ಪಡಿಸಲಾಗುತ್ತಿತ್ತು. ನಾಡಿನ ಅನೇಕ ಬೇರೆ ಬೇರೆ ಭಾಗಗಳಿಂದ ಜೈನಧರ್ಮದ ಅನುಯಾಯಿಗಳು ಇಲ್ಲಿಗೆ ಬಂದು ಭೇಟಿ ಕೊಟ್ಟಿದ್ದಾರೆ. ಜೈನರ ಅತ್ಯಂತ ಪವಿತ್ರ ಕ್ಷೇತ್ರವೆಂದು, ಪುಣ್ಯಕ್ಷೇತ್ರವೆಂದೇ ಭಾವಿಸಲಾಗಿತ್ತು. ಜೈನಧಾರ್ಮಿಕ ಚಟುವಟಿಕೆಗಳು ಅತ್ಯಂತ ವಿಸ್ತೃತವಾಗಿದ್ದವೆಂಬುದಕ್ಕೆ ಅನೇಕ ಆಧಾರಗಳು ಇಲ್ಲಿ ದೊರೆಯುತ್ತವೆ. ಶ್ರವಣಬೆಳಗೋಳದಲ್ಲಿ ಬಾಹುಬಲಿ ಮೂರ್ತಿಯು ಪ್ರತಿಷ್ಠಾಪನೆಯಾಗುವವರೆಗೂ ಕೊಪ್ಪಳವೇ ಕರ್ನಾಟಕದ ಜೈನಧರ್ಮದ ಪವಿತ್ರ ಕೇಂದ್ರವಾಗಿರಬೇಕೆಂದೆನಿಸುತ್ತದೆ. ನೂರಾರು ಜೈನಬಸದಿಗಳು, ಸಂಘ, ಗಣ, ಗಚ್ಛ, ಅನ್ವಯ ಬಳಗಳು ಅವುಗಳ ಕೇಂದ್ರಗಳು ಜೈನ ಆರ್ಯಿಕೆಯರ, ಮುನಿಗಳ ಸಂಘಗಳು, ತಂಗುದಾಣಗಳು ಕೊಪ್ಪಳದಲ್ಲಿದ್ದವುವೆಂಬುದಕ್ಕೆ ಇಲ್ಲಿನ ನೂರಾರು ಶಾಸನಗಳಲ್ಲಿ ಉದಾಹರಣೆಗಳಾಗಿ ದೊರೆಯುತ್ತವೆ. ಅಲ್ಲದೇ ಮೋಕ್ಷ ಸಾಧಕವಾದ ಸನ್ಯಾಸನ, ಸಮಾಧಿ, ಸಲ್ಲೇಖನವ್ರತ ಮೊದಲಾದ ನಿರ್ವಾಣದ ಸಾಧನೆಗಾಗಿಯೂ ಜೈನಮುನಿಗಳು, ಆರ್ಯಿಕೆಯರು, ಶ್ರಾವಕ-ಶ್ರಾವಕಿಯರು ಕೊಪ್ಪಳದೆಡೆಗೆ ಮುಖಮಾಡುತ್ತಿದ್ದರು. ಕೊಪ್ಪಳವನ್ನು ಆದಿತೀರ್ಥ, ಮಹಾತೀರ್ಥ ಎಂಬ ಪವಿತ್ರ ಹೆಸರುಗಳಿಂದ ಕರೆದಿರುವುದರಿಂದ ಇದೊಂದು ಬಹುದೊಡ್ಡ ಜೈನ ಕೇಂದ್ರವಾಗಿತ್ತು ಎಂಬುದನ್ನು ಧೃಢಪಡಿಸುತ್ತವೆ. ಜೈನಧರ್ಮ ಹೆಚ್ಚು ಪ್ರಚಾರಗೊಂಡಿದ್ದೆ ದಕ್ಷಿಣದ ಭಾರತದಲ್ಲಿ. ಆದ್ದರಿಂದ ಜೈನಧರ್ಮ ಎಂದ ಕೂಡಲೇ ದಕ್ಷಿಣ ಭಾರತ ನೆನಪಾಗುತ್ತದೆ. ದಕ್ಷಿಣ ಭಾರತದಲ್ಲೇ ಇರುವ ಕೊಪ್ಪಳಕ್ಕೆ 'ಆದಿತೀರ್ಥ' ಎಂಬ ಪದ ಬಳಕೆಯಾಗಿರುವುದರಿಂದ ಬಹುಶಃ ಇದು ದಕ್ಷಿಣ ಭಾರತದಲ್ಲೇ ಮೊದಲ ಜೈನಧರ್ಮದ ತೀರ್ಥ ಕ್ಷೇತ್ರವಾಗಿರಬೇಕು ಎಂದೆನಿಸುತ್ತದೆ. ಜೊತೆಗೆ ಜೈನಧರ್ಮದ ಆದಿಕ್ಷೇತ್ರವಾಗಿರಬೇಕು ಎಂಬ ಅನುಮಾನ ಮೂಡುವುದು ಸಹಜ. ಅದಕ್ಕಾಗಿಯೇ ಈ ಕೊಪ್ಪಳವನ್ನು ಆದಿತೀರ್ಥ ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಅದಕ್ಕೆ ಸಂಬಂಧಿಸಿದಂತೆ ಇನ್ನು ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ.

ಕೊಪ್ಪಳದಲ್ಲಿ ಸುಮಾರು 772 ಜೈನ ಬಸದಿಗಳಿದ್ದವೆಂದು ಪ್ರತೀತಿ ಇರುವುದರಿಂದ ಇದೊಂದು ಜೈನ ಧರ್ಮದ ಪವಿತ್ರ ಕೇಂದ್ರವಾಗಿತ್ತು ಎನ್ನುವುದಕ್ಕೆ ಬಲವಾದ ಸಾಕ್ಷಿ ಎನಿಸುತ್ತದೆ. ಆದರೆ ಅಷ್ಟು ಬಸದಿಗಳು ಇಂದು ಕಾಣಸಿಗುವುದಿಲ್ಲ, ಅದು ಬೇರೆ ಸಂಗತಿ. ಆದರೂ ಕೆಲವಾರು ಬಸದಿಗಳ ಉಲ್ಲೇಖಗಳು ದಾನ, ಜೀರ್ಣೋದ್ಧಾರ,

ನಿರ್ಮಾಣದಂತಹ ಮುಂತಾದ ಸಂದರ್ಭಗಳಲ್ಲಿ ಕೆಲ ಬಸದಿಗಳ ಉಲ್ಲೇಖಗಳು ಕಂಡುಬರುತ್ತವೆ. ಕೊಪ್ಪಳ ತಾಲೂಕಿನಲ್ಲಿ ಪ್ರಕಟಿತ ಮತ್ತು ಅಪ್ರಕಟಿತ ಹಾಗೂ ಬೇರೆ–ಬೇರೆ ದಾಖಲೆಗಳಲ್ಲಿ ಸುಮಾರು 180 ಕ್ಕೂ ಅಧಿಕ ಶಾಸನಗಳು ಪತ್ತೆಯಾಗಿವೆ. ಅದರಲ್ಲಿ 120 ಕ್ಕೂ ಅಧಿಕ ಶಾಸನಗಳು ಕೊಪ್ಪಳ ನಗರದಲ್ಲೇ ದೊರಕಿವೆ. ಅವುಗಳಲ್ಲಿ ಸುಮಾರು 100 ಕ್ಕೂ ಅಧಿಕ ಶಾಸನಗಳು ಜೈನ ಧರ್ಮಕ್ಕೆ ಸಂಬಂಧಿಸಿದ ಶಾಸನಗಳಾಗಿರುವುದರಿಂದ ಇದೊಂದು ಬಹುದೊಡ್ಡ ಜೈನಕೇಂದ್ರ ಎಂಬುದರಲ್ಲಿ ಅನುಮಾನವಿಲ್ಲ.

ಕೊಪ್ಪಳವು ಜೈನಧರ್ಮದ ಶ್ರದ್ಧಾ ಕೇಂದ್ರವಾಗಿತ್ತು. ಇಲ್ಲಿ ಅನೇಕ ಜೈನ ಧಾರ್ಮಿಕ ಚಟುವಟಿಕೆಗಳು ನಡೆಯುತ್ತಿದ್ದವು. ಅಂತಹ ಕ್ರಿಯೆಗಳು ನಡೆದಾಗ ಅದರ ಗುರುತಿಗಾಗಿ ಶಾಸನಗಳನ್ನು ಕೆತ್ತಿಸಿರುವುದು, ಇಲ್ಲವೇ ಸ್ಮಾರಕಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಅವು ಇಂದಿಗೂ ಸ್ಮಾರಕಗಳಾಗಿ ಉಳಿದುಕೊಂಡು ಬಂದಿವೆ. ಅವುಗಳನ್ನು ವ್ಯವಸ್ಥಿತ ರೀತಿಯಲ್ಲಿ ಅಧ್ಯಯನ ಮಾಡಿದಾಗ ಇದೊಂದು ಬಹುದೊಡ್ಡ ಜೈನ ಕೇಂದ್ರವಾಗಿದ್ದು, ಅದರ ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಸ್ವರೂಪವನ್ನು ಅರಿಯಲು ಸಾಧ್ಯವಾಗುತ್ತದೆ.

ಕೊಪ್ಪಳವನ್ನು ಪ್ರಮುಖ ಜೈನಕೇಂದ್ರವಾಗಿ ಗುರುತಿಸಲು ಅನೇಕ ಐತಿಹಾಸಿಕ ದಾಖಲೆಗಳಿವೆ. ಅವುಗಳಲ್ಲಿ ಶಾಸನಗಳು ಬಹಳ ಮಹತ್ವವಾದ ಆಕರಗಳಾಗಿವೆ. ಈಗಾಗಲೇ ವಿವರಿಸಿದಂತೆ ಕೊಪ್ಪಳ ನಗರದಲ್ಲೇ ಸುಮಾರು ಒಂದು ನೂರಕ್ಕೂ ಅಧಿಕ ಜೈನ ಶಾಸನಗಳು ಲಭ್ಯವಾಗಿವೆ. ಅವುಗಳಲ್ಲಿ ಇಲ್ಲಿ ಜೈನಧರ್ಮ ಹೇಗೆ ಬಾಳಿ–ಬೆಳಗಿ ಉನ್ನತ ಶಿಖರದಲ್ಲಿತ್ತೆಂಬುದು ತಿಳಿದುಬರುತ್ತದೆ. ಅವುಗಳಲ್ಲಿ ಜೈನ ಬಸದಿಗಳ ನಿರ್ಮಾಣ, ಜೀರ್ಣೋದ್ಧಾರ, ಅವುಗಳಿಗೆ ದಾನ, ಬೇರೆ ಬೇರೆ ಭಾಗಗಳಿಂದ ಜೈನ ಅನುಯಾಯಿಗಳು ಇಲ್ಲಿಗೆ ಭೇಟಿ ಕೊಟ್ಟಿದ್ದು, ಇಲ್ಲಿಯೇ ಬಂದು ಮುಡುಪಿದ್ದು, ಇಚ್ಛಾಮರಣ ಹೊಂದಿದ್ದು, ನಿಶಧಿಗೆಯಾದದ್ದು–ನಿಶಧಿಗೆ ನಿರ್ಮಿಸಿದ್ದು, ಸಲ್ಲೇಖವ್ರತ ಆಚರಣೆ, ರತ್ನತ್ರಯ ಸಾಧಿಸಿದ್ದು, ಗುರುಗಳ ಸ್ಮರಣೆಗಾಗಿ ಬಸದಿ–ಪಾದುಕೆ–ಬಿಂಬಗಳ ನಿರ್ಮಿಸಿದ್ದು, ತೀರ್ಥಂಕರರ ಬಿಂಬ–ಪಾದುಕೆಗಳು ನಿರ್ಮಿಸಿದ್ದು, ಮೋಕ್ಷ–ದೀಕ್ಷೆ–ತಪಸ್ಸು ಹೀಗೆ ಅನೇಕ ಜೈನ ಧಾರ್ಮಿಕ ಸಂಗತಿಗಳು ಉಲ್ಲೇಖಗೊಂಡಿವೆ. ಈ ಎಲ್ಲಾ ಧಾರ್ಮಿಕ ಚಟುವಟಿಕೆಗಳು ಕೊಪ್ಪಳದಲ್ಲಿದ್ದ ಜೈನಧರ್ಮದ ಪ್ರಭಾವವನ್ನು ವಿವರಿಸುತ್ತವೆ.

ಕೊಪ್ಪಳವು ಕ್ರಿ.ಶ. 10ನೇ ಶತಮಾನದಲ್ಲಿ ಜೈನಕಾಶಿಯಾಗಿತ್ತು. ಇಲ್ಲಿ ಜೈನಧರ್ಮದ ಅನೇಕ ಕಾರ್ಯಚಟುವಟಿಕೆಗಳು ನಡೆಯುತ್ತಿದ್ದವು ಎಂಬುದಕ್ಕೆ ಶಾಸನಗಳು ಸಾಕ್ಷಿಯಾಗಿ ನಿಂತಿವೆ. ಕೊಪ್ಪಳ ನಗರದಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ಶಾಸನಗಳು ಕ್ರಿ.ಶ.881 ರಿಂದ ಕ್ರಿ.ಶ.1375ರ ಮಧ್ಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ. ಅಂದರೆ

ಸುಮಾರು ಐದು ಶತಮಾನಗಳ ಕಾಲ ಇಲ್ಲಿ ಜೈನಧರ್ಮ ಬಹಳ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ತಿಳಿದುಬರುತ್ತದೆ. ಆದರೂ ಕ್ರಿ.ಶ.18ನೇ ಶತಮಾನದ ಲಿಪಿಯುಳ್ಳ ಒಂದು ಜೈನ ಶಾಸನ ದೊರಕಿರುವುದರಿಂದ ಇಲ್ಲಿ ಸುಮಾರು ಒಂದು ಸಾವಿರ ವರ್ಷಗಳ ಕಾಲ ಜೈನಧರ್ಮ ನೆಲೆಯೂರಿತ್ತು ಎಂಬುದರ ಬಗ್ಗೆ ಸ್ಪಷ್ಟವಾಗಿ ಶಾಸನ ಆಕರಗಳು ಉಲ್ಲೇಖಿಸುತ್ತವೆ. ಅಂತಹ ಶಾಸನಗಳಲ್ಲಿ ಕೆಲವು ಪ್ರಮುಖ ಶಾಸನಗಳನ್ನು ಜೈನಧರ್ಮದ ನೆಲೆಯಲ್ಲಿ ಚರ್ಚಿಸಲಾಗಿದೆ.

ಈಗಾಗಲೇ ವಿವರಿಸಿದಂತೆ ಕೊಪ್ಪಳವು ಜೈನಧರ್ಮದ ಪವಿತ್ರ ನೆಲೆ. ಇಲ್ಲಿಗೆ ಬಂದು ಭೇಟಿ ಕೊಟ್ಟ ಜೈನಧರ್ಮದ ಅನುಯಾಯಿಗಳಿಗೆ, ಆಚಾರ್ಯರಿಗೆ ಲೆಕ್ಕವಿಲ್ಲ. ಅಷ್ಟು ಪ್ರಮಾಣದಲ್ಲಿ ಬಂದು ಈ ನೆಲವನ್ನು ಪಾವನಗೊಳಿಸಿದ್ದಾರೆ. ಕೊಂಡಕುಂದಾನ್ವಯಕ್ಕೆ ಸೇರಿದ ಅಭಯನಂದಿ ಪಂಡಿತನ ಶಿಷ್ಯ ವೀರನಂದಿ ಮೇಘಚಂದ್ರ ಮುನಿ ಗೊಲ್ಲಾಚಾರ್ಯ ತಳಗಾರಸ್ತ, ಇಂದ್ರನಂದಿ ಭಟ್ಟಾರಕ, ಕೊಂಡಕುಂದಾಚಾರ್ಯ, ಗೃದ್ಧ ಪಿಂಚಾರ್ಯ, ಬಳಾಕ ಪಿಂಚಾರ್ಯ, ಮುನೀಂದ್ರ ಸೇನಗಣಕ್ಕೆ ಸೇರಿದ ಅಜಿತಸೇನಾಚಾರ್ಯ, ಜಟಾಸಿಂಗನಂದಿ, ಸೋಮದೇವ ಪಂಡಿತ ಮುಂತಾದ ಜೈನಾಚಾರ್ಯರ ಉಲ್ಲೇಖಗಳು ಕೊಪ್ಪಳದ ಶಾಸನಗಳಲ್ಲಿ ಕಂಡು ಬರುವುದರಿಂದ ಇದೊಂದು ಬಹುದೊಡ್ಡ ಜೈನಕೇಂದ್ರ ಆಗಿರಬೇಕು ಎಂದೆನಿಸುತ್ತದೆ. ಅವರ ಮಾರ್ಗದರ್ಶನದಿಂದ ಇಲ್ಲಿ ಜೈನಧರ್ಮ ಬೆಳಗುತ್ತಿರಬೇಕು; ಇಲ್ಲವೇ ಅವರ ಪ್ರಭಾವ ಈ ಪ್ರದೇಶದ ಮೇಲೆ ಆಗಿರಬೇಕು ಎಂದೆನಿಸುತ್ತದೆ.

ಕೊಪ್ಪಳದಲ್ಲಿ ದೊಡ್ಡ ಜೈನ ಆಚಾರ್ಯ ಪರಂಪರೆಯಿದ್ದು ಅವರ ಮಾರ್ಗದರ್ಶನದಿಂದಲೇ ಈ ಪ್ರದೇಶದಲ್ಲಿ ಧರ್ಮ ತನ್ನ ಅಸ್ತಿತ್ವವನ್ನ ಉಳಿಸಿಕೊಂಡಿತ್ತು. ಕೊಪ್ಪಳದ ಕ್ರಿ.ಶ.1032ರ ಶಾಸನದಲ್ಲಿ ಜಿನಧರ್ಮದಲ್ಲಿ ಬಂದ ಆಚಾರ್ಯ ಪರಂಪರೆಯನ್ನು ವಿವರರಿಸುತ್ತಾ ಕೊಂಡಕುಂದಾಚಾರ್ಯ ಗೃದ್ಧಪಿಂಚಾರ್ಯ, ಒಳಾಕಪಿಂಚಾರ್ಯರವರೆಗೆ ವಿವರ ನೀಡಿದೆ. ಬಹುಶಃ ಇವರೆಲ್ಲಾ ಈ ಭಾಗದಲ್ಲಿ ಮಾರ್ಗದರ್ಶಕರಾಗಿರಬೇಕು ಎಂದೆನಿಸುತ್ತದೆ. ಕಾಲದ ಉಲ್ಲೇಖವಿರದ ಒಂದು ಶಾಸನದಲ್ಲಿ ಗೌರಾದೇವಿಯರ ಹಡಪದ ಲಖ್ಖಾರ್ಯ ಎಂಬುವವನು ಸಾತಲದೇವಿ ಬಸದಿಗೆ ಶಾಸನ ಸಹಿತ ಭೂಮಿಯನ್ನು ದಾನ ನೀಡಿದ ವಿಷಯವನ್ನು ತಿಳಿಸುವುದರ ಜೊತೆಗೆ ತೀರ್ಥದ ಬಸದಿ, ತಿಮ್ಮಬ್ಬರಸಿಯ ಬಸದಿ, ಅರಸಿಯ ಬಸದಿಗಳ ಉಲ್ಲೇಖಗಳು ಸಿಗುತ್ತವೆ. ಈ ಎಲ್ಲಾ ಬಸದಿಗಳು ಕೊಪ್ಪಳ ಪರಿಸರದಲ್ಲಿ ನಿರ್ಮಾಣವಾಗಿರಬೇಕು ಎಂದು ತಿಳಿಸುತ್ತದೆ. ಆದರೆ ಸ್ಪಷ್ಟ ಆಧಾರಗಳು ಸಿಗುವುದಿಲ್ಲ. ಇವುಗಳಲ್ಲದೇ ಜಯಧೀರ ಜೀನಾಲಯಕ್ಕೆ ದಾನ, ಬಸದಿಗೆ ದಾನ, ಬಸದಿಗೆ ಕಳಸಾರೋಹಣ, ಬಸದಿ ಕಟ್ಟಿಸಿದ

ಉಲ್ಲೇಖಗಳು ಕೊಪ್ಪಳ ನಗರದ ಶಾಸನಗಳಲ್ಲಿ ಕಂಡು ಬಂದಿರುವುದರಿಂದ ಇದೊಂದು ಬಹುದೊಡ್ಡ ಜೈನಧರ್ಮದ ಸಾಂಸ್ಕೃತಿಕ ಕೇಂದ್ರವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಕೊಪ್ಪಳದಲ್ಲಿ ನಿರ್ಮಾಣವಾದ ಜೈನ ಸ್ಮಾರಕಗಳ ಸಂಖ್ಯೆಗೆ ಲೆಕ್ಕವಿಲ್ಲ. ಅಷ್ಟು ಪ್ರಮಾಣದಲ್ಲಿ ಸ್ಮಾರಕಗಳು ಇಲ್ಲಿ ನಿರ್ಮಾಣಗೊಂಡಿವೆ. ಬಸದಿಗಳಲ್ಲದೆ ಬಿಂಬ, ಪಾದುಕೆ, ಮೂರ್ತಿ–ಶಿಲ್ಪ, ನಿಶಧಿಗೆ ಮುಂತಾದ ಜೈನ ಸ್ಮಾರಕಗಳು ಇಲ್ಲಿ ನಿರ್ಮಾಣವಾದ ಬಗ್ಗೆ ದಾಖಲೆಗಳಿವೆ. ಕ್ರಿ.ಶ.12ನೇ ಶತಮಾನಕ್ಕೆ ಸೇರಿದ ಕೊಪ್ಪಳದ ಶಾಸನದಲ್ಲಿ ಮೂಲ ಸಂಘ ಬಲತ್ಕಾರಗಣಕ್ಕೆ ಸೇರಿದ ಭೊಮ್ಮಿಸೆಟ್ಟಿ ಮಗ ಸಾತಿಸೆಟ್ಟಿಯೆಂಬುವವನು ಪುಷ್ಪದಂತತೀರ್ಥಂಕರ ಪ್ರತಿಮೆಯನ್ನು ಪ್ರತಿಷ್ಠಾಪನೆ ಮಾಡಿಸಿದನೆಂದು ಉಲ್ಲೇಖಿಸುತ್ತದೆ. ಅದೇ ರೀತಿ ಕ್ರಿ.ಶ.12ನೇ ಶತಮಾನದ ಕೊಪ್ಪಳದ ಮತ್ತೊಂದು ಶಾಸನದಲ್ಲಿ ಸೋಮರಾಯನೆಂಬುವವನು ಕುಶಜಿನಾಲಯಕ್ಕೆ ಪಾರ್ಶ್ವಬಿಂಬವನ್ನು ನೀಡಿದಂತೆ ತಿಳಿಸುತ್ತದೆ. ಕ್ರಿ.ಶ.18ನೇ ಶತಮಾನದ ಕೊಪ್ಪಳದ ಶಾಸನದಲ್ಲಿ ದೇವೇಂದ್ರಕೀರ್ತಿ ಭಟ್ಟಾರಕ ಪ್ರಿಯಶಿಷ್ಯರಾದ ವರ್ಧಮಾನ ದೇವರು ಛಾಯಾಚಂದ್ರನಾಥಸ್ವಾಮಿಯ ಬಿಂಬವನ್ನು ಮಾಡಿಸಿದರೆಂಬ ಉಲ್ಲೇಖವಿದೆ.

ನಿಶಧಿಯಾಗುವುದು ಜೈನ ಧರ್ಮದಲ್ಲಿ ಬಹುಮುಖ್ಯವಾದ ಹಂತ. ಮತ್ತು ಅದು ಜೀವನದ ಕೊನೆಯ ಘಟ್ಟವಾಗಿತ್ತು. ಕ್ರಿ.ಶ.975ರ ಕೊಪ್ಪಳ ಶಾಸನದಲ್ಲಿ ಸಾಧುಸೇನ ಪಂಡಿತನು ಕೆಲವು ಕಾಲ ಕೊಪ್ಪಳದಲ್ಲಿದ್ದು, ರಾಜಪೂಜಿತನಾಗಿ ತನ್ನ ಅವಸಾನ ಕಾಲದಲ್ಲಿ ಮಾನ್ಯಖೇಡದ ಏಕಚಟ್ಟುಗದ ಬಸದಿಯಲ್ಲಿ ಸನ್ಯಾಸ ಸ್ವೀಕರಿಸಿ ಮೋಕ್ಷ ಹೊಂದುತ್ತಾನೆ. ಅವನ ಶಿಷ್ಯ ಸಿದ್ಧಸೇನಭಟ್ಟಾರಕನು ತನ್ನ ಗುರುವಿನ ನೆನಪಿಗಾಗಿ ನಿಶಧಿಗೆಯನ್ನು ಮಾಡಿಸಿದನೆಂದು ಉಲ್ಲೇಖಿಸುತ್ತದೆ. ಕೊಪ್ಪಳದ ಕ್ರಿ.ಶ. 1028ರ ಕಾವ್ಯಮಯವಾದ ಶಾಸನದಲ್ಲಿ ಪದ್ಮನಂದಿಸಿದ್ಧಾಂತ ದೇವನು ಸನ್ಯಾಸನವನ್ನು ಸ್ವೀಕರಿಸಿ ರತ್ನತ್ರಯವನ್ನು ಸಾಧಿಸಿ ಮುಡುಪಿದ. ಇವನ ನೆನಪಿನಲ್ಲಿ ಮಾಚಬ್ಬೆಕಂತಿಯು ನಿಶಧಿಗೆಯನ್ನು ನಿಲ್ಲಿಸದಳೆಂದು ವರ್ಣಿಸಿದೆ.

ಹೀಗೆ ಕೊಪ್ಪಳದಲ್ಲಿ ಜೈನ ಧರ್ಮವು ಕ್ರಿ.ಶ ಸುಮಾರು 10ನೇ ಶತಮಾನದಿಂದ ಹಿಡಿದು 18ನೇ ಶತಮಾನದವರೆಗೂ ಇಲ್ಲಿ ಪ್ರವರ್ಧಮಾನದಲ್ಲಿ ಬೆಳಗಿತ್ತು ಎಂಬುದು ತಿಳಿದುಬರುತ್ತದೆ. ಮೇಲಿನ ಎಲ್ಲಾ ದಾಖಲೆಗಳನ್ನು ಗಮನಿಸಿದಾಗ ಪ್ರಾಚೀನ ಕಾಲದಲ್ಲಿ ಕೊಪ್ಪಳವು ಒಂದು ಬಹುದೊಡ್ಡ ಮತ್ತು ಸುಪ್ರಸಿದ್ಧ ಜೈನಕೇಂದ್ರವಾಗಿ ಜೈನರ ಕಾಶಿಯಾಗಿ ನೆಲೆನಿಂತಿತ್ತು ಎಂಬುದು ಸ್ಪಷ್ಟವಾಗುತ್ತದೆ.

**ಆಕರ ಗ್ರಂಥಗಳು :–**

1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಬಿ.ಸಿ.ಪಾಟೀಲ, ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಹರಿಹರ ಪ್ರಕಾಶನ ಕೊಪ್ಪಳ–1998
3) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020
4) ಹಂಪ ನಾಗರಾಜಯ್ಯ, ಕೊಪ್ಪಳ ಶಾಸನಗಳು, ರತ್ನತ್ರಯ ಪ್ರಕಾಶನ, ಮೈಸೂರು–1998
5) ಮಿರ್ಜಿ ಅಣ್ಣಾರಾಯ, ಜೈನಧರ್ಮ (ಎರಡನೆ ಮುದ್ರಣ), ಡಿ.ವಿ.ಕೆ. ಮೂರ್ತಿ ಮೈಸೂರು, 1996
6) ಸಂ. ಡಾ. ಎಸ್. ವೈ. ಸೋಮಶೇಖರ ಮತ್ತು ಇತರರು, ಕರ್ನಾಟಕ ದೇವಾಲಯ, ಕೋಶ, ಕನ್ನಡ ವಿಶ್ವವಿದ್ಯಾಲಯ, ಹಂಪಿ–2001

* * * * *

# ಕೊಪ್ಪಳದ ಬಲಿಷ್ಠ ಕೋಟೆಯ ಚರಿತ್ರೆ

ಪ್ರಾಚೀನ ಕಾಲದಲ್ಲಿ ಅರಸರು ಬಹಳ ಮುಖ್ಯವಾಗಿ ಸ್ವಾಮಿ, ಅಮಾತ್ಯ, ಜನಪದ, ದುರ್ಗ(ಕೋಟೆ), ಕೋಶ, ಸೈನ್ಯ ಮತ್ತು ಮಿತ್ರ ಎಂಬ ಈ ಏಳೂ ಸಪ್ತಾಂಗಗಳನ್ನು ರಾಜನೀತಿಯಲ್ಲಿ ಅನುಸರಿಸುತ್ತಿದ್ದರು. ಅವು ಎಲ್ಲವುಗಳೂ ಆಡಳಿತ ವ್ಯವಸ್ಥೆಯಲ್ಲಿ ಬರುವ ಮುಖ್ಯವಾದವುಗಳಾಗಿದ್ದವು. ಆದರೂ ಅವುಗಳಲ್ಲಿ ರಾಜ್ಯದ ಆಡಳಿತ ಮತ್ತು ಸಂರಕ್ಷಣೆಯಲ್ಲಿ ಅಥವಾ ಕೆಲ ಅಂಶಗಳಿಂದ ಕೋಟೆಯು(ದುರ್ಗ) ಒಂದು ಬಲಿಷ್ಠವಾದ ಅಂಗವಾಗಿತ್ತು ಎಂದೆನಿಸುತ್ತದೆ. ಅದನ್ನು ರಕ್ಷಿಸಲು ಹರಸಾಹಸ ಮಾಡಬೇಕಾಗಿತ್ತು. ತಮ್ಮ ಸಾಮ್ರಾಜ್ಯವನ್ನು ಸಂರಕ್ಷಿಸಿಕೊಳ್ಳಬೇಕಾಗಿದ್ದರೆ ಮೊದಲು ಕೋಟೆಯನ್ನು ರಕ್ಷಿಸಿಕೊಳ್ಳಬೇಕಿತ್ತು. ಕೋಟೆಯನ್ನು ರಕ್ಷಿಸಿಕೊಂಡರೆ ರಾಜ್ಯವನ್ನು ಸಂರಕ್ಷಿಸಿಕೊಂಡಂತೆ. ಯಾಕೆಂದರೆ ಆ ಸಾಮ್ರಾಜ್ಯವನ್ನು ವಶಪಡಿಸಿಕೊಳ್ಳಬೇಕೆಂದಿದ್ದರೆ ಮೊದಲು ದಾಳಿ ಮಾಡುತ್ತಿದ್ದ ಪ್ರದೇಶವೇ ಈ ಕೋಟೆ. ಹೀಗಾಗಿ ಅರಸರು ತಮ್ಮ ಕೋಟೆಯ ರಕ್ಷಣೆಯು ಬಹಳ ಮುಖ್ಯವಾದ ಜವಾಬ್ದಾರಿ ಮತ್ತು ಕರ್ತವ್ಯವಾಗಿರುತ್ತಿತ್ತು. ಅದಕ್ಕಾಗಿಯೇ ಈ ಕೋಟೆಗಳನ್ನು ಬಲಿಷ್ಠ ಮತ್ತು ಸುಭದ್ರವಾಗಿಯೇ ನಿರ್ಮಿಸಿ ಅದನ್ನು ಕಾಪಾಡಿಕೊಳ್ಳುತ್ತಿದ್ದರು.

ಕೊಪ್ಪಳ ಜಿಲ್ಲೆಯಲ್ಲಿ ಅನೇಕ ಕೋಟೆಗಳಿವೆ. ಕೊಪ್ಪಳ ಕೋಟೆಯ ಜೊತೆಗೆ ಬಹದ್ದೂರ್‌ಬಂಡಿ, ಇರಕಲ್‌ಗಡಾ, ಆನೆಗುಂದಿ, ಕುಮ್ಮಟದುರ್ಗ ಮುಂತಾದ ಗ್ರಾಮಗಳಲ್ಲಿ ಕೋಟೆಗಳು ನಿರ್ಮಾಣಗೊಂಡಿವೆ. ಅವುಗಳಲ್ಲಿ ಕೊಪ್ಪಳ ಕೋಟೆಯೇ ಅತ್ಯಂತ ಬಲಿಷ್ಠ ಮತ್ತು ಸುಭದ್ರವಾಗಿತ್ತು ಎಂದರೆ ತಪ್ಪಾಗಲಾರದು. ಅದನ್ನು ಇಂದಿಗೂ ಸಹ ಹಾಗೆಯೇ ಕಾಣಬಹುದಾಗಿದೆ. ಈ ಕೋಟೆಯ ನಿರ್ಮಾಣ ಮತ್ತು ವಿಶೇಷವಾಗಿ ಅದರೊಳಗೆ ನಡೆದ ಹೋರಾಟಗಳು ರೋಚಕವಾಗಿ ನಡೆದು ಹೋಗಿವೆ. ಈ ಕೊಪ್ಪಳ ಕೋಟೆಯ ಚರಿತ್ರೆಯನ್ನೊಮ್ಮೆ ಓದಿದಾಗ ಮೈ ರೋಮಾಂಚನಗೊಳ್ಳುತ್ತದೆ ಎನ್ನುವುದರಲ್ಲಿ ಅನುಮಾನವಿಲ್ಲ.

ದಕ್ಷಿಣ ಭಾರತದಲ್ಲೇ ಬಲಿಷ್ಠವಾದ ಕೋಟೆಗಳಲ್ಲಿ ಈ ಕೊಪ್ಪಳ ಕೋಟೆಯು ಒಂದಾಗಿತ್ತು. ಇದು ಏಳು ಸುತ್ತಿನಿಂದ ನಿರ್ಮಾಣಗೊಂಡ ಬಲಿಷ್ಠವಾದ ಕೋಟೆ. ಬಹುಶಃ ಸಪ್ತಾಂಗಗಳಲ್ಲಿ ಈ ಕೋಟೆಯೂ ಒಂದಾಗಿದ್ದರಿಂದ ಕೊಪ್ಪಳ ಕೋಟೆಯನ್ನು ಏಳು ಸುತ್ತಿನಿಂದ ನಿರ್ಮಿಸಿರಬೇಕು ಎಂದೆನಿಸುತ್ತದೆ. ಇಂತಹ ಬಲಿಷ್ಠವಾದ ಕೋಟೆಯು ಯಾವ ಕಾಲದಲ್ಲಿ ನಿರ್ಮಾಣ ಪ್ರಾರಂಭಿಸಲಾಯಿತು ಎಂಬ ಬಗ್ಗೆ ಮಾಹಿತಿಗಳು ಲಭ್ಯವಾಗುವುದಿಲ್ಲ. ಆದರೆ ಕೋಟೆಯ ಕೆಲ ಭಾಗಗಳ ನಿರ್ಮಾಣ, ಜೀರ್ಣೋದ್ಧಾರ, ಅಲ್ಲಿನ ಅಧಿಕಾರಿವರ್ಗ ಮತ್ತು ಅಭಿವೃದ್ಧಿ ಕಾರ್ಯಗಳು ಮಾತ್ರ ಕೆಲ ಶಾಸನಗಳಿಂದ

ತಿಳಿದುಬರುತ್ತದೆ. ಉಳಿದಂತೆ ಹೆಚ್ಚಿನ ಮಾಹಿತಿಗಳು ತಿಳಿದುಬರುವುದಿಲ್ಲ. ಈ ಕೋಟೆಯು ಮರಾಠ, ಮೈಸೂರಿನ ಹೈದರಾಲಿ ಹಾಗೂ ಟಿಪ್ಪುಸುಲ್ತಾನ ಮತ್ತು ಬಿಜಾಪುರದ ಆದಿಲ್‌ಷಾಹಿಗಳ ಕಾಲದಲ್ಲಿ ನಡೆದ ಕೋಟೆಯ ಕೆಲ ಭಾಗಗಳ ನಿರ್ಮಾಣ ಮತ್ತು ಅಭಿವೃದ್ಧಿಯ ಜೀರ್ಣೋದ್ಧಾರದ ಬಗ್ಗೆ ಇತಿಹಾಸದಿಂದ ತಿಳಿದುಬರುತದೆ.

ಈ ಕೋಟೆಯನ್ನು ಬಹಳ ಎತ್ತರವಾದ ಬೆಟ್ಟದ ಮೇಲೆ ಏಳು ಸುತ್ತಿನಿಂದ ನಿರ್ಮಿಲಾಗಿದೆ. ಕ್ರಿ.ಶ 16 ಮತ್ತು 17ನೇ ಶತಮಾನದಲ್ಲಿ ಮಾತ್ರ ಈ ಕೋಟೆಯ ಕೆಲ ಹಂತಗಳ ನಿರ್ಮಾಣದ ಸಂಗತಿಗಳು ತಿಳಿದುಬರುತ್ತವೆ. ಈ ಕಾಲಕ್ಕಿಂತ ಮೊದಲು ಅಥವಾ ನಂತರದ ದಾಖಲೆಗಳು ನಮಗೆ ಲಭ್ಯವಿಲ್ಲ. ಹೀಗಾಗಿ ಈ ಕೊಪ್ಪಳ ಕೋಟೆಯ ಬಗ್ಗೆ ಹೆಚ್ಚಿನ ಇತಿಹಾಸ ತಿಳಿಯುವುದಿಲ್ಲ. ಮತ್ತು ಈ ಕೋಟೆಯ ಕುರಿತು ಹೆಚ್ಚಿನ ಅಧ್ಯಯನಗಳೂ ನಡೆದಿಲ್ಲ. ಹೀಗಾಗಿ ಕೊಪ್ಪಳ ಕೋಟೆಯ ಕುರಿತು ದೊರೆತ ಅಲ್ಪ-ಸ್ವಲ್ಪ ಆಧಾರಗಳಲ್ಲೇ ಚರಿತ್ರೆ ಕಟ್ಟಿಕೊಡುವ ಪ್ರಯತ್ನ ಮಾಡಿದ್ದೇನೆ.

ಈ ಕೋಟೆಯ ಆವರಣದಲ್ಲಿ ಸುಮಾರು 60ಕ್ಕೂ ಅಧಿಕ ಶಾಸನಗಳು ಲಭ್ಯವಾಗಿವೆ. ಆದರೆ ಅವುಗಳಲ್ಲಿ ಕೇವಲ ನಾಲ್ಕೈದು ಶಾಸನಗಳು ಮಾತ್ರ ಕೋಟೆಗೆ ಸಂಬಂಧಿಸಿದವುಗಳಾಗಿವೆ. ಕೊಪ್ಪಳವು ಜೈನಧರ್ಮದ ಬಹಳ ಪವಿತ್ರವಾದ ಕ್ಷೇತ್ರವಾಗಿತ್ತು. ಇಲ್ಲಿ ಜೈನಧರ್ಮದ ಅನೇಕ ಕಾರ್ಯಚಟುವಟಿಕೆಗಳು ನಡೆದ ಬಗ್ಗೆ ಇಲ್ಲಿನ ಆಕರಗಳಿಂದ ತಿಳಿದುಬರುತ್ತದೆ. ಆ ಆಕರಗಳೇ ಈ ಕೋಟೆಯೊಳಗಿರುವ ಶಾಸನಗಳಾಗಿವೆ. ಜೈನಾಚಾರ್ಯರು ತಾವು ಆಚರಿಸಿದ ವ್ರತಗಳು, ಸಲ್ಲೇಖ ವ್ರತಗಳು, ನಿಶಧಿಗೆಗಳು, ಬಸದಿ ನಿರ್ಮಾಣಗಳು, ಜೀರ್ಣೋದ್ಧಾರಗಳು, ಆಚಾರ್ಯರು ಮುಡುಪಿದ ಸಂಗತಿಗಳು, ಮೂರ್ತಿ-ಶಿಲ್ಪಗಳನ್ನು ನಿರ್ಮಿಸಿದ ಮುಂತಾದ ವಿಚಾರಗಳು ಇಲ್ಲಿರುವ ಶಾಸನಗಳಿಂದ ತಿಳಿದುಬರುತ್ತದೆ. ಕೊಪ್ಪಳ ನಗರದಲ್ಲಿ ದೊರೆತ ಶಾಸನಗಳಲ್ಲಿ ಸುಮಾರು ಅರ್ದದಷ್ಟು ಶಾಸನಗಳು ಈ ಕೋಟೆಯಲ್ಲಿಯೇ ದೊರಕಿರುವುದರಿಂದ ಇದು ಪ್ರಾಚೀನ ಕಾಲದಲ್ಲಿ ಬಹಳ ವಿಶೇಷವಾದ ಕೋಟೆಯಾಗಿರಬೇಕು. ಆದ್ದರಿಂದಲೇ ಈ ಕೋಟೆಯೊಳಗೆ ಧಾರ್ಮಿಕ ಕಾರ್ಯ-ಚಟುವಟಿಕೆಗಳು ನಡೆದು ಇಲ್ಲಿಯೇ ಶಾಸನಗಳನ್ನು ಕೊರೆಸಿರಬೇಕು ಎಂದೆನಿಸುತ್ತದೆ.

ಕೊಪ್ಪಳ ಕೋಟೆಯ ಕುರಿತು ದೊರೆತ ಫರ್ಷಿಯಾ ಭಾಷೆಯ ಶಾಸನಗಳೇ ಹೆಚ್ಚು. ಅವುಗಳೇ ಈ ಕೋಟೆಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಮೂಲಾಧಾರಗಳಾಗಿವೆ. ಇದೇ ಕೋಟೆಯಲ್ಲಿ ದೊರೆತ ಕ್ರಿ.ಶ 1619ರ ಫರ್ಷಿಯಾ ಭಾಷೆಯ ಶಾಸನದಲ್ಲಿ ಎರಡನೆ ಇಬ್ರಾಹಿಂ ಆದಿಲ್‌ಷಾನ ಕಾಲದಲ್ಲಿ ಅವನ ನೆಚ್ಚಿನ ಗುಲಾಮ ಯಕ್ಕೂತ್‌ಖಾನ್ ಮತ್ತು ಘಾಜೀಖಾನ್ ಇವರಿಬ್ಬರೂ ಕೋಟೆಯ ಅಧಿಕಾರಿಗಳಾಗಿದ್ದು, ಮಸೀದಿಯನ್ನು ನಿರ್ಮಿಸಿದರೆಂದು ಉಲ್ಲೇಖಿಸಲಾಗಿದೆ. ಅದೇ

ರೀತಿ ಕೋಟೆಯಲ್ಲಿನ ಮತ್ತೊಂದು ಶಾಸನದಲ್ಲಿ ಎರಡನೆ ಇಬ್ರಾಹಿಂ ಆದಿಲ್‌ಷಾನ ಅವಧಿಯಲ್ಲಿ ಫರ್ಷಿಯಾ ಭಾಷೆಯ ಈ ಶಾಸನದ ಆರಂಭದಲ್ಲಿ ಮಹಮದ್‌ನನ್ನು ಮತ್ತು ಅಲಿಯನ್ನು ಸ್ಮರಿಸಿದೆ. ಪ್ರಪಂಚಕ್ಕೆ ಒಡೆಯನಾದ ಇಂತಹ ರಾಜನ ಬಂಟನಾದ ಸುಲ್ತಾನ ಆಲಿಯು ಕೋಟೆಯನ್ನು ನವೀಕರಿಸಿ ಕೆಲ ಭಾಗಗಳನ್ನು ನಿರ್ಮಿಸಿದನೆಂದು ತಿಳಿಸುತ್ತದೆ. ಇಲ್ಲಿ ಎರಡನೆ ಇಬ್ರಾಹಿಂ ಆದಿಲ್ ಷಾನನ್ನೂ ಪ್ರಪಂಚಕ್ಕೆ ಒಡೆಯನೆಂದು ಹೊಗಳಿದಂತೆ ಕಾಣುತ್ತದೆ. ಬಹತೇಕ ಶಾಸನಗಳಲ್ಲಿ ವರ್ಣನೆ ಇರುವುದು ಸಾಮಾನ್ಯವಾದ ಸಂಗತಿ. ಆದ್ದರಿಂದ ಆದಿಲ್ ಷಾನ ಕುರಿತು ಇಂತಹ ವರ್ಣನೆ ಬಂದಿರಬಹುದು.

ಕೊಪ್ಪಳ ಸೀಮೆಯು ಮರಾಠ ಛತ್ರಪತಿ ಶಿವಾಜಿಯ ವಶದಲ್ಲಿತ್ತು. ಮರಾಠರು ಮತ್ತು ಹೈದರಾಲಿಯ ನಡುವೆ ನಡೆದ ಯುದ್ಧದ ನಂತರ ಕೊಪ್ಪಳದ ಈ ಕೋಟೆಯು ಹೈದರಾಲಿಯ ವಶವಾಯಿತು. ಅವನ ಅವಧಿಯಲ್ಲಿಯೇ ಅನೇಕ ಅಭಿವೃದ್ಧಿ ಕಾರ್ಯಗಳು ನಡೆದ ಬಗ್ಗೆ ಇತಿಹಾಸದಲ್ಲಿ ದಾಖಲಾಗಿವೆ. ಕ್ರಿ.ಶ 1746ರ ಶಾಸನದಲ್ಲಿ ಹೈದರಾಲಿಯ ಕಾಲಾವಧಿಯಲ್ಲಿ ಕೊಪ್ಪಳದಲ್ಲಿ ಅಸಾಮಾನ್ಯ ಕಟ್ಟಡಗಳನ್ನು ನಿರ್ಮಿಸಿಸಲಾಗಿತ್ತು. ಕಿಲ್ಲೇದಾರನಾದ ಮಹಮ್ಮದ್‌ಖಾನ್ ಬಹ್ಲಾಮಿಯು ಆ ಕಟ್ಟಡಗಳಿಗೆ ಕಾರಣನಾಗಿದ್ದನೆಂದಿದೆ. ನೀರು ಜನರಿಗೆ ಹೇಗೆ ಮುಖ್ಯವಾಗಿತ್ತೊ, ಅದರಂತೆ ಪಶು-ಪಕ್ಷಿಗಳಿಗೆ ಅವಶ್ಯವೆಂದು ಹೇಳಿ, ಕೋಟೆಯನ್ನು ಸುಣ್ಣ ಮತ್ತು ಮಣ್ಣಿನಿಂದ ನಿರ್ಮಿಸಿ ಬಾವಿಯನ್ನು ನಿರ್ಮಿಸಿದನಂತೆ. ಅದಕ್ಕೆ 'ಚಾಂದ್‌ಕುಂತ' ಎಂದು ಕರೆದನೆಂದಿದೆ. ಇವನು ತನ್ನ ಜ್ಞಾನಬಲದಿಂದ ಅನೇಕ ದಿಕ್ಕುಗಳಲ್ಲಿ ಕೆರೆಗಳನ್ನು ನಿರ್ಮಿಸಿದನು. ನೀರಿನ ಪ್ರವಾಹದ ಮಧ್ಯದಲ್ಲಿ ಒಂದು ಜಲಾಶಯವನ್ನು ನಿರ್ಮಿಸಿದನು. ಅವನ ಈ ಮಾದರಿ ಕೆಲಸದಿಂದ ಕೊಪ್ಪಳವು ಸುಖವನ್ನು ಅನುಭವಿಸುತ್ತಿತ್ತೆಂದು ಪ್ರಸ್ತುತ ಶಾಸನದಲ್ಲಿ ಉಲ್ಲೇಖಿಸಿದೆ. ಇದೇ ಹೈದರಲಿಯ ಕಾಲದಲ್ಲಿ ಕೆರೆಯಿಂದ ಕೋಟೆಯೊಳಗೆ ಕಾಲುವೆ ಮೂಲಕ ನೀರನ್ನು ತಂದರೆಂದು ದಾಖಲಾಗಿದೆ. ಅಲ್ಲದೆ ಕೋಟೆಯೊಳಗಿನ ಬಾಗಿಲು, ಗೋಡೆಗಳನ್ನು ಕಟ್ಟಿದ್ದು, ಜೀರ್ಣೋದ್ಧಾರ ಮಾಡಿದ್ದು ಮತ್ತು ಅಲಂಕಾರಗೊಳಿಸಿದ ಬಗ್ಗೆ ಇತಿಹಾಸದಲ್ಲಿ ದಾಖಲಾಗಿದೆ. ಇಲ್ಲಿ ಬಹಳ ವಿಶೇಷವಾಗಿ ಗಮನಿಸಬೇಕಾದ ಸಂಗತಿ ಎಂದರೆ ಕೆಳಗೆ ಇರುವ ಕೆರೆಯ ನೀರನ್ನು ಕೋಟೆಯೊಳಗೆ ಹರಿಸಿ ಅಲ್ಲಿನ ಪಕ್ಷಿಗಳಿಗೆ ಮತ್ತು ತಮ್ಮ ಇತರೆ ಚಟುವಟಿಕೆಗಳಿಗೆ ಉಪಯೋಗ ಆಗುವಂತೆ ಮಾಡಿಕೊಂಡಿದ್ದರಂತೆ. ಅಂದರೆ ಯಾವ ರೀತಿಯ ತಂತ್ರಜ್ಞಾನವನ್ನು ಬಳಸಿ ಈ ರೀತಿಯ ಕಾಲುವೆಯನ್ನು ನಿರ್ಮಿಸಿರಬಹುದೆಂದು ಆಶ್ಚರ್ಯವಾಗುತ್ತದೆ. ಆಗಿನ ಕಾಲದಲ್ಲಿ ಸುಲ್ತಾನರು ಪ್ರೆಂಚ್ ಇಂಜಿನಿಯರ್ ಅಧಿಕಾರಿಗಳನ್ನು ಬಳಸಿಕೊಂಡು ಇಂತಹ ನಿರ್ಮಾಣಗಳನ್ನು ನಿರ್ಮಿಸುತ್ತಿದ್ದರೆಂದು ಹೇಳಲಾಗುತ್ತಿದೆ.

ಕ್ರಿ.ಶ 1782ರ ಶಾಸನದಲ್ಲಿ ಈ ಕೋಟೆಯ ಬಲಿಷ್ಠತೆಯನ್ನು ಉಲ್ಲೇಖಿಸಿದೆ. ದೇವರು ಇದನ್ನು ಸಿಡಿಮದ್ದುಗಳಿಂದ ರಕ್ಷಿಸಿದನು. ದೇವರ ದಯೆಯಿಂದ ಇದು ಬಹುಗಟ್ಟಿಯಾಗಿ ನಿರ್ಮಾಣವಾಗಿದೆ ಎಂದು ಪ್ರಸ್ತುತ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಮತ್ತು ಅದರ ಎಲ್ಲಾ ಕೆಲಸಗಳು ಮುಗಿದವು ಎಂದೂ ಉಲ್ಲೇಖವಿದೆ. ಬಹುಶಃ ಯುದ್ಧದ ನಂತರ ಕೋಟೆಯ ಸ್ಥಿತಿಗತಿಯನ್ನು ಕಂಡು ಬರೆಸಿದ ಶಾಸನ ಇದಾಗಿರಬಹುದು. ಯುದ್ಧದ ನಂತರದಲ್ಲಿ ಕೋಟೆಯ ಬಾಗಿಲು, ಗೋಡೆ ಮತ್ತು ಇತರೆ ಯಾವುದೇ ಭಾಗಗಳಿಗೆ ಏನೂ ತೊಂದರೆ ಆಗದೇ ಸುಭದ್ರವಾಗಿರಬೇಕು. ಅದಕ್ಕಾಗಿ ಇಂತಹ ಶಾಸನವನ್ನು ಬರೆಸಿರಬಹುದೆಂದು ಅನಿಸುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಕೋಟೆಯ ಬಲಿಷ್ಠತೆ. ಅದನ್ನು ಯುದ್ಧ–ಕಾಳಗದಂತಹ ಘನಘೋರ ಹೊಡೆತಗಳಿಗೂ ನಲುಗದೆ, ಜಗ್ಗದೆ, ಬಗ್ಗದೆ ಯಾವುದೇ ಹಾನಿಗೆ ಒಳಗಾಗದಂತೆ ಈ ಕೋಟೆಯನ್ನು ನಿರ್ಮಿಸಿರುವುದು. ಅಂತಹ ಬಲಿಷ್ಠವಾದ ಕೋಟೆ ಈ ಕೊಪ್ಪಳದ್ದಾಗಿತ್ತು ಎಂಬುದು ಹೆಮ್ಮೆಯ ಸಂಗತಿ.

ಹೈದರಾಲಿ ಮತ್ತು ಟಿಪ್ಪುಸುಲ್ತಾನ ಅವಧಿಯ ನಂತರ ಈ ಕೋಟೆಯು ಹೈದರಾಬಾದ್ ನಿಜಾಮರ ಕೈ ವಶವಾಯಿತು. ಅವನ ನಂತರ ಬ್ರಿಟಿಷರು ಆಗಮಿಸಿ ಈ ಕೊಪ್ಪಳವನ್ನು ವಶಪಡಿಸಿಕೊಂಡರು. ಆಗ ಈ ಕೋಟೆಯು ಅವರ ಅಧೀನಕ್ಕೊಳಪಟ್ಟಿತ್ತು ಎಂಬುದು ಇತಿಹಾಸದಿಂದ ತಿಳಿದುಬರುತ್ತದೆ.

ಬ್ರಿಟಿಷರ ಅವಧಿಯಲ್ಲಿ ಈ ಕೊಪ್ಪಳದ ಬಲಿಷ್ಠ ಕೋಟೆಯು ಸ್ವಾತಂತ್ರ್ಯ ಹೋರಾಟದ ಕೇಂದ್ರವಾಗಿ ಮಾರ್ಪಟಿತ್ತು ಎಂಬುದು ಈ ಭಾಗದ ಹೆಮ್ಮೆ. ಈ ಕೋಟೆಯೊಳಗೆ ಬಹಳ ಪ್ರಮುಖವಾಗಿ ಎರಡು ದಾಳಿಗಳು ನಡೆದ ಬಗ್ಗೆ ಇತಿಹಾಸದಲ್ಲಿ ದಾಖಲಾಗಿವೆ. ವೀರಪ್ಪ ದೇಸಾಯಿಯವರು ಬ್ರಿಟಿಷರೊಂದಿಗೆ ಹೋರಾಡಿದ ಪ್ರಸಂಗ, ಮತ್ತೊಂದು ಮುಂಡರಗಿ ಭೀಮರಾಯ ಮತ್ತು ಹಮ್ಮಿಗಿ ಕೆಂಚನಗೌಡ ದೇಸಾಯಿಯವರು ಕೆಚ್ಚೆದೆಯಿಂದ ಹೋರಾಡುತ್ತಾ ಮಡಿದಿದ್ದು ಇದೇ ಕೋಟೆಯ ಗರ್ಭದೊಳಗೆ ಎನ್ನುವುದು ರೋಚಕ. ಅಷ್ಟೇ ಅಲ್ಲ ಇದು ಬಹುತೇಕ ಸ್ವಾತಂತ್ರ್ಯ ಹೋರಾಟಗಾರರಿಗೆ ಅಡಗುತಾಣವಾಗಿತ್ತಂತೆ. ಇದನ್ನರಿತ ಧಾರವಾಡದ ಕಲೆಕ್ಟರ್ ಬಳ್ಳಾರಿ ಮತ್ತು ರಾಯಚೂರು ಕಲೆಕ್ಟರರಿಗೆ ಪತ್ರ ಬರೆದು ಅವರನ್ನು ನಿಗ್ರಹಿಸುವಂತೆ ಮನವಿ ಮಾಡಿದರೆಂದು ಇತಿಹಾಸದಿಂದ ತಿಳಿದುಬರುತ್ತದೆ.

ನಿಜಾಮರ ಕೈವಶದಲ್ಲಿದ್ದ ಕೊಪ್ಪಳ ಪ್ರದೇಶವನ್ನು ಬ್ರಿಟಿಷರ ಸೈನ್ಯವೂ ಆಡಳಿತ ನಡೆಸುತ್ತಿತ್ತು. ಈ ಹೈದರಾಬಾದ–ಕರ್ನಾಟಕ ಪ್ರದೇಶವು ಅತ್ತ ನಿಜಾಮರ ಮತ್ತು ಇತ್ತ ಬ್ರಿಟಿಷರ ಇಬ್ಬರ ನಡುವಿನ ಅತಂತ್ರ ಪರಿಸ್ಥಿತಿಯಲ್ಲಿತ್ತು. ಹೀಗಾಗಿ ಇಲ್ಲಿ ನಿಜಾಮರ ರಜಾಕಾರರು ಮತ್ತು ಬ್ರಿಟಿಷ್ ಸೈನ್ಯ ಇಬ್ಬರಿಂದಲೂ ಆಡಳಿತವೋ, ದಬ್ಬಾಳಿಕೆಯೋ

ಎಂಬಂತೆ ಭಾಸವಾಗುತ್ತಿತ್ತು. ಅಳವಂಡಿಯಲ್ಲಿ ಬ್ರಿಟಿಷ್ ಸೈನ್ಯ ಬೀಡುಬಿಟ್ಟಿತ್ತು. ಯಾಕೆಂದರೆ ವೀರಪ್ಪ ದೇಸಾಯಿಯವರ ಸಹಾಯಕ್ಕೆ ಬರುವ ಕಲಕೇರಿ ಗ್ರಾಮದ ಸೈನ್ಯವನ್ನು ತಡೆಯುವುದು ಅವರ ಉದ್ದೇಶವಾಗಿತ್ತು. ಆಗ ವೀರಪ್ಪ ದೇಸಾಯಿಯವರು ಕೊಪ್ಪಳ ಕೋಟೆಯೊಳಗೆ ಬೀಡಾರ ಹೂಡಿದ್ದರು. ಇದನ್ನರಿತ ಬ್ರಿಟಿಷರು ಕೋಟೆಯನ್ನು ಮುತ್ತಿದರು. ಅಲ್ಲಿ ವೀರಪ್ಪ ದೇಸಾಯಿಯ ಪಡೆ ಮತ್ತು ಬ್ರಿಟಿಷ್ ಸೈನ್ಯದ ನಡುವೆ ಯುದ್ಧ ನಡೆಯಿತು. ದೇಸಾಯಿ ಪಡೆಯು ತೋಪಿನಿಂದ ಗುಂಡುಹಾರಿಸಲಾಯಿತು. ಬ್ರಿಟಿಷ್ ಸೈನ್ಯವೂ ಫಿರಂಗಿಗಳಿಂದ ಗುಂಡು ಹಾರಿಸಿ ಕೋಟೆಯ ಗೋಡೆಗಳನ್ನು ಛಿದ್ರಗೊಳಿಸಿದರು. ಏನೇ ಪ್ರಯತ್ನಪಟ್ಟರೂ ಕೋಟೆಯನ್ನು ವಶಪಡಿಸಿಕೊಳ್ಳುವುದು ಮತ್ತು ವೀರಪ್ಪ ದೇಸಾಯಿಯವರನ್ನು ಬಂಧಿಸುವುದು ಬ್ರಿಟಿಷರಿಗೆ ಕಷ್ಟವಾಯಿತು. ಬ್ರಿಟಿಷ್ ಸೈನ್ಯ ಬಾಗಿಲುಗಳನ್ನು ನಾಶಮಾಡುತ್ತಾ ಕೋಟೆಯೊಳಗೆ ಪ್ರವೇಶಿಸಿತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ವೀರಪ್ಪ ದೇಸಾಯಿಯವರು ಅಲ್ಲಿಂದ ತಪ್ಪಿಸಿಕೊಂಡು ಹೋದರು. ಇದು ವೀರಪ್ಪ ದೇಸಾಯಿಯವರಿಗೆ ಅನಿವಾರ್ಯವಾಗಿತ್ತು. ಅಲ್ಲಿಂದ ನಂತರ ದೇಸಾಯಿಯವರು ಬೇರೆ-ಬೇರೆ ಸ್ಥಳಗಳಲ್ಲಿ ವಾಸವಾಗಿದ್ದರೂ ಕೊನೆಗೆ ನಿಜಾಮರಿಂದ ಕೊಲ್ಲಲ್ಪಟ್ಟರೆಂದು ದಾಖಲಾಗಿದೆ.

ನಂತರ ದಿನಗಳಲ್ಲಿ ಮುಂಡರಗಿ ಭೀಮರಾಯ ಮತ್ತು ಹಮ್ಮಿಗೆ ಕೆಂಚನಗೌಡ ದೇಸಾಯಿಯವರು ಬ್ರಿಟಿಷರ ವಿರುದ್ಧ ಹೋರಾಡುತ್ತಲೇ ಇದೇ ಕೋಟೆಯೊಳಗೆ ಮಡಿದದ್ದು ಇತಿಹಾಸ. 1857ರಲ್ಲಿ ದೇಶದಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ನಡೆದಂತೆ ಕೊಪ್ಪಳದಲ್ಲಿಯೂ ಸಹ ಅದರ ಪ್ರಭಾವದಿಂದ ಇಲ್ಲಿಯೂ ಬ್ರಿಟಿಷರ ವಿರುದ್ಧ ಯುದ್ಧಗಳು ನಡೆದ ಬಗ್ಗೆ ಇತಿಹಾಸದಲ್ಲಿದೆ. ಮುಂಡರಗಿ ಭೀಮರಾಯರು ಬ್ರಿಟಿಷರಿಗೆ ತಲೆನೋವಾಗಿ ಪರಿಣಮಿಸಿದ್ದನು. ಇದರಿಂದ ಬೇಸತ್ತ ಕೊಪ್ಪಳ ತಹಸಿಲ್ದಾರರಾದ ಮಹ್ಮದ್ ಹನೀಫ್‌ನು ಭೀಮರಾಯನ ಇಬ್ಬರು ಪತ್ನಿಯರನ್ನು ಮತ್ತು 12 ವರ್ಷದ ಮಗನನ್ನು ಬಂಧಿಸಿದರು. ಇದರಿಂದ ಕುಪಿತನಾದ ಮುಂಡರಗಿ ಭೀಮರಾಯನು ಠಾಣೆಯ ಮೇಲೆ ದಾಳಿ ಮಾಡಲು ಯೋಚಿಸಿದನು. ಕೊಪ್ಪಳ ಕೋಟೆಯಲ್ಲಿ ಸಶಸ್ತ್ರಗಳನ್ನು ಸಂಗ್ರಹಿಸಿಕೊಂಡು ಹಮ್ಮಿಗೆ ಕೆಂಚನಗೌಡ ದೇಸಾಯಿ ಮತ್ತು ತನ್ನ ತಂಡದೊಂದಿಗೆ ಸಜ್ಜಾಗಿ ಕುಳಿತನು. ಆ ಕೋಟೆಯ ರಕ್ಷಣಾ ಜವಾಬ್ದಾರಿ ವಹಿಸಿದ್ದ ಕೊಪ್ಪಳ ತಹಸಿಲ್ದಾರರು ಭೀಮರಾಯನನ್ನು ಹುಡುಕಿ ಕೊಡಲು ಸೂಚಿಸಿದರು. ಯಾರು ಭೀಮರಾಯನ ತಲೆ ತರುವರೊ ಅವರಿಗೆ 500 ರೂಪಾಯಿ ಬಹುಮಾನ ಕೊಡುವುದಾಗಿ ಪ್ರಕಟಿಸಿದನು. ಬ್ರಿಟಿಷರು ಎಲ್ಲಾ ಸಿದ್ಧತೆಗಳೊಂದಿಗೆ 1800 ಸೈನಿಕರೊಂದಿಗೆ ಕೋಟೆಗೆ ಮುತ್ತಿಗೆ ಹಾಕಿದರು. ಬ್ರಿಟಿಷರು ಕೋಟೆಯ ಗೋಡೆಗಳನ್ನು ಹೊಡೆಯುವ ಪ್ರಯತ್ನ ಮಾಡಿದರೂ ಅದು ಸಫಲವಾಗಲಿಲ್ಲ. ಯಾಕೆಂದರೆ ಅದು ಬಲಿಷ್ಠವಾದ ಕೋಟೆಯಾದ್ದರಿಂದ

ಛಿದ್ರಗೊಳಿಸುವುದು ಕಷ್ಟವೇ ಆಗಿತ್ತು. ಆದರೆ ಅಲ್ಲಿರುವ ಬಾಗಿಲುಗಳನ್ನು ಕಾಯುವವರು ಮೋಸದಿಂದ ಬಾಗಿಲನ್ನು ತೆಗೆದರು. ಇದರಿಂದ ಬ್ರಿಟಿಷ್ ಸೈನ್ಯವು ಕೋಟೆಯೊಳಗೆ ನುಗ್ಗಿತು. ಅಲ್ಲಿ ಭೀಕರ ಕಾಳಗ ನಡೆಯಿತು. ಭೀಮರಾಯ ಮತ್ತು ಹಮ್ಮಿಗೆ ಕೆಂಚನಗೌಡರ ಸಶಸ್ತ್ರಗಳು ಮುಗಿಯುತ್ತಾ ಬಂದವು. ಇದನ್ನರಿತ ಭೀಮರಾಯನು ಹಮ್ಮಿಗೆ ಕೆಂಚನಗೌಡರನ್ನು ಗುಂಡಿಕ್ಕಿ ಕೊಂದು ತಾನೂ ಗುಂಡು ಹಾರಿಸಿಕೊಂಡು ಪ್ರಾಣಾರ್ಪಣೆ ಮಾಡಿದರೆಂದು ತಿಳುಬರುತ್ತದೆ. ಆದರೆ ಇದನ್ನು ಕೆಲ ವಿದ್ವಾಂಸರು ಒಪ್ಪುವುದಿಲ್ಲ. ಮುಂಡರಗಿ ಭೀಮರಾಯ ಮತ್ತು ಹಮ್ಮಿಗೆ ಕೆಂಚನಗೌಡ ದೇಸಾಯಿಯವರು ಬ್ರಿಟಿಷರ ವಿರುದ್ಧ ಹೋರಾಡುತ್ತಲೇ ಹತ್ಯೆಗೊಳಗಾದರೆಂದು ಹೇಳಲಾಗುತ್ತಿದೆ. ಅದೇನೆ ಇದ್ದರೂ ಕೊಪ್ಪಳದ ಈ ಕೋಟೆಯ ಗರ್ಭದೊಳಗೆ ನಡೆದ ಸ್ವಾತಂತ್ರ್ಯ ಚಳುವಳಿಗಳು ಸಾಮಾನ್ಯವಲ್ಲ. ಅವರ ಪ್ರಾಣಾರ್ಪಣೆ ಮತ್ತು ಬಲಿದಾನಗಳಿಂದ ಈ ದೇಶಕ್ಕೆ ಬಿಡುಗಡೆ ದೊರಕಿದೆ ಎಂಬುದು ಮಾತ್ರ ಸತ್ಯ.

ಹೀಗೆ ಕೊಪ್ಪಳ ಕೋಟೆಯು ಅನಂತ ಕಾಲದಿಂದ ತನ್ನ ಗರ್ಭದೊಳಗೆ ಹುದುಗಿಸಿಕೊಂಡಿರುವ ಚರಿತ್ರೆಯನ್ನು ಒಮ್ಮೆ ಅವಲೋಕಿಸಿದಾಗ ಎದೆ ಝಲ್ಲೆನ್ನುತ್ತದೆ, ಅದರ ನಿರ್ಮಾಣ, ಜೀರ್ಣೋದ್ಧಾರ ಮುಂತಾದ ಅಭಿವೃದ್ಧಿ ಕಾರ್ಯಗಳನ್ನೊಮ್ಮೆ ಸ್ಮರಿಸಿ ನಮಿಸಬೇಕಿದೆ.

**ಆಕರ ಗ್ರಂಥಗಳು :–**


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಬಿ.ಸಿ.ಪಾಟೀಲ, ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಹರಿಹರ ಪ್ರಕಾಶನ ಕೊಪ್ಪಳ–1998
3) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರಿಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020
4) ಡಾ. ಚನ್ನಬಸಪ್ಪ ಎಸ್. ಪಾಟೀಲ್, ಕರ್ನಾಟಕ ಕೋಟೆಗಳು, ಸಂಪುಟ–1, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
5) ಡಾ. ಎಂ. ಕೊಟ್ರೇಶ್, ಬಳ್ಳಾರಿ ಜಿಲ್ಲೆಯ ಕೋಟೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ–2011


* * * * *

# ಕೊಪ್ಪಳದ ಕಿಷ್ಕಿಂದೆಯ ಅಂಜನಾದ್ರಿ ಪರ್ವತ ಪ್ರದೇಶವೇ ಹನುಮನ ಜನ್ಮಸ್ಥಳ; ಒಂದು ಸಮರ್ಥನೆ

ಹಿಂದುಗಳ ಪವಿತ್ರ ಗ್ರಂಥಗಳೆನಿಸಿರುವ ರಾಮಾಯಣ ಮತ್ತು ಮಹಾಭಾರತ ಎರಡು ಮಹಾಕಾವ್ಯಗಳು ಭಾರತದ ಅದ್ವಿತೀಯ ಗ್ರಂಥಗಳೆನಿಸಿವೆ. ಅವುಗಳಲ್ಲಿ ಕೆಲ ಪ್ರಸಂಗಗಳಲ್ಲಿ ಸಾಮ್ಯತೆ ಕಂಡರೂ ಈ ಎರಡೂ ಗ್ರಂಥಗಳು ವಿಭಿನ್ನ ಕಥೆಗಳನ್ನು ಹೊಂದಿವೆ. ಅವುಗಳಲ್ಲಿ ರಾಮನ ಕುರಿತಾಗಿ ಹೇಳಲಾದ ರಾಮಾಯಣ ಗ್ರಂಥ ಹೆಚ್ಚಿನ ಮಹತ್ವವನ್ನು ಪಡೆದಿದೆ. ಮಹರ್ಷಿ ವಾಲ್ಮೀಕಿ ವಿರಚಿತ ರಾಮಾಯಣ ಅತೀ ಹೆಚ್ಚು ಪ್ರಸಿದ್ದಿ ಪಡೆದುಕೊಂಡಿದೆ. ಇದು ರಾಮನ ಕಥೆಯನ್ನು ಒಳಗೊಂಡ ಬೃಹತ್ ಸಂಸ್ಕೃತ ಮಹಾಕಾವ್ಯ. ಇದು 24,000 ಶ್ಲೋಕಗಳು ಮತ್ತು ಏಳು ಕಾಂಡಗಳಿಂದ ಕೂಡಿದ ಬೃಹತ್ ಗ್ರಂಥ. ಈ ಕಾವ್ಯವು ಕ್ರಿ.ಪೂ ಸುಮಾರು 5 ರಿಂದ 1ನೇ ಶತಮಾನದ ಕಾಲದಲ್ಲಿ ರಚಿತವಾಯಿತೆಂದು ಸಂಶೋಧನೆ ಹೇಳುತ್ತದೆ. ಈ ಕಾವ್ಯವು ದಶಾವತಾರಗಳಲ್ಲಿ ಒಬ್ಬರಾದ ಶ್ರೀರಾಮನ ಅವತಾರವನ್ನು ಒಳಗೊಂಡಿದೆ. ಈ ರಾಮಾಯಣವು ಏಳು ಕಾಂಡಗಳಲ್ಲಿ ರಚಿತವಾಗಿದ್ದು; ಶ್ರೀರಾಮನ ಜನನ, ಬಾಲ್ಯ, ಸೀತೆಯ ಸ್ವಯಂವರಗಳನ್ನು ಒಳಗೊಂಡ ಬಾಲಕಾಂಡ, ಕೈಕೆಯಿ ದಶರಥನಿಂದ ಪಡೆದ ವರದ ಫಲವಾಗಿ ರಾಮನನ್ನು ವನವಾಸಕ್ಕೆ ಕಳುಹಿಸುವ ಅಯೋಧ್ಯಾಕಾಂಡ, ವನವಾಸದಲ್ಲಿ ರಾಮನ ಜೀವನ ಮತ್ತು ಸೀತೆಯ ಅಪಹರಣ ಒಳಗೊಂಡ ಅರಣ್ಯಕಾಂಡ, ಸೀತೆಯನ್ನು ಅರಸುತ್ತಾ ವಾನರ ಸಾಮ್ರಾಜ್ಯ ಕಿಷ್ಕಿಂದೆಗೆ ಬಂದು ಸುಗ್ರೀವ ಮತ್ತು ಹನುಮಂತರ ಸಹಾಯ ಪಡೆಯುವ ಕಿಷ್ಕಿಂದಾಕಾಂಡ, ಹನುಮಂತನ ವಿವರದೊಂದಿಗೆ ಸಮುದ್ರ ಲಂಘನ ಮಾಡಿ ಲಂಕೆಯನ್ನು ಪ್ರವೇಶಿಸೋ ಸುಂದರಕಾಂಡ, ಯುದ್ಧದಲ್ಲಿ ಶ್ರೀರಾಮನು ರಾವಣರನ್ನು ಸಂಹಾರ ಮಾಡಿ ಮರಳಿ ಸೀತೆಯನ್ನು ಅಯೋಧ್ಯೆಗೆ ಕರೆದುಕೊಂಡು ಬಂದು ಪಟ್ಟಾಭಿಷೇಕದ ಯುದ್ಧಕಾಂಡ ಮತ್ತು ಕೊನೆಯಲ್ಲಿ ಅಯೋಧ್ಯೆಯಲ್ಲಿ ಅಗಸನ ಮಾತಿನಿಂದ ನೊಂದುಕೊಂಡು ಸೀತೆಯನ್ನು ಪುನಃ ಕಾಡಿಗಟ್ಟುವ ಉತ್ತರಕಾಂಡ. ಹೀಗೆ ಏಳು ಕಾಂಡಗಳಿಂದ ಶ್ರೀ ಮಹರ್ಷಿ ವಾಲ್ಮೀಕಿಯು ರಾಮಾಯಣ ಎಂಬ ಮಹಾಕಾವ್ಯವನ್ನು ರಚಿಸಿದ್ದಾರೆ. ಉಳಿದಂತೆ ಇನ್ನೂ ಹಲವಾರು ಕವಿಗಳು ದೇಶದ ಬೇರೆ ಬೇರೆ ಭಾಷೆಗಳಲ್ಲಿ ವಿಭಿನ್ನ ರೀತಿಯಲ್ಲಿ ರಾಮಾಯಣವನ್ನು ರಚಿಸಿದ್ದಾರೆ. ಇವುಗಳೆಲ್ಲವೂ ವಾಲ್ಮೀಕಿ ರಚಿಸಿದ ರಾಮಾಯಣವನ್ನೇ ಮೂಲ ಕಥೆಯನ್ನು ಇಟ್ಟುಕೊಂಡು ಕೆಲ ಬದಲಾವಣೆ ಮತ್ತು ಅನುಕೂಲಕ್ಕೆ ತಕ್ಕಂತೆ ಪಾತ್ರ, ಸನ್ನಿವೇಶ ಹಾಗೂ ಪರಿಸರಗಳನ್ನು ಆಧರಿಸಿಕೊಂಡು ರಚಿತವಾದವುಗಳು. ಅವುಗಳಲ್ಲಿ ಶ್ರೀ

ಮಹರ್ಷಿ ವಾಲ್ಮೀಕಿ ವಿರಚಿತ ರಾಮಾಯಣವೇ ಮೂಲ ಮತ್ತು ಬಹುದೊಡ್ಡ ಮಹಾಕಾವ್ಯವೆನಿಸಿದೆ.

ಶ್ರೀ ಮಹರ್ಷಿ ವಾಲ್ಮೀಕಿಯಿಂದ ರಚಿತವಾದ ರಾಮಾಯಣದ ಕಿಷ್ಕಿಂದೆ ಮತ್ತು ಸುಂದರ ಕಾಂಡಗಳು ಕೊಪ್ಪಳದ ಪ್ರದೇಶ ಆನೆಗೊಂದಿಯ ಹತ್ತಿರವಿರುವ ಕಿಷ್ಕಿಂದೆಯ ಪರಿಸರದಲ್ಲಿ ನಡೆದ ಘಟನಾವಳಿಗಳೆಂದು ಇತಿಹಾಸಕಾರರು ಒಪ್ಪಿಕೊಂಡಿದ್ದಾರೆ. ರಾವಣನು ಸೀತೆಯನ್ನು ಲಂಕೆಗೆ ಅಪಹರಿಸಿಕೊಂಡು ಹೋದಾಗ, ಶ್ರೀರಾಮನು ಸೀತೆಯನ್ನು ಅರಸುತ್ತಾ ಹೋಗುವಾಗ ಕಿಷ್ಕಿಂದೆ ಪ್ರದೇಶದಲ್ಲಿ ನೆಲೆಸಿದ್ದನೆಂದು ಪುರಾಣಗಳು ಹೇಳುತ್ತವೆ. ಆಗ ಕಿಷ್ಕಿಂದೆಯ ರಾಜನಾಗಿ ವಾಲಿ ಆಡಳಿತ ನಡೆಸುತ್ತಿರುತ್ತಾನೆ. ದುಷ್ಟನಾಗಿದ್ದ ವಾಲಿಯು ತನ್ನ ಸ್ವಂತ ಅಣ್ಣನಾದ ಸುಗ್ರೀವನಿಂದ ರಾಜ್ಯ ಕಸಿದುಕೊಂಡು, ಅವನ ಹೆಂಡತಿಯನ್ನೇ ಅಪಹರಿಸಿ ದುಷ್ಕೃತ್ಯ ಎಸಗಿರುತ್ತಾನೆ. ಸುಗ್ರೀವನ ಮಂತ್ರಿಯಾಗಿ ಹನುಮಂತ ಕಾರ್ಯನಿರ್ವಹಿಸುತ್ತಿರುತ್ತಾನೆ. ವಾಲಿಯ ಈ ದುಷ್ಕೃತ್ಯವನ್ನು ಕಂಡ ರಾಮನು ಸುಗ್ರೀವನ ಮನವಿಯ ಮೇರೆಗೆ ವಾಲಿಯನ್ನು ಸಂಹಾರ ಮಾಡಿದನು. ರಾವಣನಿಂದ ಅಪಹರಣಕ್ಕೀಡಾದ ತನ್ನ ಹೆಂಡತಿ ಸೀತೆಯನ್ನು ಮರಳಿ ತರಲು ಸಹಕಾರ ನೀಡುವಂತೆ ರಾಮನು ಸುಗ್ರೀವ ಹಾಗೂ ಅವನ ಮಂತ್ರಿಯಾಗಿದ್ದ ಹನುಮಂತನಲ್ಲಿ ನಿವೇದಿಸುತ್ತಾನೆ. ವಾಲಿ–ಸುಗ್ರೀವರ ಕದನ ಮತ್ತು ಹನುಮಂತನ ವಿವರಗಳನ್ನು ಕಿಷ್ಕಿಂದೆ ಕಾಂಡದಲ್ಲಿ ಬಹಳ ವಿವರವಾಗಿ ವಾಲ್ಮೀಕಿ ರಾಮಾಯಣದಲ್ಲಿ ಕಾಣಬಹುದಾಗಿದೆ. ಈ ಕಾಂಡಗಳಲ್ಲಿ ಬರುವ ಬಹುತೇಕ ಪ್ರಸಂಗಗಳು ಈ ಕಿಷ್ಕಿಂದೆಯ ಪರಿಸರದಲ್ಲಿ ನಡೆದವು ಎಂದು ನಂಬಲಾಗಿದೆ. ವಿಶೇಷವಾಗಿ ಸುಂದರಕಾಂಡದಲ್ಲಿಯೂ ಸಹ ಸುಗ್ರೀವನ ಮಂತ್ರಿ ಹನುಮಂತನ ಬಹುತೇಕ ವಿವರಗಳನ್ನು ಕಾಣಬಹುದಾಗಿದೆ. ಹನುಮಂತನ ಜನನ, ಬಾಲ್ಯ ಮತ್ತು ಅವನ ತಾಯಿಯ ಎಲ್ಲಾ ವರ್ಣನೆಯನ್ನು ಈ ಕಾಂಡದಲ್ಲಿ ವಾಲ್ಮೀಕಿಯು ಚಿತ್ರಿಸಿದ್ದಾನೆ.

ರಾಮಾಯಣದ ಕಿಷ್ಕಿಂದಕಾಂಡ ಮತ್ತು ಸುಂದರಕಾಂಡದಲ್ಲಿ ನಡೆದ ಎಲ್ಲಾ ಪ್ರಸಂಗಗಳು ಹಂಪಿ, ಆನೆಗೊಂದಿ, ಕಿಷ್ಕಿಂದೆಯ ಪರಿಸರದಲ್ಲಿ ನಡೆದವುಗಳೆಂದು ಇತಿಹಾಸಕಾರರು ತಿಳಿಸಿದ್ದಾರೆ. ಆನೆಗೊಂದಿ ಪಕ್ಕದಲ್ಲಿರುವ ದುರ್ಗಾದೇವಿಯ ದೇವಸ್ಥಾನವಿರುವ ಬೆಟ್ಟವೇ ವಾಲಿಪರ್ವತ ಅಥವಾ ವಾಲಿಕಿಲ್ಲಾ ಎಂದು ಕರೆಯಲಾಗುತ್ತಿದೆ. ನವಬೃಂದಾವನ ಎದುರಿಗೆ ನೈಸರ್ಗಿಕವಾಗಿ ಕಲ್ಲು–ಬಂಡೆಗಳಿಂದ ಕಟ್ಟಿದ ಕೋಟೆಯನ್ನು ವಾಲಿ ಹೆಂಡತಿಯಾದ ತಾರಾ ಪರ್ವತ ಎಂದು ಕರೆಯಲಾಗುತ್ತಿದೆ. ವಾಲ್ಮೀಕಿ ರಾಮಾಯಣ ಕಥೆಯಲ್ಲಿ ಬರುವ ಕೆಲ ಸ್ಥಳಗಳು ಆನೆಗೊಂದಿ, ಹಂಪೆ ಹಾಗೂ ಕಿಷ್ಕಿಂದೆ ಪರಿಸರದಲ್ಲಿರುವ ಋಷ್ಯಮುಖ ಪರ್ವತ, ಮಾತಂಗ ಪರ್ವತ, ಸುಗ್ರೀವ ಗುಹೆ, ಸೀತೆಯ ಸೆರಗು, ವಾಲಿಯನ್ನು ದಹಿಸಿದ ಸ್ಥಳ ವಾಲಿಕಾಷ್ಟ ಹೀಗೆ

ಮುಂತಾದ ಸ್ಥಳಗಳು ರಾಮಾಯಣದಲ್ಲಿ ಉಲ್ಲೇಖಿತ ಪ್ರದೇಶಗಳೇ ಈ ಕಿಷ್ಕಿಂದೆಯ ಪ್ರದೇಶಗಳು ಎಂಬುದಕ್ಕೆ ಪುಷ್ಠಿ ಕೊಡುತ್ತಿವೆ.

1961ರಲ್ಲಿ ಕರ್ನಾಟಕದ ಪುರಾತತ್ವ ಸಂಶೋಧಕರಾದ ಡಾ.ಅ.ಸುಂದರವರು ಹಂಪಿ ಹಾಗೂ ಆನೆಗುಂದಿ ಪ್ರದೇಶದಲ್ಲಿ ಅಧ್ಯಯನ ನಡೆಸಿ; ಈ ಭಾಗವೇ ವಾಲ್ಮೀಕಿ ರಾಮಾಯಣದ ಕಿಷ್ಕಿಂದೆ ಎಂದು ಶೋಧಿಸಿದ್ದಾರೆ. ಅದರಲ್ಲಿ ಉಲ್ಲೇಖಿತ ಪಂಪಾಕ್ಷೇತ್ರ ಈ ಪರಿಸರದಲ್ಲಿದೆ. ರಾವಣನು ಸೀತೆಯನ್ನು ಅಪಹರಿಸಿಕೊಂಡು ಲಂಕೆಗೆ ಮರಳುವಾಗ ಈ ಪಂಪೆಯ ಮೂಲಕವೇ ಹೋದನೆಂದು ನಂಬಲಾಗಿದೆ. ಸ್ಕಂದ ಪುರಾಣದಲ್ಲಿ ಪಂಪಾದೇವಿಯ ಮಹಾತ್ಮೆಯನ್ನು ಉಲ್ಲೇಖಿಸಲಾಗಿದೆ. ತ್ರೇತ್ರಾಯುಗದಲ್ಲಿ ಪಂಪಾಂಬಿಕೆ ಮತ್ತು ವಿರುಪಾಕ್ಷರು ಇದೇ ಸ್ಥಳದಲ್ಲಿ ನೆಲೆಸಿದ್ದಾರೆಂದು ತಿಳಿದುಬರುತ್ತದೆ.

ಅಮೇರಿಕಾದ ಶಾಸನ ತಜ್ಞ ಫಿಲಿಫ್ ಲುಟೆನ್ ಡಾರ್ಫ ಅವರು ಹನುಮಂತ ಜನಿಸಿದ್ದು ಕೊಪ್ಪಳ ಜಿಲ್ಲೆಯ ಅಂಜನಾದ್ರಿ ಪ್ರದೇಶದಲ್ಲಿ ಎಂದು ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. 'The Life of a Texts' (ದ ಲೈಫ್ ಆಫ್ ಎ ಟೆಕ್ಸ್ಟ್) ಎಂಬ ಕೃತಿಯು **'Hanuman`s Tale'** (ಹನುಮಾನ್ಸ್ ಟೇಲ್) ಎಂಬ ಕೃತಿಗೆ ಮುನ್ನುಡಿಯಾಗಿದೆ. ಹನುಮಾನ್ಸ್ ಟೇಲ್ ಕೃತಿಯಲ್ಲಿ ಹನುಮಂತನು ಅಂಜನಾದ್ರಿಯಲ್ಲಿಯೇ ಜನಿಸಿದ್ದಾನೆಂಬ ವಾದವನ್ನು ಸಮರ್ಥಿಸಿಕೊಂಡಿದ್ದಾರೆ. ಫಿಲಿಫ್ ಲುಟೆನ್ ಡಾರ್ಫರವರ ಎರಡು ಕೃತಿಗಳು ಸಹ ಅಂಜನಾದ್ರಿಯ ಹನುಮಂತನ ವಿವರಗಳ ಮೇಲೆ ಬೆಳಕು ಚೆಲ್ಲುವ ಸಂಶೋಧನ ಕೃತಿಗಳೆಂದರೆ ತಪ್ಪಾಗಲಾರದು.

ವಾಲ್ಮೀಕಿ ರಾಮಾಯಣದಲ್ಲಿ ಉಲ್ಲೇಖಿತ ವಾನರರು ಕಿಷ್ಕಿಂದೆ ನಗರದವರು. ಅಂದು ಕಿಷ್ಕಿಂದೆ ವಾನರ ರಾಜ್ಯವಾಗಿತ್ತು. ಅದರಲ್ಲಿ ಹನುಮಂತನು ಒಬ್ಬ ಮಹಾನ್ ವೀರನಾಗಿದ್ದನು. ಕಿಷ್ಕಿಂದೆ ನಗರ ಮತ್ತು ಹನುಮಂತನ ವರ್ಣನೆಯನ್ನು ವಾಲ್ಮೀಕಿ ರಾಮಾಯಣದಲ್ಲಿ ಬಹಳಷ್ಟು ಕಾಣಬಹುದಾಗಿದೆ. ಈ ರೀತಿ ವಾನರ ರಾಜ್ಯವು ಬೇರೆಲ್ಲೂ ಕಾಣಲು ಸಾಧ್ಯವಿಲ್ಲ. ಈ ವಾಲ್ಮೀಕಿ ರಾಮಾಯಣದಲ್ಲಿ ಉಲ್ಲೇಖಿತವಾದ ಕಿಷ್ಕಿಂದೆಯ ಎಲ್ಲಾ ವರ್ಣನೆ ಕೊಪ್ಪಳ ಜಿಲ್ಲೆಯಲ್ಲಿರುವ ಕಿಷ್ಕಿಂದೆಗೆ ಬಹುತೇಕ ಹೋಲಿಕೆ ಆಗುತ್ತಿದೆ. ಹೀಗಾಗಿಯೇ ಈ ಕಿಷ್ಕಿಂದೆಯಲ್ಲಿಯೇ ಹನುಮಂತನು ಜನಿಸಿದನೆಂದು ಪುರಾಣಗಳು ಸಾರಿ–ಸಾರಿ ಹೇಳುತ್ತಿವೆ.

ವಿಜಯನಗರ ಅರಸರೂ ಕೂಡಾ ಕಿಷ್ಕಿಂದೆ ಈ ಪ್ರದೇಶವೇ ಹನುಮಂತನು ಜನಿಸಿದ ಸ್ಥಳವೆಂದು ನಂಬಿದ್ದರು. ಆದ್ದರಿಂದಲೇ ಶ್ರೀಕೃಷ್ಣದೇವರಾಯನು ಹಂಪೆಯಲ್ಲಿ ಹನುಮಂತನ ದೇವಾಲಯವನ್ನು ಕಟ್ಟಿಸಿದ್ದನು. ರಾಮಾಯಣದಲ್ಲಿ ಉಲ್ಲೇಖಿತವಾಗಿರುವ ಹನುಮಂತನ ಸಾಹಸಗಳನ್ನು ವಿಜಯನಗರ ಕಾಲದ ಶಿಲ್ಪಕಲೆಯಲ್ಲಿ ವಸ್ತುಗಳನ್ನಾಗಿ ಕೆತ್ತಲಾಗಿದೆ. ಹಂಪಿಯ ಪರಿಸರದಲ್ಲಿ ಹಲವಾರು ಶಾಸನಗಳು ಹನುಮಂತನ

ದೇವಾಲಯಗಳನ್ನು ಉಲ್ಲೇಖಿಸುತ್ತವೆ. ಶ್ರೀ ಕೃಷ್ಣದೇವರಾಯನ ಆಸ್ಥಾನದಲ್ಲಿ ಪ್ರಭಾವಶಾಲಿಯಾಗಿದ್ದ ಶ್ರೀಪಾದರಾಯರು ಹಂಪೆಯ ಚಕ್ರತೀರ್ಥದ ಬಳಿ ಯಂತ್ರೋದ್ಧಾರ ಹನುಮಂತನನ್ನು ಪ್ರತಿಷ್ಠಾಪಿಸಿದ್ದಾರೆ. ಆ ದೇವಾಲಯ ಇಂದಿಗೂ ಸಹ ಪೂಜೆಗೊಳ್ಳುತ್ತಿದೆ. ಅಲ್ಲದೇ ವ್ಯಾಸರಾಜರು ವಿಜಯನಗರ ರಾಜ್ಯದ ಉದ್ದಗಲ 732 ಹನುಮನ ಗುಡಿಗಳನ್ನು ಕಟ್ಟಿಸಿದರೆಂದು ಅನೇಕ ಕಾವ್ಯಗಳಿಂದ ತಿಳಿದು ಬರುತ್ತದೆ.

ವಾಲಿಯು ದುಂದುಬಿ ಎಂಬ ರಾಕ್ಷಸನ ತಲೆಯನ್ನು ಕತ್ತರಿಸಿ ಮಾತಂಗ ಪರ್ವತದ ಮೇಲೆ ಎಸೆದದ್ದಕ್ಕೆ, ಮಾತಂಗಮುನಿಯು ಕೋಪಗೊಂಡು ವಾಲಿಗೆ ಈ ಪರ್ವತಕ್ಕೆ ನಿರ್ಬಂಧ ಹೇರುತ್ತಾನೆ. ಈ ಕಾರಣದಿಂದ ವಾಲಿಯಿಂದ ಭಯಬೀತರಾಗಿದ್ದ ಸುಗ್ರೀವ ಮತ್ತು ಹನುಮಂತನು ಈ ಪರ್ವತದಲ್ಲಿ ಅಡಗಿಕೊಂಡಿದ್ದರೆಂದು ನಂಬಲಾಗಿದೆ. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುವಾಗ ತನ್ನ ಆಭರಣಗಳನ್ನು ಈ ಪರ್ವತದ ಮೇಲೆ ಬೀಳಿಸಿದಳಂತೆ. ಅವುಗಳನ್ನು ವಾನರರು ರಾಮನಿಗೆ ಮುಟ್ಟಿಸಿ ಮಾಹಿತಿ ಕೊಟ್ಟರೆಂದು ಐತಿಹ್ಯವಿದೆ. ರಾವಣನು ಸೀತೆಯ ಅಪಹರಣಕ್ಕೆ ಮೊದಲು ಅವಳನ್ನು ದರದರನೆ ಎಳೆದುಕೊಂಡು ಹೋದಾಗ ಮೂಡಿದ ಅವಳ ಸೆರಗಿನ ಗುರುತೆಂದು ಇಂದಿಗೂ ಸಹ ಹಂಪೆಯ ಪರಿಸರದಲ್ಲಿ ಕಾಣಬಹುದಾಗಿದೆ. ಮಾತಂಗ ಪರ್ವತವನ್ನು ಕುರಿತು ಕ್ರಿ.ಶ. ಸುಮಾರು 13ನೇ ಶತಮಾನದಲ್ಲಿ ಹರಿಹರ ಮತ್ತು ಲಕ್ಕಣ್ಣ ದಂಡೇಶ ಕವಿಗಳು ಹಾಡಿ ಹೊಗಳಿದ್ದಾರೆ. ಅಲ್ಲದೇ ಹಂಪೆಯ ಪರಿಸರದಲ್ಲಿನ ಅನೇಕ ಶಾಸನಗಳಲ್ಲಿ ಮಾತಂಗ ಪರ್ವತದ ಬಗ್ಗೆ ಉಲ್ಲೇಖಗಳನ್ನು ಕಾಣಬಹುದಾಗಿದೆ.

ಶ್ರೀ ಮಹರ್ಷಿ ವಾಲ್ಮೀಕಿಯಿಂದ ರಚಿತವಾದ ರಾಮಾಯಣದಲ್ಲಿ ಕಿಷ್ಕಿಂದೆಯನ್ನು ಕುರಿತು ಒಂದು ಕಾಂಡವೇ ರಚಿತವಾಗಿರುವುದು ನಿರ್ವಿವಾದ. ರಾಮಾಯಣದಲ್ಲಿ ಉಲ್ಲೇಖಿತ ಕಿಷ್ಕಿಂದೆಯ ಪರಿಸರವು ಕೊಪ್ಪಳ ಜಿಲ್ಲೆಯಲ್ಲಿ ಇರುವ ಕಿಷ್ಕಿಂದೆಯ ಪರಿಸರಕ್ಕೆ ಹೋಲಿಕೆಯಾಗುತ್ತದೆ. ಇದನ್ನು ಈ ಪರಿಸರದಲ್ಲಿ ಲಭ್ಯವಾದ ಹಲವಾರು ಶಾಸನಗಳಿಂದ ತಾಳೆ ಮಾಡಬಹುದು. ಕ್ರಿ.ಶ. 1059ರ ವಿಪ್ರಶಾಸನದಲ್ಲಿ ಚಾಲುಕ್ಯರ ದೊರೆ ಒಂದನೇ ಸೋಮೇಶ್ವರನು ಬೆಣ್ಣೆಕಲ್ಲು ನೆಲೆವೀಡಿನಲ್ಲಿ ಇದ್ದಾಗ ಶಿವದೇವಾಲಯಕ್ಕೆ ದಾನ ನೀಡುತ್ತಾನೆ. ಚಳೇಶ್ವರ ದೇವರಿಗೆ **'ಚಕ್ರೇಶ್ವರ ವಿಶಾನ'** ನಿಮಿತ್ಯವಾಗಿ ಮುಸುಂದೆ ಎಂಬ ಗ್ರಾಮವನ್ನು ದಾನ ನೀಡುತ್ತಾನೆ. ಪ್ರಸ್ತುತ ಈ ಶಾಸನದಲ್ಲಿ ವಿಪ್ರನಾರಾಯಣ ಸ್ಥಳದ ವಿವರವಾದ ವರ್ಣನೆ ಇದ್ದು; ತುಂಗಭದ್ರೆಯಲ್ಲಿನ ಕಿಷ್ಕಿಂದ ಪರ್ವತದಲ್ಲಿತ್ತೆಂದು ಉಲ್ಲೇಖಿಸುತ್ತದೆ. ಅಲ್ಲದೇ ಈ ಪರ್ವತದಲ್ಲಿ ಯತಿಗಳು ವಾಸಿಸುತ್ತಿದ್ದರೆಂದೂ ಕೂಡಾ ಪ್ರಸ್ತುತ ಶಾಸನ ಉಲ್ಲೇಖಿಸುತ್ತದೆ. ಆದರೆ ಆ ಯತಿಗಳು ಯಾರು ಇರಬಹುದೆಂಬ ಬಗ್ಗೆ ಶಾಸನದಲ್ಲಿ ಉಲ್ಲೇಖವಿಲ್ಲ. ಆದರೆ ಬೆಳಗಾವಿ ಜಿಲ್ಲೆಯ ಸಿರಸಂಗಿ ಗ್ರಾಮದಲ್ಲಿ ದೊರೆತ ಕ್ರಿ.ಶ. 1148ರ ಶಾಸನದಲ್ಲಿ ಋಷ್ಯಶೃಂಗನ ಆಶ್ರಮವು ಕುಂತಳ ದೇಶದ

ಬೆಳಗೊಳನಾಡಿನ ಕಿಷ್ಕಿಂದ ಪರ್ವತದ ಬಳಿ ಇತ್ತೆಂದು ಹೇಳಲಾಗಿದೆ. ಈ ಪರ್ವತದ ಪ್ರಸಿದ್ಧಿ ವರ್ಣಿಸುತ್ತಾ ಇಲ್ಲಿ ವಾಲಿ, ಮರುತ್ಸ, ಅಂಗದ, ದಿನೇಶ, ಮಾತಂಗ, ಹಂಸ, ಕಪಿಲ, ಶಾರ್ಗ, ಅಗಸ್ತ್ಯ, ವಿಭಾಂಡಕನ ಪುತ್ರ ಋಷ್ಯಶೃಂಗ ಮೊದಲಾದ ಯತಿಗಳಿಗೆ ಆಶ್ರಯತಾಣವಾಗಿತ್ತೆಂದು ತಿಳಿದುಬರುತ್ತದೆ.

ಕ್ರಿ.ಶ 1088ರ ಶಾಸನದಲ್ಲಿ ಆರನೇ ವಿಕ್ರಮಾದಿತ್ಯನು ಕಲ್ಯಾಣದ ನೆಲೆವೀಡುವಿನಿಂದ ಆಳುತ್ತಿದ್ದಾಗ ಭಟ್ಟೋಪಾಧ್ಯಾಯನ ಮಗ ಚೌವೇದಿಭಟ್ಟನು ಹುಲಿಗೆ ಎಂಬ ಪುರದಲ್ಲಿ ತುಂಗಭದ್ರ ನದಿಯಿಂದ ಸೇಳುನಾಲೆಯೊಂದನ್ನು ಕಟ್ಟಿಸಿದಂತೆ ತಿಳಿಸುತ್ತದೆ. ಈ ಊರಿನ ಪೂರ್ವಕ್ಕೆ ರಿಷ್ಯಮೂಕಾಚಲ, ದಕ್ಷಿಣಕ್ಕೆ ಗಂಧಮಾದನ, ಪಶ್ಚಿಮಕ್ಕೆ ತ್ರಿಕೂಟ, ಉತ್ತರಕ್ಕೆ ಕಿಷ್ಕಿಂದ ಪರ್ವತಗಳಿದ್ದವೆಂದು ಉಲ್ಲೇಖಿಸಲಾಗಿದೆ. ಚೌವೇದಿಭಟ್ಟನ ಹೆಂಡತಿ ಮಂಚಿಕಬ್ಬೆಯು "ನೀತಿಯೊಳಾವರುಂಧತಿ ಪತಿವ್ರತದೊಳ್ನೆಗಳ್ದಿ ಸೀತೆಗಂ ಧಾತ್ರಿಯೋಳಗ್ಗಳಂ ಗುಣ ದೊಳೆಂಬನಿತುಂ ಪರಮಾರ್ತ್ಥವಾ ದ್ವಿಜಜ್ಯೋತಿ ಯೆನಿಪ್ಪನೊರೊಡೆಯ ಸೋಮನ ಪತ್ನಿಯೆ ಮಂಚಿಕಬ್ಬೆಯಂ ಭೂತಳದೊಳು ಪೆಳಂ ಕಿಳುಕುಳಂ ಪೊಗಳಲು ದ್ವಿಸಹಶ್ರ ಜಿಹ್ವಮೇ" ಎಂದು ಪ್ರಸ್ತುತ ಶಾಸನದಲ್ಲಿ ವರ್ಣಿಸಲಾಗಿದೆ. ಮಂಚಿಕಬ್ಬೆಯನ್ನು ಸೀತೆಯಂತೆ ಪತಿವ್ರತೆ ಎಂದು ವರ್ಣಿಸಿರುವುದರಿಂದ ರಾಮಾಯಣ ಮತ್ತು ಕೊಪ್ಪಳ ಪ್ರದೇಶದ ಕಿಷ್ಕಿಂದೆಯ ನಾಡಿನ ಸಂಬಂಧವನ್ನು ಬೆಸೆಯುತ್ತದೆ.

ಆಂಜನೇಯನು ಅಂಜನಾದೇವಿ ಮತ್ತು ವಾಯುದೇವನಿಂದ ಹುಟ್ಟಿದವನು. ವಾಯುದೇವನಿಗೆ ಕೇಸರಿ ಎಂತಲೂ ಮತ್ತು ಅಂಜನಾದೇವಿಗೆ ಅಂಜನಾದ್ರಿ ಎಂತಲೂ ಕರೆಯುತ್ತಾರೆ. ಹೀಗಾಗಿ ಹನುಮಂತನನ್ನು ವಾಯುಪುತ್ರ, ಕೇಸರಿನಂದನ, ಅಂಜನಿಪುತ್ರ, ಅಂಜನಾದ್ರಿ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿದೆ. ಆಂಜನೇಯನು ಹುಟ್ಟಿದ ತಕ್ಷಣವೇ ಪವಾಡಗಳನ್ನು ಮಾಡಿದನೆಂದು ಪುರಾಣಗಳು ಹೇಳುತ್ತವೆ. ಆಂಜನೇಯನು ಬಾಲಕನಿದ್ದಾಗ ಸೂರ್ಯನನ್ನು ನೋಡಿ ಆತನನ್ನು ಹಣ್ಣೆಂದು ಭ್ರಮಿಸಿ ನುಂಗಿಬಿಡುತ್ತಾನೆ. ಆಗ ಮೂರು ಲೋಕಗಳಿಗೆ ಕತ್ತಲು ಆವರಿಸುತ್ತದೆ. ಎಲ್ಲಾ ದೇವತೆಗಳು ಸೂರ್ಯನನ್ನು ಉಳಿಸಿ; ಲೋಕಗಳಿಗೆ ಬೆಳಕು ನೀಡುವಂತೆ ಇಂದ್ರನಲ್ಲಿ ಮೊರೆಯಿಡುತ್ತಾರೆ. ಆಗ ಇಂದ್ರನು ತನ್ನ ವಜ್ರಾಯುಧವನ್ನು ಹನುಮಂತನ ಮುಖದ ಮೇಲೆ ಪ್ರಯೋಗ ಮಾಡುತ್ತಾನೆ. ಆಗ ಹನುಮಂತನು ಮೂರ್ಚೆಗೊಂಡು ನೆಲಕ್ಕೆ ಬೀಳುತ್ತಾನೆ. ಆಗ ಅಲ್ಲಿಗೆ ಬಂದ ಹನುಮಂತನ ತಂದೆ ವಾಯುದೇವನು ಕೋಪಗೊಂಡು ಗಾಳಿಯನ್ನು ನಿಲ್ಲಿಸುತ್ತಾನೆ. ಬೆಳಕು ಮತ್ತು ಗಾಳಿಯಿಲ್ಲದೇ ಎಲ್ಲಾ ದೇವತೆಗಳು ಗಾಬರಿಗೊಂಡು ಬ್ರಹ್ಮನಲ್ಲಿ ಮೊರೆಯಿಡುತ್ತಾರೆ. ಆಗ ಬ್ರಹ್ಮ ಮತ್ತು ನಾರದರ ಸಲಹೆಯಂತೆ ನಾರಾಯಣನನ್ನು ಕರೆದು ಹನುಮಂತನನ್ನು ಮೂರ್ಚೆಯಿಂದ ಎಚ್ಚರಗೊಳ್ಳುವಂತೆ

ಮಾಡುತ್ತಾರೆ. ಆಗ ಬೆಳಕು ಮತ್ತು ಗಾಳಿಯು ಸಂಚಾರವಾಗಿ ಲೋಕ ಬೆಳಗುವಂತಾಗುತ್ತದೆ. ಇಂದಿಗೂ ಸಹ ಅಂಜನಾ ಪರ್ವತದ ಮೇಲೆ ಸೂರ್ಯನು ಮುಳುಗುವ ಪ್ರಸಂಗವು ಮನಮೋಹಕವಾಗಿ ಕಂಡುಬರುವುದರಿಂದ ಆಂಜನೇಯನು ಸೂರ್ಯನನ್ನು ನುಂಗುವ ಸಮಯವೆಂದು ನಂಬಲಾಗಿದೆ. ಸಂಸ್ಕೃತದಲ್ಲಿ 'ಹನುಮಾನ್' ಎಂಬ ಪದಕ್ಕೆ ಅರ್ಥವನ್ನು ಕೊಡಲಾಗಿದೆ. 'ಹನು' ಎಂದರೆ ದವಡೆ 'ಮಾನ್' ಎಂದರೆ ವಿರೂಪಗೊಂಡವನು ಎಂದು ಅರ್ಥ ಬರುತ್ತದೆ. ಸೂರ್ಯನನ್ನು ನುಂಗಿದಾಗ ಇಂದ್ರದೇವನು ಹನುಮಂತನ ಮುಖದ ಮೇಲೆ ವಜ್ರಾಯುಧದಿಂದ ಪ್ರಯೋಗ ಮಾಡಿಸಿಕೊಂಡಿರುವುದರಿಂದ ದವಡೆ ವಿರೂಪಗೊಂಡವ ಎಂದು ತಿಳಿದು ಬರುತ್ತದೆ.

ಗೌತಮಮುನಿ ಮತ್ತು ಅಹಲ್ಯಳಿಗೆ ಮೂರು ಜನ ಮಕ್ಕಳು. ಅದರಲ್ಲಿ ಇಬ್ಬರು ಗಂಡು ಮಕ್ಕಳು ಮತ್ತು ಒಂದು ಹೆಣ್ಣು ಮಗಳು. ಆ ಹೆಣ್ಣು ಮಗಳೇ ಹನುಮಂತನ ತಾಯಿ ಅಂಜನಾದೇವಿ. ಗೌತಮಮುನಿಯು ಮಗಳಾದ ಅಂಜನಾದೇವಿಯು ವ್ಯಕ್ತಪಡಿಸಿದ ಅನುಮಾನದಂತೆ ಸೋಮಗಿರಿಯ ಸೋಮತೀರ್ಥದಲ್ಲಿ ತನ್ನ ಇಬ್ಬರು ಗಂಡು ಮಕ್ಕಳನ್ನು ಮುಳುಗಿಸಿ ಏಳಿಸುತ್ತಾನೆ. ಆಗ ಅವರು ತನಗೆ ಹುಟ್ಟಿದ ಮಕ್ಕಳಾಗಿರದಿರುವುದರಿಂದ ಅವರುಗಳ ಮುಖ ವಿರೂಪವಾಗುತ್ತದೆ. ಹಾಗಾಗಿ ಅವರು ಇಂದ್ರ ಮತ್ತು ಸೂರ್ಯನಿಂದ ಹುಟ್ಟಿದವರೆಂದು ತನ್ನ ದಿವ್ಯಜ್ಞಾನದಿಂದ ಅರಿತ ಗೌತಮಮುನಿ ತನ್ನ ಹೆಂಡತಿ ಅಹಲ್ಯಗೆ ಕಲ್ಲಾಗುವಂತೆ ಶಾಪ ನೀಡಿ ತಪಸ್ಸಿಗೆ ತೆರಳುತ್ತಾನೆ. ಅಜ್ಞಾನದಿಂದ ಮಾಡಿದ ತಪ್ಪನ್ನು ಪ್ರಕಟಪಡಿಸಿದ ಮಗಳಾದ ಅಂಜನಾದೇವಿಗೆ ತಾಯಿ ಅಹಲ್ಯಳು ಕಪಿರೂಪವನ್ನು ಹೊಂದು ಎಂದು ಶಪಿಸುತ್ತಾಳೆ. ಅದರಂತೆ ಅಂಜನಾದೇವಿಯ ಮುಖ ವಿರೂಪವಾಗಿ ಕಪಿರೂಪವಾಗುತ್ತದೆ. ಹೀಗಾಗಿ ಗೌತಮಮುನಿಯ ಇಬ್ಬರು ಗಂಡು ಮಕ್ಕಳಾದ ವಾಲಿ, ಸುಗ್ರೀವ ಮತ್ತು ಮಗಳು ಅಂಜನಾದೇವಿ ಕಪಿರೂಪವಾಗಿ ಸೋಮಗಿರಿಯಲ್ಲಿ ವಾಸಿಸುತ್ತಾರೆ. ಆ ಸೋಮಗಿರಿಯೇ ಇಂದಿನ ಶಿವಪುರದ ಹತ್ತಿರವಿರುವ ಬೆಟ್ಟವೆಂದು ನಂಬಲಾಗಿದೆ. ಹನುಮಂತನ ತಾಯಿ ಅಂಜನಾದೇವಿಯ ಹೆಸರಿನ ಮೇಲೆ ಕಿಷ್ಕಿಂದೆ ಪ್ರದೇಶದಲ್ಲಿ ಅಂಜನಾಹಳ್ಳಿ ಮತ್ತು ಹನುಮಂತನ ಹೆಸರಿನ ಮೇಲೆ ಹನುಮನಹಳ್ಳಿ ಗ್ರಾಮಗಳನ್ನು ಇಂದಿಗೂ ಸಹ ಕಾಣಬಹುದಾಗಿದೆ. ಮತ್ತು ವಿಶೇಷವಾಗಿ ಶಿವಪುರದಲ್ಲಿ ಹನುಮಂತನ ತಾಯಿ ಅಂಜನಾದೇವಿಯ ದೇವಸ್ಥಾನವನ್ನು ನಿರ್ಮಿಸಲಾಗಿದೆ. ಇದು ಕರ್ನಾಟಕದಲ್ಲಿ ನಿರ್ಮಾಣಗೊಂಡ ಏಕೈಕ ದೇವಾಲಯ ಎಂದು ಹೇಳಲಾಗುತ್ತಿದೆ. ಪ್ರತಿ ವರ್ಷ ಈ ಅಂಜನಾದೇವಿಯ ಜಾತ್ರೆ ಮತ್ತು ಉತ್ಸವಗಳನ್ನು ನಡೆಸಲಾಗುತ್ತದೆ.

ಹನುಮಂತನು ಶ್ರೀರಾಮನಿಗೂ ಮತ್ತು ಸುಗ್ರೀವನಿಗೆ ಗೆಳೆತನ ಮಾಡಿಸಿದವನು, ವಾಲಿಯ ವಧೆಯ ನಂತರ ಅವನ ಹೆಂಡತಿ ತಾರಾ ಮತ್ತು ಮಗ ಅಂಗಧನು

ಶೋಕದಲ್ಲಿದ್ದಾಗ ತಾಯಿ-ಮಗನಿಗೆ ಸಾಂತ್ವನ ಹೇಳಿದವನು, ರಾವಣನಿಂದ ಅಪಹರಣಕ್ಕೊಳಗಾದ ಸೀತೆಯನ್ನು ಮರಳಿ ತರಲು ಲಂಕೆಯವರೆಗೆ ಸೇತುವೆಯನ್ನು ನಿರ್ಮಿಸಿ ಆ ಯುದ್ಧದಲ್ಲಿ ರಾಮನಿಗೆ ಸಹಾಯ ಮಾಡಿದವನು, ಲಕ್ಷ್ಮಣನು ಯುದ್ಧದಲ್ಲಿ ಮೂರ್ಚೆ ಹೋದಾಗ ಸಂಜೀವಿನಿಗಾಗಿ ಪರ್ವತವನ್ನೇ ಹೊತ್ತು ತಂದು ಲಕ್ಷ್ಮಣನಿಗೆ ಮರುಜೀವ ಕೊಟ್ಟವನು, ಸೀತೆ ಮರಳಿ ವಾಲ್ಮೀಕಿಯ ಆಶ್ರಮಕ್ಕೆ ಹೋದಾಗ ಮಾರುವೇಶದಲ್ಲಿ ಸೀತೆಗೆ ಸಹಾಯ ಮಾಡಿದವನು. ಹೀಗೆ ಇಡೀ ರಾಮಾಯಣದಲ್ಲಿಯೇ ನಾಯಕನಾಗಿ ಮೆರೆದವನು ಹನುಮಂತನೆಂದರೆ ಅತೀಶಯೋಕ್ತಿಯಾಗಲಾರದು. ಏಳು ಜನ ಚಿರಂಜೀವಿಗಳಲ್ಲಿ ಆಂಜನೇಯನು ಒಬ್ಬನಾಗಿದ್ದಾನೆ. ಹೀಗಾಗಿ ಆಂಜನೇಯನು ಇನ್ನೂ ಬದುಕಿದ್ದಾನೆಂದು ನಂಬಲಾಗಿದೆ. ಕರ್ನಾಟಕದಲ್ಲಿ ಹನುಮಂತನ ದೇವಾಲಯಗಳಿಲ್ಲದ ಊರುಗಳೇ ಇಲ್ಲ ಎನ್ನುವಷ್ಟು ಭಕ್ತರನ್ನು ಕಾಣಬಹುದಾಗಿದೆ.

**ಆಕರ ಗ್ರಂಥಗಳು :-**


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ-1999
2) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ-2020
3) ಫಿಲಿಫ್ ಲುಟೆನ್ ಡಾರ್ಫ 'The Life of a Texts'
4) ಡಾ. ಶರಣಬಸಪ್ಪ ಕೋಲ್ಕಾರ, ಕೊಪ್ಪಳ-ಹಂಪಿ ಪ್ರದೇಶ ಚರಿತ್ರೆ ಮತ್ತು ಪುರಾತತ್ವ, ಮಣಿ ಪ್ರಕಾಶನ, ಮೈಸೂರು-2021
5) ಡಾ. ಶರಣಬಸಪ್ಪ ಕೋಲ್ಕಾರ, ಶಿಲಾಯುಗದ ಗವಿಚಿತ್ರಗಳು, ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು, ಗುಲ್ಬರ್ಗಾ-2010
6) ಡಾ. ಪುರುಷೋತ್ತಮ ಬಿಳಿಮಲೆ, ಹುಲಿಗೆಮ್ಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ-1999
7) ವಾಲ್ಮೀಕಿ-ರಾಮಾಯಣ (ಅಂತರ್ಜಾಲ ಕೃಪೆ)


* * * * *

## ಹಿರೇಹಳ್ಳವೊ?...ಓಜಿನಹಳ್ಳವೊ?...ಕುಶನದಿಯೊ?

ಈ ಲೇಖನ ಬರೆಯಲು ಒಂದು ಕಾರಣವಿದೆ. ಮೊನ್ನೆ ಎರಡು ದಿನ ಸತತವಾಗಿ ಸುರಿದ ಮಳೆಯಿಂದಾಗಿ ರಾಜ್ಯದ ಬಹುತೇಕ ಹಳ್ಳ-ಕೊಳ್ಳಗಳು ತುಂಬಿ ಹರಿದವು. ಅದರಂತೆ ಕೊಪ್ಪಳದ ಬಹುತೇಕ ಹಳ್ಳಗಳೂ ತುಂಬಿ ಹರಿದು ಸಾರ್ವಜನಿಕ ಬದುಕಿಗೆ ತೊಂದರೆಯನ್ನುಂಟು ಮಾಡಿದವು. ಅದರಲ್ಲಿ ಜಿಲ್ಲೆಯಲ್ಲಿ ತುಂಬಿ ಹರಿದ ಹಳ್ಳಗಳಲ್ಲಿ ಕಿನ್ನಾಳದ ಹಿರೇಹಳ್ಳವೂ ಒಂದಾಗಿತ್ತು. ಹಿರೇಹಳ್ಳ ತುಂಬಿ ಅಣೆಕಟ್ಟಿನಿಂದ ನೀರು ಹೊರಗಡೆ ಬಿಟ್ಟಾಗ ಹಳ್ಳದ ಸರಹದ್ದಿನ ಹಳ್ಳಿಗಳ ಸೇತುವೆಗಳು ತುಂಬಿ, ಜನ ಓಡಾಡುವ ರಸ್ತೆಗಳ ಸಂಪರ್ಕ ಕಡಿದುಕೊಂಡಾಗ ಹಿರಿಯ ಪತ್ರಕರ್ತರಾದ ಶ್ರೀ ಜಿ.ಎಸ್.ಗೋನಾಳರವರು ಸಾಮಾಜಿಕ ಜಾಲತಾಣ ಮತ್ತು ಪತ್ರಿಕೆಗಳ ಮೂಲಕ **'ಕುಶನದಿ'** ಹರಿಯುವ ಸರಹದ್ದುಗಳಲ್ಲಿ ಸರಿಯಾದ ರೀತಿಯಲ್ಲಿ ಸೇತುವೆಗಳನ್ನು ನಿರ್ಮಿಸಬೇಕೆಂದು ಒತ್ತಾಯ ಮಾಡಿದ್ದು ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಆಗ ನನಗೆ **'ಕುಶನದಿ'** ಎಂಬ ಹೆಸರು ಗಮನಿಸಿದಾಗ ಹೌದು ಇದು ಹಿರೇಹಳ್ಳವೊ? ಓಜಿನಹಳ್ಳವೊ? ಕುಶನದಿಯೊ? ಎಂಬ ಬಗ್ಗೆ ಅಧ್ಯಯನಕ್ಕೆ ಮತ್ತಷ್ಟು ಪುಷ್ಠಿಕೊಟ್ಟಿತು. ಎಂದೋ ಓದಿದ **'ಕುಶನದಿ'**ಯು ನನ್ನ ಸ್ಮೃತಿಪಟಲದಲ್ಲಿ ಮತ್ತೊಮ್ಮೆ ನೆನಪಿಸಿತು.

ಈ ಹಿರೇಹಳ್ಳದ ಹರಿವು ಧಾರವಾಡ ಜಿಲ್ಲೆಯ ಬೆಟ್ಟಗಳಲ್ಲಿ ಹುಟ್ಟಿಕೊಂಡು, ಗದಗ, ಗಜೇಂದ್ರಗಡ ಮತ್ತು ಕೊಪ್ಪಳ ಪ್ರದೇಶಗಳಲ್ಲಿ ಹರಿದು ಬಂದು ಕಿನ್ನಾಳದ ಹತ್ತಿರವಿರುವ ಮುದ್ಲಾಪೂರ ಗ್ರಾಮದಲ್ಲಿ ನಿರ್ಮಿಸಿದ ಅಣೆಕಟ್ಟಿನಲ್ಲಿ ನೀರು ಸಂಗ್ರಹವಾಗುತ್ತದೆ. ಅಣೆಕಟ್ಟಿನಲ್ಲಿ ತುಂಬಿದ ನಂತರ ಅಲ್ಲಿಂದ ಹೆಚ್ಚುವರಿ ನೀರನ್ನು ಹೊರಬಿಟ್ಟಾಗ ಇದು ಮುಂದೆ ಸಾಗಿ ಸುಮಾರು 24 ಕಿ.ಮೀ ದೂರದಲ್ಲಿರುವ ತುಂಗಭದ್ರಾ ಜಲಾಶಯವನ್ನು ಸೇರುತ್ತದೆ. ವೀರಾಪೂರ ಹಳ್ಳ ಮತ್ತು ಹಿರೇಹಳ್ಳ ಇವೆರಡೂ ಹಳ್ಳಗಳಿಗೆ ಈ ಹಿರೇಹಳ್ಳ ಯೋಜನೆಯನ್ನು ನಿರ್ಮಿಸಲಾಗಿದೆ. ಕೊಪ್ಪಳ ತಾಲೂಕಿನಲ್ಲಿ ಕಡಿಮೆ ಮಳೆಯಾಗುತ್ತಿದ್ದು, ಅದರ ಪರಿಣಾಮವಾಗಿ ಬೆಳೆಗಳ ಇಳುವರಿ ಕಡಿಮೆಯಾಗುತ್ತದೆ. ಈ ಪ್ರದೇಶದಲ್ಲಿ ಹರಿಯುವ ಸಾಕಷ್ಟು ತೊರೆಗಳು ಹರಿದು ವ್ಯರ್ಥವಾಗಿ ತುಂಗಭದ್ರಾ ಜಲಾಶಯಕ್ಕೆ ಸೇರುತ್ತಿತ್ತು. ಇದನ್ನು ಮನಗಂಡು ಸರ್ಕಾರ, ಮಳೆ ನೀರು ಅವಲಂಬಿತ ಕೃಷಿ ಭೂಮಿಯನ್ನು ನೀರಾವರಿ ಕೃಷಿ ಭೂಮಿ ಮಾಡಲು ಅನುಕೂಲ ಕಲ್ಪಿಸುವ ಉದ್ಧೇಶದಿಂದ ಕಿನ್ನಾಳ ಗ್ರಾಮದಿಂದ ಸುಮಾರು ಮೂರು-ನಾಲ್ಕು ಕಿ.ಮೀ ಅಂತರದಲ್ಲಿ ಹಿರೇಹಳ್ಳ ಯೋಜನೆಯನ್ನು ಕೈಗೆತ್ತಿಕೊಡಿತು.

ಈ ಯೋಜನೆಯು ಸುಮಾರು 10000 ಹೆಕ್ಟೇರ್ ಪ್ರದೇಶವನ್ನು ನೀರಾವರಿ ಪ್ರದೇಶವನ್ನಾಗಿ ಎರಡು ಹಳ್ಳಗಳಾದ ವೀರಾಪೂರ ಹಳ್ಳ ಮತ್ತು ಹಿರೇಹಳ್ಳಗಳು

ಸಂಗಮವಾಗುವ ಸ್ಥಳದಲ್ಲಿ ಹಿರೇಹಳ್ಳ ಅಣೆಕಟ್ಟನ್ನು ನಿರ್ಮಾಣ ಮಾಡಲಾಗಿದೆ. ಹಿರೇಹಳ್ಳ ಅಣೆಕಟ್ಟು 3.6 ಕಿ.ಮೀ ಅಗಲದ ಮಣ್ಣು ಮತ್ತು ಕಲ್ಲಿನ ಹೊದಿಕೆಯಿಂದ 15.00 ಮೀ ಎತ್ತರವನ್ನು ಹೊಂದಿದೆ. ಈ ಅಣೆಕಟ್ಟಿನಲ್ಲಿ ಸುಮಾರು 1.69 ಟಿಎಂಸಿ ಸಂಗ್ರಹವಾಗುವ ನೀರನ್ನು ಕಾಲುವೆಗಳ ಮೂಲಕ ಈ ಭಾಗದ ರೈತರ ಜಮೀನುಗಳಿಗೆ ಹರಿಸುವ ವ್ಯವಸ್ಥೆ ಕಲ್ಪಿಸಲಾಗಿದೆ. ಪ್ರಸ್ತುತ ಈ ಅಣೆಕಟ್ಟು ಸುಮಾರು 10000 ಹೆಕ್ಟೇರ್ ಭೂಮಿಯನ್ನು ನೀರಾವರಿ ಪ್ರದೇಶವನ್ನಾಗಿ ಪರಿವರ್ತನೆ ಮಾಡಿದೆ. ಈ ಅಣೆಕಟ್ಟು ಸುಮಾರು 29 ಕಿ.ಮೀ ಉದ್ದದ ಬಲದಂಡೆ ಹಾಗೂ ಸುಮಾರು 27 ಕಿ.ಮೀ ಉದ್ದದ ಎಡದಂಡೆ ಹರಿವಿನ ಕಾಲುವೆಗಳನ್ನು ಹೊಂದಿದೆ. ಇದು 2001ರಲ್ಲಿ ನಿರ್ಮಾಣವಾದ ಹಿರೇಹಳ್ಳ ಯೋಜನೆ. ತುಂಗಭದ್ರಾ ನದಿಗೆ ಹೆಚ್ಚು ಹೂಳು ಹರಿದು ಬರುತ್ತಿರುವುದರಿಂದ ಇಲ್ಲಿಯೇ ಹೂಳನ್ನು ತಡೆಯುವ ಯೋಜನೆಯೂ ಇದಾಗಿತ್ತು. ಇಂದು ಇದರ ಲಾಭವನ್ನು ಅನೇಕ ರೈತರು ಪಡೆಯುತ್ತಿರುವುದು ಸಂತಸದ ಸಂಗತಿ.

ಸುತ್ತಲ ಪ್ರದೇಶಗಳಲ್ಲಿ ಹರಿಯುವ ಹಳ್ಳಗಳಲ್ಲೇ ಇದು ಬಹುದೊಡ್ಡ ಹಳ್ಳ. ಆದ್ದರಿಂದ ಇದಕ್ಕೆ 'ಹಿರೇಹಳ್ಳ' ಎಂದು ಕರೆಯುತ್ತಿರಬೇಕು. ಈ ಹಳ್ಳದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಉಸುಕು ಹರಿದುಬರುತ್ತದೆ. ಹೀಗೆ ಹರಿದು ಬಂದ ಆಪಾರ ಪ್ರಮಾಣದ ಉಸುಕು ತುಂಗಭದ್ರಾ ಅಣೆಕಟ್ಟನ್ನು ಸೇರುತ್ತಿತ್ತು. ಹೀಗಾಗಿಯೇ ಈ ಹಿರೇಹಳ್ಳಕ್ಕೆ ಅಣೆಕಟ್ಟನ್ನು ನಿರ್ಮಿಸಲಾಯಿತು. ಇಂದಿಗೂ ಸಹ ಅಪಾರ ಪ್ರಮಾಣದಲ್ಲಿ ಉಸುಕು ಹರಿದುಬರುತ್ತಿದೆ. ಈ ಹಿರೇಹಳ್ಳದ ಉಸುಕು ಮನೆ ನಿರ್ಮಿಸಲು ಬಹಳ ಯೋಗ್ಯವಾಗಿದೆ. ಆದ್ದರಿಂದ ಈ ಹಳ್ಳದ ಉಸುಕಿಗೆ ಹೆಚ್ಚಿನ ಬೇಡಿಕೆ ಇದೆ. ಇದನ್ನು ಮನಗಂಡ ಸರಕಾರ ಟೆಂಡರ್ ಮತ್ತು ಹರಾಜುಗಳ ಮೂಲಕ ಈ ಹಳ್ಳದ ಉಸುಕನ್ನು ಮಾರಾಟ ಮಾಡಲಾಗುತ್ತಿದೆ. ಹೀಗಾಗಿ ಇದಕ್ಕೆ 'ಉಸುಕಿನಹಳ್ಳ' ಎಂತಲೂ ಕರೆಯಲಾಗುತ್ತಿದೆ. ಇಂದು ಸರಕಾರಕ್ಕೆ ಈ ಹಿರೇಹಳ್ಳದ ಉಸುಕಿನಿಂದ ಕೋಟ್ಯಾನುಗಟ್ಟಲೆ ತೆರಿಗೆ ಹಣವು ಸಂಗ್ರಹವಾಗುತ್ತಿದೆ.

ಪ್ರಾಚೀನ ಕಾಲದಲ್ಲಿ ಈ ಹಳ್ಳವು ಸ್ವಚ್ಛಂದವಾಗಿ, ಸುಂದರವಾಗಿ ಹರಿಯುತ್ತಿತ್ತು. ಇಲ್ಲಿನ ನೀರು ತಿಳಿ ಹಾಲಿನಂತೆ ಹರಿಯುತ್ತಿದ್ದು, ಹರಿಯುವ ತಿಳಿನೀರಿನೊಳಗೆ ಸುಂದರವಾದ ಉಸುಕನ್ನೂ ಸಹ ಕಾಣಬಹುದಾಗಿತ್ತಂತೆ. ಹೀಗಾಗಿ ಇಲ್ಲಿನ ಪರಿಶುದ್ಧವಾದ ನೀರನ್ನು ಪೂಜೆ–ಪುನಸ್ಕಾರಗಳಿಗೆ, ಮುನಿಪೋತ್ತಮರಿಗೆ ಇಂತಹ ಅನೇಕ ಶುಭಕಾರ್ಯಗಳಿಗೆ ಬಳಸಲಾಗುತ್ತಿತ್ತೆಂದು ಹಿರಿಯರು ಅಭಿಪ್ರಾಯಪಡುತ್ತಾರೆ.

ಈ ಹಿರೇಹಳ್ಳದ ಪಕ್ಕದಲ್ಲಿರುವ ಮಾದಿನೂರು, ಓಜನಹಳ್ಳಿ ಮತ್ತು ನರೇಗಲ್ ಗ್ರಾಮಗಳು ಪ್ರಾಚೀನ ಕಾಲದಲ್ಲಿ ಜೈನ ಕೇಂದ್ರಗಳಾಗಿದ್ದವೆಂದು ಇತಿಹಾಸದಿಂದ ತಿಳಿದುಬರುತ್ತದೆ. ಅಂದರೆ ಈ ಸುತ್ತಲ ಪ್ರದೇಶವೇ ಜೈನ ನೆಲೆಯಾಗಿತ್ತು ಎಂದು

ತಿಳಿದುಬರುತ್ತದೆ. ಕೊಪ್ಪಳದ ಜೈನಧರ್ಮದ ಹಿರಿಯರಾದ ಶ್ರೀ ಮಹೇಂದ್ರ ಛೋಪ್ರಾರವರು ಹೇಳುವಂತೆ ಈ ಹಿರೇಹಳ್ಳವು ಪ್ರಾಚೀನ ಕಾಲದಲ್ಲಿ ಶುಭ್ರವಾಗಿ ಮತ್ತು ಸ್ವಚ್ಛಂದವಾಗಿ ಹರಿಯುವ ತಿಳಿ ನೀರಿನ ಹಳ್ಳವಾಗಿತ್ತು. ಈ ಹಳ್ಳದ ಸುತ್ತಲ ಪ್ರದೇಶದಲ್ಲಿ ಅನೇಕ ಜೈನ ಮುನಿಗಳು ವಾಸವಾಗಿದ್ದರು. ಅವರಿಗೆ ದಿನನಿತ್ಯಕ್ಕೆ ಬೇಕಾದ ಶುದ್ಧವಾದ ನೀರನ್ನು ಇದೇ ಹಳ್ಳದಿಂದ ಪಡೆಯುತ್ತಿದ್ದರು. ಬಹಳ ಮುಖ್ಯವಾಗಿ ಓಜನಹಳ್ಳಿ ಗ್ರಾಮವು ಸಂಪೂರ್ಣ ಜೈನಮುನಿ ಮತ್ತು ಅನುಯಾಯಿಗಳಿಂದ ತುಂಬಿತ್ತು. ಹೀಗಾಗಿ ಅವರು ಪಕ್ಕದಲ್ಲೇ ಹರಿಯುವ ಹಳ್ಳದಲ್ಲಿನ ಶುದ್ಧವಾದ ನೀರನ್ನು ಪಡೆಯುತ್ತಿದ್ದರು. ಅದಕ್ಕಾಗಿ ಈ ಹಳ್ಳಕ್ಕೆ 'ಓಜಿನಹಳ್ಳ' ಎಂದು ಜೈನ ಸಂಪ್ರದಾಯ ಕಾಲದಲ್ಲಿ ಕರೆಯಲಾಗುತ್ತಿತ್ತು. ಜೈನ ಮುನಿಗಳು ಇದೇ ಹಳ್ಳದ ಸಾಲಿನಲ್ಲಿ ಪೂಜೆ ಕೈಂಕರ್ಯಗಳನ್ನು ನೆರವೇರಿಸುತ್ತಿದ್ದರು. ಹೀಗಾಗಿ ನಮ್ಮ ಪ್ರಾಚೀನ ಕಾಲದ ಜೈನಮುನಿಗಳ ಕಾಲಕ್ಕೆ ಇದು ಪವಿತ್ರವಾದ ಜೈನ(ಜಿನ)ಹಳ್ಳವೇ ನದಿಯಾಗಿ ಹರಿಯುತ್ತಿತ್ತು ಎಂಬುದು ಅವರ ಅಭಿಪ್ರಾಯವಾಗಿದೆ.

ಪ್ರಾಚೀನ ಕಾಲದಲ್ಲಿ ಕೊಪ್ಪಳವು ಜೈನರ ಕಾಶಿಯಾಗಿತ್ತು. ಇಲ್ಲಿ ಅನೇಕ ಜೈನಮುನಿಗಳು ವಾಸವಾಗಿದ್ದರು. ಅಲ್ಲದೇ ಇಲ್ಲಿಗೆ ಅನೇಕ ಜೈನ ಮುನಿಗಳು ಭೇಟಿಕೊಟ್ಟ ಉದಾಹರಣೆಗಳು ಸಾಕಷ್ಟು ದೊರೆಯುತ್ತವೆ. ಕೊಪ್ಪಳ ಪ್ರದೇಶವು ಜೈನ ಸಂಪ್ರದಾಯದಿಂದ ತುಂಬಿತ್ತು ಎಂಬುದರಲ್ಲಿ ಅನುಮಾನವಿಲ್ಲ. ಹೀಗಾಗಿ ಇಲ್ಲಿನ ಪ್ರದೇಶ, ಪ್ರಕೃತಿಗಳಿಗೆ ಜೈನ ಸಂಬಂಧಗಳು ಕಾಣಸಿಗುತ್ತವೆ. ಉದಾಹರಣೆಗೆ ನೋಡುವುದಾದರೆ ಬಹದ್ದೂರಬಂಡಿ ಗ್ರಾಮದ ಬೆಟ್ಟಕ್ಕೆ ಬರಮಪ್ಪನ ಬೆಟ್ಟ ಅಥವಾ ಗುಡ್ಡ (ತೀರ್ಥಂಕರರ ಯಕ್ಷ ಬ್ರಹ್ಮನು. ಅವರನ್ನು ಬರಮಪ್ಪ ಎಂತಲೂ ಕರೆಯಲಾಗುತ್ತದೆ), ಓಜಿನಹಳ್ಳಿ ಮತ್ತು ಜಿನ್ನಾಪುರ ಗ್ರಾಮಗಳೂ ಜೈನಧರ್ಮದ ಹೆಸರಿನಿಂದ ಕರೆಸಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಅಷ್ಟೇ ಅಲ್ಲ ಕೊಪ್ಪಳದ ಅನೇಕ ಗ್ರಾಮಗಳಲ್ಲಿ ಇಂದಿಗೂ ಸಹ ಬರಮಪ್ಪನ ಗುಂಡುಗಳನ್ನು ಕಾಣಬಹುದು. ಇವೆಲ್ಲವುಗಳನ್ನು ಗಮನಿಸಿದಾಗ ಇದೂ ಒಂದು 'ಓಜಿನಹಳ್ಳ' ಇರಬೇಕೇನೋ ಎಂದೆನಿಸುವುದು ಸಹಜ. ಇದೇ ವಿಷಯದ ಮೇಲೆ ಚರ್ಚಿಸಿದರೆ ಈ ಹಳ್ಳಕ್ಕೆ ಸುಮಾರು ಒಂದು ಸಾವಿರ ವರ್ಷದ ಇತಿಹಾಸ ದೊರೆಯುತ್ತದೆ. ಇದರ ಬಗ್ಗೆ ಇನ್ನೂ ಹೆಚ್ಚಿನ ಶೋಧಗಳು ನಡೆಯಬೇಕಿದೆ.

ಮಾದಿನೂರು ಗ್ರಾಮದಲ್ಲಿ ವಿಷ್ಣುತೀರ್ಥರ ದೇವಸ್ಥಾನವಿದೆ. ದಕ್ಷಿಣದ ಭಕ್ತರು 'ಉತ್ತರದಲ್ಲಿರುವ ಬದರಿನಾರಾಯಣ' ದೇವಸ್ಥಾನಕ್ಕೆ ಹೋಗುವುದಕ್ಕೆ ಆಗದವರು ಇಲ್ಲಿಗೆ ಬಂದು ದರ್ಶನ ಪಡೆದರೆ ಸಾಕು. ಅವರು ಪವಿತ್ರರಾಗುತ್ತಾರೆ. ಅವರಿಗೆ ಉತ್ತರದ 'ಬದರಿನಾರಾಯಣ' ನ ದರ್ಶನ ಪಡೆದಂತೆ ಆಗುತ್ತದೆ ಎಂಬುದು ಭಕ್ತರ

ನಂಬಿಕೆಯಾಗಿದೆ. ಆದ್ದರಿಂದ ಈ ವಿಷ್ಣುತೀರ್ಥ ದೇವಸ್ಥಾನಕ್ಕೆ ಅನೇಕ ಭಕ್ತರು ಇಲ್ಲಿಗೆ ಬಂದು ದರ್ಶನ ಪಡೆಯುತ್ತಾರೆ. ಈ ವಿಷ್ಣುತೀರ್ಥರು ಅರಣ್ಯಕಾಚಾರ್ಯರು. ಅಂದರೆ ಸಾಮಾನ್ಯ ಅರ್ಥದಲ್ಲಿ ಅಡವಿ ಸ್ವಾಮಿಗಳು ಎಂದು. ಇವರು ಊರೂರು ಸಂಚರಿಸುತ್ತಾ ಈ ಮಾದಿನೂರು ಗ್ರಾಮದಲ್ಲಿ ಬಂದು ನೆಲೆಸಿದ್ದರು. ಇವರು ಕ್ರಿ.ಶ. ಸುಮಾರು 1706 ರಿಂದ 1756ರ ಅವಧಿಯಲ್ಲಿ ಇಲ್ಲಿ ನೆಲೆಸಿದ್ದರೆಂದು ಪ್ರತೀತಿ ಇದೆ. ಇಂದು ಈ ದೇವಸ್ಥಾನವನ್ನು 'ದಕ್ಷಿಣ ಬದರಿನಾರಾಯಣ' ದೇವಸ್ಥಾನವೆಂತಲೂ ಕರೆಯುತ್ತಾರೆ. ಈ ದೇವಸ್ಥಾನದ ಮೂಲ ಕರ್ತೃಗಳಾದ ಶ್ರೀ ಅಡವಿಕಾಚಾರ್ಯರರ ವಂಶಸ್ಥರು ಮೂಲತಃ ಸವಣೂರಿನವರು. ಶ್ರೀ ಅಡವಿಕಾಚಾರ್ಯರು ಶ್ರೀ ತಿರುಮಲಾಚಾರ್ಯರು ಮತ್ತು ಶ್ರೀಮತಿ ಭಾಗೀರಥಿಯವರ ಪುಣ್ಯಗರ್ಭದಿಂದ ಜನ್ಮತಾಳಿದರು. ಇವರ ಮೂಲ ಹೆಸರು ಜಯತೀರ್ಥಾಚಾರ್ಯರು. ಇವರ ಹೆಸರೇ ಸೂಚಿಸುವಂತೆ ಇವರು ಊರೂರು ಸಂಚರಿಸುತ್ತಾ ಬಂದಿರುವುದರಿಂದ ಅಡವಿಕಾಚಾರ್‍ಯರು ಎಂದಾಗಿರಬೇಕು. ಸಕಲ ಶಾಸ್ತ್ರಗಳಲ್ಲಿ ಪರಿಣಿತಿ ಪಡೆದ ಇವರು ಅನೇಕ ಕೃತಿಗಳನ್ನು ಬರೆದಿದ್ದಾರೆ. ಆದರೆ ಎಷ್ಟು ಕೃತಿಗಳನ್ನು ರಚಿಸಿದ್ದಾರೆಂಬುದು ನಿಖರವಾಗಿ ತಿಳಿದುಬಂದಿರುವುದಿಲ್ಲ. ಆದರೂ ಉಪಲಬ್ಧವಾದ ಕೆಲವೇ ಕೆಲವು ಗ್ರಂಥಗಳೆಂದರೆ ಸುಮಧ್ವ ವಿಜಯ, ಪ್ರಮೇಯ ಫಲಮಾಲಿಕ ಮತ್ತು ರಮಾಸ್ತೋತ್ರ ಎಂಬ ಕೆಲವೇ ಗ್ರಂಥಗಳು ಮಾತ್ರ ದೊರಕಿವೆ.

ಶ್ರೀ ಅಡವಿಕಾಚಾರ್ಯರ ಕೃತಿಗಳಲ್ಲಿ ಈ 'ಕುಶನದಿ' ಎಂಬ ಉಲ್ಲೇಖ ಬರುತ್ತದೆ. "ಚಾರುಶ್ರೀಕುಶನದೀತಿರದಲ್ಲಿರುತಿಹನ್ಯಾರೇ ಪೇಳಮ್ಮಯ್ಯ ಸಾರಯತೀಶ್ವರ ಧೀರ ಸುಗುಣಗಂಭೀರ ವಿಷ್ಣುತೀರ್ಥಾರ್ಯ ಕಾಣಮ್ಮಾ"॥ ಎಂದು ಶ್ರೀ ಅರಣ್ಯಕಾಚಾರ್‍ಯರು ತಮ್ಮ 'ಚಾರುಶ್ರೀಕುಶನದಿ ತೀರದಲ್ಲಿರುತಿಹನ್ಯಾರೇ' ಎಂಬ ಪದ್ಯದಲ್ಲಿ ಆಚಾರ್‍ಯರು ತಾವು ವಾಸಿಸಿರುವ ಮಾದಿನೂರಿನ ಹತ್ತಿರ ಹರಿಯುವ ಹಳ್ಳದ ಪ್ರದೇಶಕ್ಕೆ 'ಕುಶನದಿ' ಎಂದು ಉಲ್ಲೇಖಿಸಿದ್ದಾರೆ. ಕುಶನದಿಯ ಈ ಉಲ್ಲೇಖ ಇವರ ಇನ್ನೂ ಕೆಲ ಕಾವ್ಯಗಳಲ್ಲಿ ಪ್ರಸ್ತಾಪವಿದೆ. ಮಾದಿನೂರು ಪಕ್ಕದಲ್ಲೇ ಹರಿಯುವ ಹಿರೇಹಳ್ಳಕ್ಕೆ ಈ ರೀತಿಯಲ್ಲಿ ವರ್ಣಿಸಿರುವುದು ಕಂಡುಬರುತ್ತದೆ. ಅಂದರೆ ಕ್ರಿ.ಶ. 17ನೇ ಶತಮಾನದಲ್ಲಿ ಈ ಉಲ್ಲೇಖವಿರುವುದು ತಿಳಿದುಬರುತ್ತದೆ. ಶ್ರೀ ಅಡವಿಕಾಚಾರ್‍ಯರು 'ಕುಶನದಿ'ಯ ಈ ಉಲ್ಲೇಖವನ್ನು ಯಾವ ಆಧಾರಮೇಲೆ ಉಲ್ಲೇಖಿಸಿದರು ಎಂಬುದು ಮಾತ್ರ ತಿಳಿಯುವುದಿಲ್ಲ. ಅವರು ಬ್ರಾಹ್ಮಣಾಚಾರ್ಯರಾಗಿದ್ದರಿಂದ ಭವಿಷ್ಯ ಈ ಉಲ್ಲೇಖ ಮಾಡಿರಬೇಕೇನೋ ಎಂದೆನಿಸುತ್ತದೆ. ಏಕೆಂದರೆ ಅವರ ಪೂಜೆ, ಪುನಸ್ಕಾರ, ಮಡಿ ಇತ್ಯಾದಿ ಶುಭಕಾರ್ಯಗಳಿಗೆ ಶುದ್ಧವಾದ ಜಲ ಅಥವಾ ತೀರ್ಥ ಬೇಕಾಗುತ್ತದೆ. ಮತ್ತು ಸಂಧ್ಯಾವಂದನೆ ಇತ್ಯಾದಿ ಶುಭಕಾರ್ಯಗಳಿಗೆ ಇಂತಹ ಸ್ವಚ್ಛಂದವಾದ ಮತ್ತು ಶುದ್ಧವಾದ ನೀರು ಅಗತ್ಯವಾಗಿ ಬೇಕಾಗುತ್ತದೆ. 'ಕುಶ' ಎಂದರೆ ಹೋಮ, ಹವನಗಳಿಗೆ

ಬಳಸುವ ಮೊನಚಾದ ಹುಲ್ಲು ಅಥವಾ ದರ್ಬೆ ಎಂದು ಅರ್ಥ ಬರುತ್ತದೆ. ಬಹುಶ: ಹಳ್ಳದಲ್ಲಿ ಹರಿಯುವ ಶುದ್ಧವಾದ ನೀರು, ಹೋಮಕ್ಕೆ ಬೇಕಾದ ಹುಲ್ಲು ಸಿಗುವ ಈ ಹಳ್ಳಕ್ಕೆ 'ಕುಶನದಿ' ಎಂದು ಕರೆದಿರುವ ಸಾಧ್ಯತೆಯಿದೆ. ಅರಣ್ಯಕಾಚಾರ್ಯರು ಹೆಸರಿಸಿದ ಕುಶನದಿಯ ಉಲ್ಲೇಖದ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ.

ಇಂತಹ ಸಾವಿರಾರು ವರ್ಷಗಳ ಇತಿಹಾಸವಿರುವ ಹಿರೇಹಳ್ಳವು ಕಾಲ ಕಾಲಕ್ಕೆ ತಕ್ಕಂತೆ ನಾಮ ಬದಲಾಗುತ್ತಾ ಬಂದಿರಬಹುದು. ಆದರೆ ಅದರಲ್ಲಿ ನಿರಂತರವಾಗಿ ಹರಿದು ಬರುವ ನೀರು ಮಾತ್ರ ಯಾವುದೇ ಬದಲಾವಣೆಯಾಗಿಲ್ಲ. ಇದನ್ನು ಮನಗಂಡ ಕೊಪ್ಪಳದ ಸಂಸ್ಥಾನ ಶ್ರೀ ಗವಿಮಠದ ಪರಮಪೂಜ್ಯರಾದ ಶ್ರೀ ಅಭಿನವ ಗವಿಸಿದ್ಧೇಶ್ವರ ಮಹಾಸ್ವಾಮಿಗಳು ಮತ್ತು ಶ್ರೀಮಠದ ಭಕ್ತ ಸಮೂಹ ಎರಡು ವರ್ಷದ ಕೆಳಗೆ ಇಂತಹ ಐತಿಹಾಸಿಕ ಹಿನ್ನೆಲೆಯುಳ್ಳ ಹಿರೇಹಳ್ಳವನ್ನು ಸ್ವಚ್ಛಗೊಳಿಸಿದರು. ಶ್ರೀಗಳು, ಭಕ್ತ ಸಮೂಹ ಮತ್ತು ವಿಶೇಷವಾಗಿ ಹಳ್ಳದ ಸರಹದ್ದಿನಲ್ಲಿ ವಾಸಿಸುವ ಜನರು, ಸರಕಾರ, ಸಂಘ-ಸಂಸ್ಥೆಗಳು ಅಣೆಕಟ್ಟಿನಿಂದ ತುಂಗಭದ್ರಾ ನದಿಯವರೆಗೆ ಇದ್ದ ಮುಳ್ಳು, ಕಂಟಿ, ಬೇಲಿಗಳನ್ನು ಕಡಿದು ತೆಗೆದುಹಾಕಲಾಯಿತು. ಹಳ್ಳದ ಸಾಲಿನಲ್ಲಿರುವ ಕಸ-ಕಡ್ಡಿಯನ್ನು ತೆಗೆದು ಸ್ವಚ್ಛಗೊಳಿಸಲಾಯಿತು. ಹೀಗಾಗಿ ಕಳೆದ ಎರಡು ವರ್ಷಗಳಿಂದ ಎಲ್ಲಿಯೂ ಅಡೆ-ತಡೆಯಿಲ್ಲದೆ ನೀರು ಸರಾಗವಾಗಿ ಹರಿದು ಬರುವಂತೆ ಮಾಡಿದ ಕೀರ್ತಿ ಪರಮಪೂಜ್ಯರಿಗೆ ಮತ್ತು ಇದರಲ್ಲಿ ಭಾಗವಹಿಸಿದ ಭಕ್ತ ಸಮೂಹಕ್ಕೆ ಸಲ್ಲುತ್ತದೆ.

## ಆಕರ ಗ್ರಂಥಗಳು :-


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ-1999
2) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ-2020
3) ಹಂಪ ನಾಗರಾಜಯ್ಯ, ಕೊಪ್ಪಳ ಶಾಸನಗಳು, ರತ್ನತ್ರಯ ಪ್ರಕಾಶನ-1998
4) ಬಿ.ಸಿ.ಪಾಟೀಲ, ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಹರಿಹರ ಪ್ರಕಾಶನ ಕೊಪ್ಪಳ-1998


* * * * *

## ಶುಕಪುರದ ಕೆರೆಯೋ...? ಗಿಣಿಗಳ ಕೆರೆಯೋ...?

## ಗಿಣಿಗೇರಿ ಕೆರೆಯೋ...?

ಗಿಣಿಗೇರಿ, ಗಿಣಿಗೇರಾ, ಗಿಣಗೇರಾ, ಶುಕಪುರಿ ಎಂದು ಕರೆಸಿಕೊಳ್ಳುತ್ತಿರುವ ಈ ಗ್ರಾಮವು ಕೊಪ್ಪಳ ನಗರದಿಂದ ಸುಮಾರು ಹತ್ತು ಕಿ.ಮೀ ದೂರದಲ್ಲಿದೆ. ಈ ಗ್ರಾಮವು ಪ್ರಾಚೀನ ಕಾಲದಲ್ಲಿ ಐತಿಹಾಸಿಕ ಗ್ರಾಮವೇ ಆಗಿತ್ತು ಎನ್ನುವುದಕ್ಕೆ ಇಲ್ಲಿ ಕೆಲವೇ ಕೆಲವು ಸ್ಮಾರಕಗಳು ಮಾತ್ರ ಲಭ್ಯವಾಗಿವೆ. ಆದರೂ ಸಹ ಇದರ ಚರಿತ್ರೆ ಸಾಮಾನ್ಯವಾದುದು ಆಗಿಲ್ಲ ಎನ್ನುವುದು ಮಾತ್ರ ಸತ್ಯ. ಬಹು ಪುರಾತನ ಕಾಲದಿಂದಲೂ ಈ ಗಿಣಿಗೇರಿ ಗ್ರಾಮ ಇದ್ದ ಬಗ್ಗೆ ಕೆಲ ಸ್ಮಾರಕಗಳು ಹೇಳುತ್ತವೆ. ಈ ಗ್ರಾಮದಲ್ಲಿ ಶಾಸನಗಳಾಗಲಿ ಇಲ್ಲವೆ ಪ್ರಾಚೀನ ಕಾಲದ ದೇವಸ್ಥಾನಗಳು ಲಭ್ಯವಿಲ್ಲ. ಆದರೆ ಈ ಗ್ರಾಮದಲ್ಲಿ ಪ್ರಾಚೀನ ಕಾಲದ ಸಂಪೂರ್ಣ ಭಗ್ನಗೊಂಡ ಒಂದು ಜೈನ ಬಸದಿಯು ಕಂಡುಬರುತ್ತಿದೆ. ಹೀಗಾಗಿ ಇದು ಪ್ರಾಚೀನ ಕಾಲದಲ್ಲಿ ಜೈನಧರ್ಮದ ಸಾಂಸ್ಕೃತಿಕ ಕೇಂದ್ರವಾಗಿರಬೇಕು. ಆದರೆ ಅದಕ್ಕೆ ಸಂಬಂಧಿಸಿದ ಇತರೆ ಯಾವುದೇ ಕುರುಹುಗಳು ಲಭ್ಯವಾಗಿಲ್ಲ. ಆದರೂ ಈ ಒಂದು ಬಸದಿ ಸ್ಮಾರಕವನ್ನು ಗಮನಿಸಿದಾಗ ಪ್ರಾಚೀನ ಕಾಲದಲ್ಲಿ ಇದೊಂದು ಜೈನಧರ್ಮದ ಸಾಂಪ್ರದಾಯಿಕ ಕೇಂದ್ರವಾಗಿತ್ತು ಎನ್ನುವುದರಲ್ಲಿ ಅನುಮಾನವಿಲ್ಲ.

ಪ್ರಾಚೀನ ಕಾಲದಲ್ಲಿ ಈ ಗ್ರಾಮವನ್ನು 'ಶುಕಪುರಿ' ಎಂದು ಕರೆಯಲಾಗುತ್ತಿತ್ತು ಎಂಬುದು ಇಲ್ಲಿನ ಹಿರಿಯರ ಅಭಿಪ್ರಾಯವಾಗಿದೆ. 'ಶುಕಪುರಿ' ಎನ್ನುವುದು ಸಂಸ್ಕೃತ ಪದವಾಗಿದ್ದು, 'ಶುಕ' ಮತ್ತು 'ಪುರಿ' ಎಂಬ ಎರಡು ಶಬ್ಧಗಳಿಂದ ಸಮ್ಮಿಳಿತಗೊಂಡಿದೆ. 'ಶುಕ' ಎಂದರೆ 'ಗಿಣಿ'(ಗಿಳಿ) ಎಂಬ ಅರ್ಥವನ್ನು ಕೊಡುತ್ತದೆ. ಅಲ್ಲದೇ ಬಾಗೂರುದಮರ, ಶಾಲ್ಮಲಿ ವೃಕ್ಷ(ಬಾಗೆಮರ), ಶಿರಿಷ ವೃಕ್ಷ, ಮುತ್ತುಗ(ಶುಕನಾಶ), ಮಾವಿನಮರ ಮುಂತಾದ ಮರಗಳನ್ನು 'ಶುಕಮರ'ಗಳೆಂದು ಕರೆಯಲಾಗುತ್ತಿದೆ. ಬಹುಶಃ ಹೆಚ್ಚಾಗಿ 'ಶುಕ'(ಗಿಣಿ)ಗಳು ಕುಳಿತಿಕೊಳ್ಳುವ ಮತ್ತು ಆಶ್ರಯ ಪಡೆದಿರುವ ಇಲ್ಲವೆ ಅವುಗಳಿಗೆ ಇಷ್ಟವಾಗುವ ಹಣ್ಣುಗಳನ್ನು ನೀಡುವ ಮರಗಳಿಗೆ 'ಶುಕಮರ'ಗಳೆಂದು ಕರೆದಿರುವ ಸಾಧ್ಯತೆಯಿದೆ. ಅಲ್ಲದೇ 'ಗಿಣಿ'ಗಳ ಭೌತಿಕ ಆಕಾರ ಹೊಂದಿರುವ ಮರಗಳನ್ನೂ ಸಹ 'ಶುಕ'ಮರಗಳೆಂದು ಕರೆಯಲಾಗುತ್ತಿತ್ತು. ಇನ್ನು 'ಪುರಿ' ಎಂಬ ಶಬ್ಧಕ್ಕೆ ಸಂವಾದಿಯಾಗಿ 'ಪುರ' ಎಂದೂ ಸಹ ಬಳಸಲಾಗುತ್ತಿದೆ. 'ಪುರ' ಎಂದರೆ ಸಾಮಾನ್ಯವಾಗಿ ಊರು, ಹಳ್ಳಿ ಅಥವಾ ಗ್ರಾಮ ಎಂಬ ಅರ್ಥಗಳನ್ನು ಕೊಡುತ್ತದೆ. ಆದರೆ ಈ 'ಪುರ' ಎಂಬ ಶಬ್ದವನ್ನು ಸಣ್ಣ–ಪುಟ್ಟ ಗ್ರಾಮಗಳಿಗೆ ಇಲ್ಲವೆ ಊರುಗಳಿಗೆ

ಬಳಸಲಾಗುತ್ತಿರಲಿಲ್ಲ. ಬಹುಶಃ ಪ್ರಾಚೀನ ಕಾಲದಲ್ಲಿ ಈ ಗಿಣಿಗೇರಿ ಗ್ರಾಮವು ಬಹುದೊಡ್ಡ ಗ್ರಾಮ, ಇಲ್ಲವೆ ದೊಡ್ಡ ನಗರವೇ ಆಗಿರಬೇಕು ಎಂದೆನಿಸುತ್ತದೆ. ದೊಡ್ಡ ದೊಡ್ಡ ವಿದ್ವಾಂಸರು ವಾಸಮಾಡುವ ಗ್ರಾಮಗಳಿಗೆ ಮಾತ್ರ 'ಪುರ' ಎಂಬ ಹೆಸರುಗಳಿಂದ ಕರೆಯಲಾಗುತ್ತಿದ್ದದ್ದು ಚರಿತ್ರೆಗಳಿಂದ ತಿಳಿದುಬರುತ್ತದೆ. ಪ್ರಾಚೀನ ಕಾಲದಲ್ಲಿ ಈ ಗಿಣಿಗೇರಿ ಗ್ರಾಮವು ಪಂಡಿತ–ಪಾಮರರಿಂದ ತುಂಬಿಕೊಂಡಿತ್ತು. ಇಲ್ಲಿ ಪಾಠ–ಪ್ರವಚನ, ಯಜ್ಞ–ಯಾಗಾದಿಗಳು ನಡೆಯುತ್ತಿರಬೇಕು, ವಿದ್ವಾಂಸರ ತಂಡವೇ ಇಲ್ಲಿ ನೆಲಸಿರಬೇಕು. ಆ ಕಾರಣದಿಂದಾಗಿ ಈ ಗ್ರಾಮಕ್ಕೆ 'ಶುಕ'ಪದದ ನಂತರ 'ಪುರ' ಎಂದು ಸಂಭೋಧಿಸಿರಬೇಕು ಎಂದೆನಿಸುವುದು ಸಹಜ. ಆದರೆ ಅದಕ್ಕೆ ಯಾವುದೇ ಆಕರಗಳು ನನಗೆ ಲಭ್ಯವಾಗಿಲ್ಲ. ಇಲ್ಲಿ ಗಮನಿಸಬೇಕಾದ ಮತ್ತೊಂದು ಮಹತ್ವದ ಸಂಗತಿ ಎಂದರೆ ಈ ಗ್ರಾಮದ ನಾಮದಲ್ಲಿ 'ಶುಕ' ಎಂಬ ಪದದ ಬಳಕೆಯಾದದ್ದು. ಮಹಾಭಾರತದಲ್ಲಿ 'ಶುಕ'ಮುನಿ ಆಚಾರ್ಯರ ಉಲ್ಲೇಖ ಬರುತ್ತದೆ. ಮಹಾಭಾರತದಲ್ಲಿನ ವೇದವ್ಯಾಸ ಋಷಿಮುನಿಗೆ 'ಶುಕ' ಮತ್ತು 'ಶುಕಿ'(ಗಿಣಿ) ಎಂಬ ಇಬ್ಬರು ಮಕ್ಕಳಿದ್ದರು. ವೇದವ್ಯಾಸಮುನಿ ವಿರಚಿತ ಹದಿನೆಂಟು ಭಾಗವತದಲ್ಲಿ ಹದಿನೆಂಟನೆ ಭಾಗವತವನ್ನು 'ಶುಕ'ಮುನಿ ಆಚಾರ್ಯರು ಸಾಯುತ್ತಿರುವ ಪರೀಕ್ಷಿತರಾಜನಿಗೆ ಹೇಳಿದರು. ಈ 'ಶುಕ'ಮುನಿಯು ಮೋಕ್ಷದ ಅನ್ವೇಷಣದ ಸನ್ಯಾಸಿ ಎಂದು ಹೇಳಲಾಗುತ್ತಿದೆ. ಬಹುತೇಕ ಮುನಿಗಳು ಮೋಕ್ಷದ ಸಂದರ್ಭದಲ್ಲಿ ಈ 'ಶುಕ'ಮುನಿಯ ಹತ್ತಿರ ಕುಳಿತು ಭಾಗವತದ ಕಥೆಗಳನ್ನು ಕೇಳುತ್ತಿದ್ದರೆಂದು ಪುರಾಣಗಳು ಹೇಳುತ್ತಿವೆ. ಇಂತಹ ಮಹತ್ವ ಪಡೆದ 'ಶುಕ'ಮುನಿಯ ಹೆಸರು ಈ ಗ್ರಾಮದ ನಾಮದಲ್ಲಿ ಸೇರಿಕೊಂಡಿರುವುದು ಬಹಳ ವಿಶೇಷ ಎಂದು ಹೇಳಬಹುದು.

ಈ ಗಿಣಿಗೇರಿ ಗ್ರಾಮದ ಅಧ್ಯಯನದ ಸಂದರ್ಭದಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ 'ಶುಕಪುರಿ' ಎಂದು ಯಾಕೆ ಕರೆಯಲಾಯಿತು? ಮತ್ತು ಮುಖ್ಯವಾಗಿ 'ಶುಕ' ಎಂಬ ಪದದ ಬಳಕೆ ಈ ಗ್ರಾಮದ ನಾಮದಲ್ಲಿ ಯಾಕೆ ಬಳಸಲಾಯಿತು? ಜೊತೆಗೆ 'ಪುರಿ' ಎಂದು ಯಾವ ಕಾರಣಕ್ಕಾಗಿ ಸಂಭೋಧಿಸಲಾಯಿತು? ಎಂಬ ಕೆಲ ಪ್ರಶ್ನೆಗಳು ಮೂಡುತ್ತವೆ. ಮೇಲಿನ ಎಲ್ಲಾ ಅಂಶಗಳನ್ನು ಮತ್ತು ಅವುಗಳ ಅರ್ಥಗಳನ್ನು ಗಮನಿಸಿದಾಗ 'ಶುಕ' ಮತ್ತು 'ಪುರಿ' ಎಂಬ ಪದಗಳ ಅರ್ಥಗಳಿಗೂ ಮತ್ತು ಈ ಗ್ರಾಮಕ್ಕೂ ಏನೋ ಸಂಬಂಧವಿರಬೇಕು ಎಂದೆನಿಸುತ್ತದೆ. ಒಂದು ವೇಳೆ ಆ ಪದಗಳಿಗೆ ಮತ್ತು ಈ ಗ್ರಾಮಕ್ಕೆ ಯಾವುದೇ ರೀತಿಯ ಸಂಬಂಧಗಳು ಇಲ್ಲದೆ ಹೋಗಿದ್ದರೆ 'ಶುಕಪುರಿ' ಎಂಬ ಮಹತ್ವದ ನಾಮವನ್ನು ಈ ಗ್ರಾಮಕ್ಕೆ ಇಲ್ಲಿ ಬಳಸಲಾಗುತ್ತಿರಲಿಲ್ಲ. ಬಹುಶಃ ಪ್ರಾಚೀನ ಕಾಲದಲ್ಲಿ ಈ 'ಗಿಣಿಗೇರಿ'ಯು ಮಹತ್ವ ಪಡೆದ ಗ್ರಾಮವಾಗಿರಬೇಕು. ಆ ಕಾರಣಕ್ಕಾಗಿಯೇ ಈ

ಗ್ರಾಮಕ್ಕೆ 'ಶುಕಪುರಿ' ಎಂಬ ನಾಮದಿಂದ ಕರೆದಿರಬೇಕು ಎಂದೆನಿಸುತ್ತದೆ. ಆದರೆ ಅದಕ್ಕೆ ಸಂಬಂಧಿಸಿದ ಆಕರಗಳು ನನಗೆ ಲಭ್ಯವಿಲ್ಲ. ಇದರ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ. ಕಾಲಾಂತರದಲ್ಲಿ ಇದು 'ಶುಕಪುರಿ'ಯಿಂದ 'ಗಿಣಿಗೇರಿ' ಎಂಬ ಗ್ರಾಮನಾಮವಾಗಿ ಬದಲಾಗಿರಬಹುದು. ಆದರೆ ಇದು ಯಾವ ಕಾಲದಲ್ಲಿ ಮತ್ತು ಯಾವ ಕಾರಣಕ್ಕಾಗಿ ಬದಲಾಯಿತು ಎಂಬ ಸಂಗತಿಗಳು ಮಾತ್ರ ತಿಳಿದುಬರುವುದಿಲ್ಲ.

ಈ ಗ್ರಾಮದ ತುದಿಯಲ್ಲಿ ಬಹಳ ವಿಶಾಲವಾದ ಒಂದು ಕೆರೆಯಿದೆ. ಗಿಣಿಗೇರಿ, ಬಸಾಪುರ, ಕುಟಗನಹಳ್ಳಿ ಮತ್ತು ಭೀಮನೂರು ಗ್ರಾಮಗಳ ಸೀಮಾದಲ್ಲಿ ಹರಡಿಕೊಂಡಿರುವ ಈ ಕೆರೆಯು ಹಿಂದೆ ಸುಮಾರು 280ಕ್ಕೂ ಅಧಿಕ ಎಕರೆಗಳಲ್ಲಿ ವಿಸ್ತಾರವಾಗಿ ಹರಡಿಕೊಂಡಿತ್ತೆಂದು ಹೇಳಲಾಗುತ್ತಿದೆ. ಆದರೆ ಇಂದು ಅತ್ತಕಡೆ–ಇತ್ತಕಡೆ ಒತ್ತುವರಿಯಾಗಿ ಸುಮಾರು 260 ಎಕರೆಗಳಷ್ಟು ಮಾತ್ರ ಉಳಿದುಕೊಂಡಿರಬಹುದೆಂದು ಹೇಳಲಾಗುತ್ತಿದೆ. ಈ ಕೆರೆಯಲ್ಲಿ ಬಾಗೂರುದಮರ, ಶಾಲ್ಮಲಿ ವೃಕ್ಷ, ಬಾಗೆಮರ, ಶಿರಿಷ ವೃಕ್ಷ, ಮುತ್ತುಗಮರ, ಶುಕನಾಶ, ಮಾವಿನಮರ, ಬಸರಿಮರ, ಆಲದಮರ, ಬೇವಿನಮರ ಮುಂತಾದ ಆನೇಕ ಮರಗಳು ಈ ಕೆರೆಯಲ್ಲಿದ್ದವೆಂದು ಹೇಳಲಾಗುತ್ತಿದೆ. ಈ ಕೆರೆಯಲ್ಲಿರುವ ನಾನಾ ಜಾತಿಯ ಮರಗಳಲ್ಲಿ ಅನೇಕ ಪಕ್ಷಿ ಸಂಕುಲಗಳು ವಾಸವಾಗಿದ್ದವೆಂದು ಇಲ್ಲಿನ ಹಿರಿಯರ ಅಭಿಪ್ರಾಯವಾಗಿದೆ. ಅದರಲ್ಲಿ ವಿಶೇಷವಾಗಿ ಗಿಣಿ(ಳಿ)ಗಳ ಸಂಖ್ಯೆ ಅಧಿಕವಾಗಿತ್ತಿದ್ದೆಂದು ಹೇಳಲಾಗುತ್ತಿದೆ. ಇಲ್ಲಿ ಸಾವಿರಾರು ಗಿಣಿಗಳು ವಾಸಮಾಡುತ್ತಿದ್ದವಂತೆ. ಅದಕ್ಕಾಗಿಯೇ ಈ ಗ್ರಾಮಕ್ಕೆ ಗಿಣಿಗಳು ವಾಸಿಸುವ ಕೆರೆ, 'ಗಿಣಿಗೇರಾ'(ಗಿಣಿಕೆರೆ) ಅಥವಾ ಶುಕಗಳು ವಾಸಿಸುವ ಕೆರೆ, 'ಶುಕಪುರಿ' ಎಂಬ ಹೆಸರು ಬಳಸಲಾಗಿರಬಹುದೇ ಎಂಬ ಪ್ರಶ್ನೆ ಮೂಡುತ್ತದೆ. ಪ್ರಾಣಿ, ಪಶು, ಪಕ್ಷಿಗಳ ಹೆಸರಿನ ಮೇಲೆ ಕರೆದ ಅನೇಕ ಗ್ರಾಮಗಳ ನಾಮಗಳು ಚರಿತ್ರೆಯಲ್ಲಿವೆ. ವಿಶೇಷವಾಗಿ ಪಕ್ಷಿಗಳ ಹೆಸರಿನ ಮೇಲೆ ನವಲಿ, ಕೋಳಿವಾಡ, ಗೂಗಲ್, ಗೂಗಲ್‌ಮರಿ, ಕಾಗಿನೆಲೆ ಮುಂತಾದವುಗಳನ್ನು ಗಮನಿಸಬಹುದು. ಅದರಂತೆ ಪ್ರಾಣಿಗಳ ಹೆಸರಿನ ಮೇಲೆ ಕರಡಿಗುಡ್ಡ, ಕುದರೆಮುಖ, ಎಮ್ಮಿಗನೂರು, ಯತ್ನಟ್ಟಿ, ಆಡೂರು, ಆಕಳವಾಡಿ ಇಂತಹ ಅನೇಕ ಹೆಸರುಗಳನ್ನು ಗಮನಿಸಿದಾಗ ಪಕ್ಷಿವಾಚಕವಾದ ಗಿಣಿ(ಗಿಳಿ) ಹೆಸರಿನ ಮೇಲೆ ಈ ಗ್ರಾಮ 'ಗಿಣಿಗೇರಿ' ಎಂದು ಕರೆಸಿಕೊಂಡಿದ್ದರೆ ಆಶ್ಚರ್ಯವೇನಲ್ಲ.

ಪ್ರಾಚೀನ ಕಾಲದಲ್ಲಿ ಬಹುತೇಕ ಗ್ರಾಮಗಳ ಹೆಸರುಗಳನ್ನು ಪ್ರಾಕೃತಿಕ ಆಧಾರದ ಮೇಲೆ ಕರೆಯುತ್ತಿದ್ದರು. ಬಹುಶಃ ಅದೇ ಆಧಾರದ ಮೇಲೆ ಈ ಗಿಣಿಗೇರಿ ಗ್ರಾಮನಾಮ ಬಳಸಲಾಗಿದೆಯೇ ಎಂಬ ಪ್ರಶ್ನೆ ಮೂಡುತ್ತದೆ. ಹಾಗಾದರೆ ಈ ಗಿಣಿಗೇರಿ ಎಂಬ ನಾಮವನ್ನು ಇಲ್ಲಿನ ಪ್ರಾಕೃತಿಕವಾಗಿ ವಿಶಾಲವಾಗಿ ನಿರ್ಮಾಣಗೊಂಡ ಕೆರೆಯ ಹೆಸರಿನ ಮೇಲೆ ಈ ಗ್ರಾಮ ಕರೆಸಿಕೊಂಡಿರಬಹುದೇ? ಅಥವಾ ಈ ಕೆರೆಯಲ್ಲಿರುವ ಮರಗಳ

ಆಧಾರದಮೇಲೆ ಕರೆಸಿಕೊಂಡಿರಬಹುದೇ? ಇಲ್ಲವೆ ಈ ಕೆರೆಯಲ್ಲಿರುವ ಅಪಾರ ಸಂಖ್ಯೆಯ ಗಿಣಿಗಳ ಹೆಸರಿನ ಮೇಲೆ ಈ ಗ್ರಾಮ ಕರೆಸಿಕೊಂಡಿರಬಹುದೇ? ಅಥವಾ ಮುನಿ(ಶುಕ)ಗಳು ವಾಸಿಸುವ ಆಧಾರದ ಮೇಲೆ ಈ ಗ್ರಾಮ ಕರೆಸಿಕೊಂಡಿರಬಹುದೇ? ಎಂಬ ಅನೇಕ ಪ್ರಶ್ನೆಗಳು ಮೂಡುತ್ತವೆ. ಅವುಗಳಲ್ಲಿ ಯಾವ ಅಭಿಪ್ರಾಯವನ್ನು ಒಪ್ಪುವುದಾಗಲಿ ಇಲ್ಲವೇ ನಿರಾಕರಿಸುವುದಾಗಲಿ ಅಷ್ಟು ಸಮಂಜಸವಾಗಲಾರದು. ಯಾಕೆಂದರೆ ಅದನ್ನು ಸಮರ್ಥಿಸುವ ಯಾವುದೇ ಸ್ಪಷ್ಟ ಆಧಾರಗಳಿಲ್ಲ. ಇಲ್ಲಿ ಕೇವಲ ಮೌಖಿಕ ಆಕರಗಳ ಮೇಲೆ ಈ ಗಿಣಿಗೇರಿ ಎಂಬ ಗ್ರಾಮನಾಮವನ್ನು ಬಳಸಲಾಗಿದೆ.

ಇಂತಹ ಅಭೂತಪೂರ್ವ ಇತಿಹಾಸವನ್ನು ಹೊಂದಿರುವ ಈ ಗಿಣಿಗೇರಿ ಕೆರೆಯು ಆಕಡೆ–ಈಕಡೆ ಒತ್ತುವರಿಯಾಗಿ, ಕಸಕಡ್ಡಿಗಳಿಂದ, ಮುಳ್ಳುಕಂಟಿಗಳಿಂದ, ಹೂಳಿನಿಂದ ತುಂಬಿತ್ತು. ಅದರಲ್ಲಿ ನೀರಿಗಿಂತ ಹೆಚ್ಚು ಮಣ್ಣು, ಗಿಡ–ಗಂಟೆಗಳಿಂದಲೇ ತುಂಬಿಹೋಗಿತ್ತು. ಅದನ್ನರಿತ ಕೊಪ್ಪಳದ ಸಂಸ್ಥಾನ ಶ್ರೀ ಗವಿಮಠದ ಪರಮಪೂಜ್ಯರಾದ ಶ್ರೀ ಅಭಿನವ ಗವಿಸಿದ್ಧೇಶ್ವರ ಮಹಾಸ್ವಾಮಿಗಳು ಅದರ ಪುನರುಜ್ಜೀವನ ಕಾರ್ಯ ಮಾಡಿದರು. ಅದಕ್ಕೆ ಶ್ರೀಗವಿಮಠದ ಭಕ್ತಸಮೂಹ, ಸ್ಥಳೀಯರು, ಸರಕಾರ ಈ ಸತ್ಕಾರ್ಯಕ್ಕೆ ಕೈಜೋಡಿಸಿದರು. ಶ್ರೀಗಳ ಈ ಮಹತ್ವಪೂರ್ಣ ಕಾರ್ಯದಿಂದ ಈ ವರ್ಷ 2022ರಲ್ಲಿ ಕೆರೆ ತುಂಬಿ ಕೋಡಿ ಹರಿದು ಜನರಲ್ಲಿ ಮಂದಹಾಸ ಮೂಡಿ ಹರ್ಷ ವ್ಯಕ್ತಪಡಿಸಿ ಶ್ರೀಗಳಿಗೆ ನಮನ ಸಲ್ಲಿಸಿದ್ದಾರೆ. ಇಲ್ಲಿನ ಸ್ಥಳೀಯರು ಅಭಿಪ್ರಾಯ ಪಡುವಂತೆ ಸುಮಾರು 15 ವರ್ಷಗಳ ನಂತರ ಈ ಗಿಣಿಗೇರಿ ಕೆರೆಯು ಮೈದುಂಬಿ ಹರಿಯುತ್ತಿರುವದು ಸಂತಸ ತಂದಿದೆ ಎಂದಿದ್ದಾರೆ. ಇಂತಹ ಸದುದ್ದೇಶದಿಂದ ಕೂಡಿದ ಮಹತ್ಕಾರ್ಯಗಳಿಗೆ ಪ್ರಕೃತಿಯೂ ಸಹಕರಿಸುತ್ತಿದೆ ಎನ್ನುವದಕ್ಕೆ ಈ ವರ್ಷ ಸಮೃದ್ಧವಾಗಿ ಸುರಿದ ಮಳೆಯೇ ಸಾಕ್ಷಿ ಎನ್ನಬಹುದು. ಮುಂದುವರೆದು ತುಂಬಿದ ಈ ಕೆರೆಯು ನೀರು ಸದುಪಯೋಗವಾಗುವ ಮೂಲಕ ಎಲ್ಲರ ಶ್ರಮ ಸಾರ್ಥಕವಾಗಲಿ ಎಂಬುದು ನಮ್ಮ ಸದಾಶಯವಾಗಿದೆ.

**ಆಕರ ಗ್ರಂಥಗಳು :–**


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಡಾ. ಜಾಜಿ ದೇವೇಂದ್ರಪ್ಪ, ಸ್ಥಳನಾಮಗಳು; ತೌಲನಿಕ ಅಧ್ಯಯನ (ಮೂರನೆ ಮುದ್ರಣ), ಎಸ್.ಎಲ್.ಎನ್. ಪಬ್ಲಿಕೇಷನ್, ಬೆಂಗಳೂರು–2018
3) ಗುರುಮೂರ್ತಿ ಪೆಂಡಕೂರು, ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–2006


* * * * *

# ವಿಶ್ವ ಪಾರಂಪರಿಕ ತಾಣಗಳ ತಾತ್ಕಾಲಿಕ ಪಟ್ಟಿಯಲ್ಲಿ ಹಿರೇಬೆಣಕಲ್‌ನ ಶಿಲಾಸಮಾಧಿಗಳು

ಮೊನ್ನೆ ವಿಶ್ವಸಂಸ್ಥೆಯ UNESCO (ಯುನೆಸ್ಕೋ) ಅಂಗ ಸಂಸ್ಥೆಯು ವಿಶ್ವಪಾರಂಪರಿಕ ತಾಣಗಳ ತಾತ್ಕಾಲಿಕ ಪಟ್ಟಿಯನ್ನು ಬಿಡುಗಡೆ ಮಾಡಿದೆ. ಭಾರತೀಯ ಪುರಾತತ್ವ ಮತ್ತು ಸರ್ವೇಕ್ಷಣಾ ಇಲಾಖೆಯಿಂದ ಭಾರತದ ಒಂಬತ್ತು ಪ್ರಮುಖ ಸ್ಥಳಗಳನ್ನು ಗುರುತಿಸಿ UNESCO(ಯುನೆಸ್ಕೋ) ಸಂಸ್ಥೆಗೆ ಸಲ್ಲಿಸಲಾಗಿತ್ತು. ಅದರಲ್ಲಿ ಆರು ಪ್ರಮುಖ ಸ್ಥಳಗಳಿಗೆ ಮಾತ್ರ ತಾತ್ಕಾಲಿಕ ಮಾನ್ಯತೆಯನ್ನು ನೀಡಿದೆ. ಇದರೊಂದಿಗೆ ಈಗಾಗಲೇ ಭಾರತದಲ್ಲಿದ್ದ 30 ವಿಶ್ವಪಾರಂಪರಿಕ ಸ್ಥಳಗಳ ಜೊತೆಗೆ ಈಗಿನ ಆರು ತಾಣಗಳನ್ನು ಸೇರಿಸಿ ಒಟ್ಟು 36 ತಾಣಗಳಿಗೆ ಮಾನ್ಯತೆ ನೀಡಿದಂತಾಗುತ್ತದೆ. ಪ್ರಸ್ತುತ ಆ ಆರು ತಾಣಗಳನ್ನು ಹೆಸರಿಸುವುದಾದರೆ, ಮಧ್ಯಪ್ರದೇಶದ ಎರಡು ಸ್ಥಳಗಳಾದ ಸಾತ್ಪುರ ಹುಲಿ ಸಂರಕ್ಷಣಾ ಪ್ರದೇಶ ಹಾಗೂ ನರ್ಮದಾ ನದಿ ಕಣಿವೆಯ ಬೇಡಾಘಾಟ್–ಲಾಮ್ತಾಘಾಟ್, ಉತ್ತರ ಪ್ರದೇಶದ ವಾರಣಾಸಿಯ ಗಂಗಾನದಿಯ ದಡದಲ್ಲಿರುವ ಘಾಟ್‌ಗಳು, ಮಹಾರಾಷ್ಟ್ರದ ಮರಾಠಾ ಮಿಲಿಟರಿ ಪಾರಂಪರಿಕ ಕಟ್ಟಡದ ವಾಸ್ತುಶಿಲ್ಪ, ತಮಿಳುನಾಡಿನ ಕಾಂಚಿಪುರಂನ ದೇವಾಲಯಗಳು ಹಾಗೂ ಕರ್ನಾಟಕದ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹಿರೇಬೆಣಕಲ್‌ನ ಬೆಟ್ಟದ ಮೇಲಿರುವ ಶಿಲಾಸಮಾಧಿಗಳು. ಹೀಗೆ ಒಟ್ಟು ಆರು ಪ್ರಮುಖ ಸ್ಥಳಗಳಿಗೆ ತಾತ್ಕಾಲಿಕ ಮಾನ್ಯತೆಯನ್ನು ನೀಡಿದೆ. ಮುಂದೆ ಅವುಗಳಿಗೆ ಖಾಯಂ ಆಗಿ ವಿಶ್ವಪಾರಂಪರಿಕ ಸ್ಥಾನ–ಮಾನ ನೀಡಿದರೆ ಅವುಗಳ ಘನತೆಯನ್ನು ವಿಶ್ವಕ್ಕೆ ಪರಿಚಯಿಸಿದಂತಾಗುತ್ತದೆ.

ಕರ್ನಾಟಕದ ಹಿರೇಬೆಣಕಲ್ ಶಿಲಾಸಮಾಧಿಗಳು ವಿಶ್ವಪರಂಪರೆಯ ಪಟ್ಟಿಯಲ್ಲಿ ಸ್ಥಾನ ಪಡೆದರೆ, ಕರ್ನಾಟಕದಲ್ಲಿ ಒಟ್ಟು ಇಲ್ಲಿಯವರೆಗೆ ನಾಲ್ಕು ಪ್ರಮುಖ ಸ್ಥಳಗಳು ವಿಶ್ವಮಾನ್ಯತೆಯನ್ನು ಪಡೆದಂತಾಗುತ್ತದೆ. 1986ರಲ್ಲಿ ಹಂಪಿ, 1987ರಲ್ಲಿ ಪಟ್ಟದಕಲ್ಲು, 2012ರಲ್ಲಿ ಕೇರಳ, ಕರ್ನಾಟಕ ಹಾಗೂ ಮಹಾರಾಷ್ಟ್ರದ ಗಡಿಯಲ್ಲಿ ವಿಶಾಲವಾಗಿ ಹರಡಿಕೊಂಡಿಕೊಂಡಿರುವ ಪಶ್ಚಿಮ ಘಟ್ಟಗಳು ಮತ್ತು ಪ್ರಸ್ತುತವಾಗಿ 2021ರಲ್ಲಿ ಹಿರೇಬೆಣಕಲ್ ಬೆಟ್ಟದ ಮೇಲಿರುವ ಶಿಲಾಸಮಾಧಿಗಳು. ಹೀಗೆ ಕರ್ನಾಟಕದ ಒಟ್ಟು ನಾಲ್ಕು ಪ್ರಮುಖ ಸ್ಥಳಗಳಿಗೆ ವಿಶ್ವಪಾರಂಪರಿಕ ಸ್ಥಾನ–ಮಾನ ದೊರಕುವುದು ಅಭಿಮಾನದ ಸಂಗತಿ. ಮಧ್ಯಪ್ರದೇಶ ಮತ್ತು ಮಹಾರಾಷ್ಟ್ರದಲ್ಲಿ ತಲಾ ಐದು ಸ್ಥಳಗಳಿಗೆ ಮಾನ್ಯತೆ ದೊರಕಿದರೆ; ತಮಿಳುನಾಡು ಮತ್ತು ಕರ್ನಾಟಕದ ಪ್ರಮುಖ ನಾಲ್ಕು ಸ್ಥಳಗಳು ವಿಶ್ವಪಾರಂಪರಿಕ ಪಟ್ಟಿಯಲ್ಲಿ ಸ್ಥಾನ ಪಡೆಯತ್ತಿರುವುದು ಅಭಿಮಾನದ ಸಂಗತಿಯಾಗಲಿದೆ.

ಬೆಣಕಲ್ ಎಂಬ ಗ್ರಾಮನಾಮದ ಮೇಲೆ ಕರ್ನಾಟಕದಲ್ಲಿ ಅನೇಕ ಸ್ಥಳಗಳನ್ನು ಕಾಣಬಹುದಾಗಿದೆ. ಅಷ್ಟೇ ಅಲ್ಲಾ ಕೊಪ್ಪಳ ಜಿಲ್ಲೆಯಲ್ಲಿಯೇ ನಾಲ್ಕು ಗ್ರಾಮಗಳು ದೊರೆಯುತ್ತವೆ. ಜಿಲ್ಲೆಯ ಕುಕನೂರು ತಾಲೂಕಿನಲ್ಲಿ ಒಂದು ಬೆಣಕಲ್ ಗ್ರಾಮವಿದ್ದರೆ; ಗಂಗಾವತಿ ತಾಲ್ಲೂಕಿನಲ್ಲೇ ಮೂರು ಬೆಣಕಲ್ ಗ್ರಾಮಗಳಿವೆ. ಹಿರೇಬೆಣಕಲ್, ಚಿಕ್ಕಬೆಣಕಲ್ ಹಾಗೂ ಹೊಸಹಿರೇಬೆಣಕಲ್ ಎಂಬ ಮೂರು ಗ್ರಾಮಗಳನ್ನು ಕಾಣಬಹುದಾಗಿದೆ. ಗಂಗಾವತಿ ತಾಲ್ಲೂಕಿನಲ್ಲಿರುವ ಈ ಮೂರೂ ಗ್ರಾಮಗಳು ಸುಮಾರು 4–5 ಕಿ.ಮೀ ಸುತ್ತಳತೆಯಲ್ಲೇ ಹರಡಿಕೊಂಡಿವೆ. ಜಿಲ್ಲೆಯಲ್ಲಿರುವ ಆ ಎಲ್ಲಾ ಬೆಣಕಲ್ ಗ್ರಾಮಗಳಲ್ಲಿ ವಿಶ್ವಪಾರಂಪರಿಕ ಪಟ್ಟಿಯಲ್ಲಿ ಸ್ಥಾನ ಪಡೆಯುತ್ತಿರುವ ಗ್ರಾಮವೆಂದರೆ ಗಂಗಾವತಿ ತಾಲ್ಲೂಕಿನ ಹಿರೇಬೆಣಕಲ್ ಗ್ರಾಮ ಎನ್ನಬಹುದು. ಬಹುಶಃ ಪ್ರಾಚೀನ ಕಾಲದಲ್ಲಿ ಆದಿಮಾನವರು ಬೆಣಕಲ್ ಬೆಟ್ಟದ ಮೇಲೆ ವಾಸವಾಗಿದ್ದರು. ನಂತರ ಕಾಲ ಬದಲಾದಂತೆ ಬೆಟ್ಟದ ಮೇಲಿಂದ ಕೆಳಗೆ ಬಂದು ನೆಲಸಿದ್ದಾರೆ. ಪ್ರಾಕೃತಿಕವಾಗಿ ಮತ್ತು ಬೇರೆ–ಬೇರೆ ಕಾರಣಗಳಿಂದಾಗಿ ಈ ಬೆಣಕಲ್ ಗ್ರಾಮದಿಂದ ಸುಮಾರು 2–3 ಕಿ.ಮೀ ದೂರದಲ್ಲಿ ಹೋಗಿ ನೆಲೆಸಿದ್ದಾರೆ. ಆ ಗ್ರಾಮವು ಚಿಕ್ಕಬೆಣಕಲ್ ಗ್ರಾಮವಾಗಿ, ಮೂಲದ್ದು ಹಿರೇಬೆಣಕಲ್ ಗ್ರಾಮವಾಗಿರಬೇಕು. ಅದಕ್ಕೆ ಸರಿಯಾದ ಸಾಕ್ಷ್ಯಾಧಾರಗಳು ದೊರೆಯುತ್ತಿಲ್ಲಾ. ರಾಜ್ಯದಲ್ಲಿ ಈ ರೀತಿಯ ಬಹುತೇಕ ಗ್ರಾಮಗಳನ್ನು ಕಾಣಬಹುದಾಗಿದೆ. ಆದರೂ ಹಿರೇಬೆಣಕಲ್ ಮತ್ತು ಚಿಕ್ಕಬೆಣಕಲ್ ಎರಡೂ ಗ್ರಾಮಗಳು ಪ್ರಾಚಿನತೆಯನ್ನು ಹೊಂದಿದ ಗ್ರಾಮಗಳಾಗಿವೆ. ತೀರಾ ಇತ್ತೀಚಿಗೆ ಹಿರೇಬೆಣಕಲ್ ಗ್ರಾಮದಿಂದ ಕೆಲ ಗ್ರಾಮಸ್ಥರು ಸ್ಥಳಾಂತರಗೊಂಡು ಕೊಪ್ಪಳ–ಗಂಗಾವತಿ ಮುಖ್ಯ ರಸ್ತೆಯ ಹತ್ತಿರ ಹೊಸಹಿರೇಬೆಣಕಲ್ ಗ್ರಾಮವನ್ನು ನಿರ್ಮಿಸಿಕೊಂಡಿದ್ದಾರೆ.

ಈ ಹಿರೇಬೆಣಕಲ್ ಗ್ರಾಮವು ಕೊಪ್ಪಳ ಜಿಲ್ಲಾ ಕೇಂದ್ರದಿಂದ ಸುಮಾರು 40 ಕಿ.ಮೀ ದೂರದಲ್ಲಿದ್ದರೆ; ತಾಲ್ಲೂಕು ಕೇಂದ್ರವಾದ ಗಂಗಾವತಿಯಿಂದ ಸುಮಾರು 9–10 ಕಿ.ಮೀ ಅಂತರದಲ್ಲಿದೆ. ಕೊಪ್ಪಳ–ಗಂಗಾವತಿ ಮುಖ್ಯ ರಸ್ತೆಯಿಂದ ಸುಮಾರು 3–4 ಕಿ.ಮೀ ದೂರದಲ್ಲಿ ಈ ಗ್ರಾಮವಿದೆ. ಈ ಹಿರೇಬೆಣಕಲ್ ಗ್ರಾಮದಿಂದ ಸುಮಾರು 1–2 ಕಿ.ಮೀ ದೂರದಲ್ಲಿ ವಿಶಾಲವಾಗಿ ಹರಡಿಕೊಂಡಿರುವ ಎತ್ತರವಾದ ಬೆಟ್ಟದಲ್ಲೇ ಪ್ರಾಗೈತಿಹಾಸದ ಶಿಲಾಸಮಾಧಿಗಳಿವೆ. ಅಲ್ಲಿ ಸುಮಾರು 600ಕ್ಕೂ ಅಧಿಕ ಶಿಲಾಸಮಾಧಿಗಳಿದ್ದವೆಂದು ಹೇಳಲಾಗುತ್ತಿದೆ. ಆದರೆ ಪ್ರಸ್ತುತವಾಗಿ ಸುಮಾರು 500 ಶಿಲಾಸಮಾಧಿಗಳು ಮಾತ್ರ ಉಳಿದಿರಬಹುದೆಂದು ಅಂದಾಜಿಸಲಾಗಿದೆ. ಉಳಿದಿರುವ ಅವುಗಳಲ್ಲಿಯೇ ಬಹುತೇಕ ಬಿದ್ದುಹೋದ, ಒಡೆದ, ಹಾಳಾದ ವಿನಾಶದ ಸ್ಥಿತಿಯಲ್ಲಿರುವಂತೆ ಆ ಶಿಲಾಸಮಾಧಿಗಳು ಕಂಡುಬರುತ್ತಿವೆ.

ಪ್ರಾಚೀನ ಕಾಲದಲ್ಲಿ ಆದಿಮಾನವರು ಈ ಬೆಟ್ಟದ ಮೇಲೇಯೇ ವಾಸವಾಗಿದ್ದರೆಂಬುದಕ್ಕೆ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಅವರು ವಾಸವಾಗಿದ್ದ ಗುಹೆಗಳನ್ನು ಇಂದಿಗೂ ಸಹ ಕಾಣಬಹುದಾಗಿದೆ. ಕ್ರಿ. ಪೂ ಸುಮಾರು 2000 ರಿಂದ 1000ಕ್ಕೆ ಸಂಬಂಧಿಸಿದ ಶಿಲಾ–ತಾಮ್ರಯುಗಕ್ಕೆ ಸಂಬಂಧಪಟ್ಟ ಸಂಸ್ಕೃತಿಯ ಬೂದಿದಿಬ್ಬ, ಗುಹಾಚಿತ್ರಗಳು ದೊರಕಿವೆ. ಇವುಗಳಲ್ಲದೇ ಆದಿಮಾನವರು ಉಪಯೋಗಿಸುತ್ತಿದ್ದ ಮಡಕೆ ಭಾಗದ ಚೂರುಗಳು, ನೀಳಚಕ್ಕೆ, ಶಿಲಾಗಟ್ಟಿಗಳು ದೊರಕಿವೆ. ವಿಶೇಷವಾಗಿ ಅನೇಕ ಗವಿವರ್ಣ ಚಿತ್ರಗಳನ್ನೂ ಸಹ ಕಾಣಬಹುದಾಗಿದೆ. 1925ರಲ್ಲಿ ಈ ಗವಿ ಚಿತ್ರಗಳನ್ನು ಮೊಟ್ಟ ಮೊದಲ ಬಾರಿಗೆ ಶೋಧಿಸಿದವರು ಆಂಗ್ಲ ಭೂರ್ಗಭಶಾಸ್ತ್ರಜ್ಞರಾದ ಲಿಯೋನಾರ್ಡ್‌ಮನ್ ಅವರು. ನಂತರ 1999 ರಲ್ಲಿ ಪುರಾತತ್ವ ಸಂಶೋಧಕರಾದ ಡಾ. ಅ.ಸುಂದರ ಅವರು ಸಂಶೋಧಿಸಿದ್ದಾರೆ. ಆನಂತರದಲ್ಲಿ ಡಾ.ಶರಣಬಸಪ್ಪ ಕೋಲ್ಕಾರ್ ಅವರೂ ಸಹ ಈ ಪರಿಸರದಲ್ಲಿರುವ ಅನೇಕ ಗವಿವರ್ಣ ಚಿತ್ರಗಳ ಮೇಲೆ ವಿಸ್ತಾರವಾದ ಅಧ್ಯಯನ ಮಾಡಿ, ಅವುಗಳನ್ನು ಹೊರಜಗತ್ತಿಗೆ ಪರಿಚಯಿಸುವ ಕೆಲಸಮಾಡಿದ್ದಾರೆ. ಈ ಗವಿಗಳಲ್ಲಿ ಆದಿಮಾನವರು ತಮ್ಮ ಸಾಂಸ್ಕೃತಿಕ ಬದುಕು ಈ ಚಿತ್ರಗಳ ಮೂಲಕ ಅನಾವರಣಗೊಳಿಸಿದ್ದಾರೆ. ಅವುಗಳಲ್ಲಿ ಬಹಳ ಮುಖ್ಯವಾಗಿ ಬೇಟೆಯಾಡುವ, ನೃತ್ಯಮಾಡುವ ಮುಂತಾದ ಜೀವನ ಶೈಲಿಯ ಅನಾವರಣದ ಚಿತ್ರಗಳಾಗಿವೆ. ಅಲ್ಲದೆ ಹಂದಿ, ಹುಲಿ, ಗೂಳಿ, ನವಿಲು ಮುಂತಾದ ಪ್ರಾಣಿಗಳ ಚಿತ್ರಗಳನ್ನೂ ಸಹ ಬಿಡಿಸಿ ಅವರು ತಮ್ಮ ಕಲಾವಂತಿಕೆಯನ್ನು ಮೆರೆದಿದ್ದಾರೆ. ಅವು ಬೃಹತ್ ಆದಿಶಿಲಾಯುಗಕ್ಕೆ ಸಂಬಂಧಿಸಿದವುಗಳಾಗಿರುವುದರಿಂದ ಇವುಗಳ ಕಾಲ ಕ್ರಿ.ಪೂ. ಸುಮಾರು 1000 ರಿಂದ 500 ವರ್ಷಗಳಕ್ಕೂ ಹಿಂದಿನವುಗಳೆಂದು ಸಂಶೋಧಕರು ಊಹಿಸಿದ್ದಾರೆ.

ಈ ಗ್ರಾಮವನ್ನು ಹಿರೇಬೆಣಕಲ್, ಹಿರೇಬೆಣಕಲ್ಲು ಎಂಬ ಹೆಸರುಗಳಿಂದ ಸಂಭೋದಿಸಲಾಗುತ್ತಿದೆ. ಆದರೆ ಶಾಸನಗಳಲ್ಲಿ ಈ ಗ್ರಾಮವನ್ನು 'ಬೆಣ್ಣೆಕಲ್ಲು' ಎಂದು ಉಲ್ಲೇಖಿಸಲಾಗಿದೆ. ಇದೇ ಗ್ರಾಮದಲ್ಲಿ ದೊರೆತ ಕ್ರಿ.ಶ ಸುಮಾರು 17ನೇ ಶತಮಾನದ ಲಿಪಿಯುಳ್ಳ ಶಾಸನದಲ್ಲಿ ಬೆಣ್ಣೆಕಲ್ಲಿನಲ್ಲಿದ್ದ ಯಾವುದೋ ಒಂದು ದೇವರ ಮಠಕ್ಕೆ ದಾನ ನೀಡಿದಂತೆ ತಿಳಿಸುತ್ತದೆ. ಅದೇ ರೀತಿ ವಿಪ್ರದಲ್ಲಿ ದೊರೆತ ಕ್ರಿ.ಶ. 1059ರ ಶಾಸನದಲ್ಲಿ ಒಂದನೇ ಸೋಮೇಶ್ವರನು ಬೆಣ್ಣೆಕಲ್ಲು ನೆಲೆವೀಡಿನಲ್ಲಿದ್ದಾಗ ವಿಪ್ರದ ಶಿವ ದೇವಾಲಯಕ್ಕೆ ದಾನ ನೀಡಿದ ವಿವರವಿದೆ. ಪ್ರಸ್ತುತ ಶಾಸನದಿಂದ ಈ ಬೆಣ್ಣೆಕಲ್ಲು ಗ್ರಾಮವು ಪ್ರಾಚೀನ ಕಾಲದಲ್ಲಿ ನೆಲೆವೀಡಾಗಿತ್ತೆಂದು ತಿಳಿದುಬರುತ್ತದೆ. ಅರಸರು, ಮಂತ್ರಿ–ಮಾಂಡಳಿಕರು ಪ್ರವಾಸದ ಸಂದರ್ಭದಲ್ಲಿ ಉಳಿದುಕೊಳ್ಳುವ ತಾಣಗಳನ್ನು ಸಾಮಾನ್ಯವಾಗಿ ನೆಲೆವೀಡು ಅಥವಾ ನೆಲೆಬೀಡು ಎಂಬ ಉಲ್ಲೇಖಗಳು ಶಾಸನದಿಂದ

ತಿಳಿದುಬರುತ್ತದೆ. ಹೀಗಾಗಿ ಚಾಲುಕ್ಯದೊರೆ ಸೋಮೇಶ್ವರನು ಈ ಹಿರೇಬೆಣಕಲ್ ಗ್ರಾಮದಲ್ಲಿ ಉಳಿದಿದ್ದನೆಂದು ಪ್ರಸ್ತುತ ಶಾಸನದಿಂದ ತಿಳಿದುಬರುತ್ತದೆ. ಈ ಗ್ರಾಮವನ್ನು ಶಾಸನದಲ್ಲಿ ಬೆಣ್ಣೆಕಲ್ಲು ಎಂದು ಸಂಭೋದಿಸಿರುವುದರಿಂದ ಇಲ್ಲಿನ ಕಲ್ಲುಗಳು ಬೆಣ್ಣೆಯಂತೆ ಇದ್ದಿರಬೇಕು ಎಂದೆನಿಸುತ್ತದೆ. ಆಕೃತಿಗೆ ತಕ್ಕಂತೆ ಇಲಿನ ಕಲ್ಲುಗಳು ಒಗ್ಗುತ್ತಿರಬೇಕು, ಆದ್ದರಿಂದಲೇ ಇಲ್ಲಿ ಕಲ್ಲಿನಲ್ಲಿ ಆಕೃತಿ–ಆಕೃತಿಯಾಗಿ ನೂರಾರು ಶಿಲಾಸಮಾಧಿಗಳನ್ನು ನಿರ್ಮಿಸಿರಬೇಕು ಎನಿಸುವುದು ಸಹಜ. ಬಹುತೇಕವಾಗಿ ಗ್ರಾಮನಾಮಗಳ ಹೆಸರುಗಳು ಪ್ರಾಕೃತಿಕವಾಗಿಯೇ ಇರುವ ಬೆಟ್ಟ–ಗುಡ್ಡ, ಹಳ್ಳ–ನದಿಗಳ, ತಗ್ಗು–ದಿನ್ನೆಗಳ ಮೇಲೆ ಗುರುತಿಸಿಕೊಳ್ಳುತ್ತವೆ ಮತ್ತು ಹಾಗೇಯೇ ಕರೆಸಿಕೊಳ್ಳುತ್ತವೆ. ಹೀಗಾಗಿಯೇ ಈ ಗಾಮದ ಹೆಸರು ಬೆಣ್ಣೆಕಲ್ಲು ಮತ್ತು ಆ ಕಲ್ಲುಗಳಿಂದಲೇ ಶಿಲಾಸಮಾಧಿಗಳ ನಿರ್ಮಾಣದ ಕೆಲಸ ಸಹಜವಾಗಿ ನಡೆದುಕೊಂಡು ಬಂದಿರಬೇಕು ಎನಿಸುತ್ತದೆ.

ಈ ಹಿರೇಬೆಣಕಲ್ ಗ್ರಾಮದ ಬೆಟ್ಟದ ಮೇಲೆ ಸುಮಾರು 500 ಶಿಲಾಸಮಾಧಿಗಳು ಉಳಿದಿರಬಹುದೆಂದು ಅಂದಾಜಿಸಲಾಗಿದೆ. ಉಳಿದವುಗಳಲ್ಲಿಯೂ ಸಹ ಬಹುತೇಕ ನಾಶವಾದ ಸ್ಥಿತಿಯಲ್ಲಿರುವಂತೆ ಕಂಡುಬಂದರೂ ಸಹ ಅವು ತಮ್ಮ ಒಡಲೊಳಗೆ ಇಟ್ಟುಕೊಂಡಿರುವ ಇತಿಹಾಸವನ್ನು ಸಾರಿ ಸಾರಿ ಹೇಳುತ್ತಿವೆ. ಈ ಶಿಲಾಸಮಾಧಿಗಳನ್ನು ಕಲ್ಲುಗೋರಿಗಳು, ಕಲ್ಗೋರಿಗಳು, ಕಲ್‌ಗೋರಿಗಳು, ಮೋರೆರ್ ಮನೆಗಳು, ಮೌರೆರ್ ಮನೆಗಳು, ಮೌರ್ಯರ ಮನೆಗಳು, ಡಾಲ್ಮನ್ಸ್‌ಗಳು, ಆಂತ್ರೋಪಮೆಟ್ರಿಕ್ ಎಂಬ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ.

ಈ ಶಿಲಾಸಮಾಧಿಗಳು ವಾಸ್ತವದಲ್ಲಿ ಸತ್ತವರ ಸಮಾಧಿಗಳೇ ಹೌದು. ಪ್ರಾಚೀನ ಕಾಲದಲ್ಲಿ ಮೋರೆರ್ ಎಂಬ ಒಂದು ಬುಡಕಟ್ಟು ಸಮುದಾಯವಿತ್ತು. ಅವರು ಸತ್ತ ಬಳಿಕ ಇಂತಹ ಬೃಹತ್ ಶಿಲಾಸಮಾಧಿಗಳನ್ನು ನಿರ್ಮಿಸುತ್ತಿದ್ದರು. ಅದಕ್ಕಾಗಿಯೇ ಆ ಸಮಾಧಿಗಳಿಗೆ 'ಮೋರೇರ್' ಸಮಾಧಿಗಳು ಅಥವಾ 'ಮೋರೇರ್' ಮನೆಗಳು ಎಂದು ಕರೆಯಲಾಗುತ್ತಿದೆ. ಆದಿಕಾಲದಲ್ಲಿ ಮಾನವರು ಸತ್ತಬಳಿಕ ವಿಧಿವತ್ತಾಗಿ ಇಲ್ಲಿ ಶವಸಂಸ್ಕಾರ ಮಾಡುತ್ತಿದ್ದರು. ಅವರು ಸತ್ತಬಳಿಕ ಅವರ ಆತ್ಮಗಳು ಇಲ್ಲೇ ಉಳಿದುಕೊಳ್ಳುತ್ತವೆ, ಇಲ್ಲಿಯೇ ತಿರುಗಾಡುತ್ತಿರುತ್ತವೆ ಎಂದು ಭಾವಿಸುತ್ತಿದ್ದರು. ಅದಕ್ಕಾಗಿಯೇ ಸತ್ತವರಿಗೆ ಸುಸಜ್ಜಿತ ಮತ್ತು ಸುವ್ಯವಸ್ಥಿತವಾಗಿ ಕಲ್ಲಿನ ಶಿಲಾಸಮಾಧಿಗಳನ್ನು ನಿರ್ಮಿಸುತ್ತಿದ್ದರು. ಸಂಶೋಧಕರಾದ ಡಾ.ಶರಣಬಸಪ್ಪ ಕೋಲ್ಕಾರ್ ಅವರ ಸಂಶೋಧನೆಯಂತೆ ಇಲ್ಲಿ ಎಂಟು ರೀತಿಯ ಶಿಲಾಸಮಾಧಿಗಳನ್ನು ಕಾಣಬಹುದಾಗಿದೆ. ಅವು ಕೋಣೆಯಂತೆ (ವೃತ್ತಾಕಾರದಲ್ಲಿರುತ್ತವೆ) ಕಂಡಿ (ಕಿಂಡಿ) ಸಹಿತ ಅಥವಾ ರಹಿತ ಪೆಟ್ಟಿಗೆಯಾಕಾರದ ಸಮಾಧಿಗಳು ಬಹು ಸಂಖ್ಯೆಯಲ್ಲಿವೆ. ಅವು ಸುಮಾರು 25 ಅಡಿಯ ಅಸಮಭುಜ ಶಿಲಾಕೋಣೆಗಳು ಅಚ್ಚರಿಯ ನಿರ್ಮಿತಿಗಳಾಗಿವೆ. ನೈಸರ್ಗಿಕ

ದೊಡ್ಡ ಬಂಡೆಯ ಹಲಗೆಗಳನ್ನು ಚಚ್ಚೌಕಾರದಲ್ಲಿ ಒಂದಕ್ಕೊಂದು ಪೂರಕವಾಗಿ ನಿಲ್ಲಿಸಿ ಮೇಲೆ (ಚತ್ತು) ಚಪ್ಪಡಿಯ ಕಲ್ಲನ್ನು ಹಾಕಲಾಗಿದೆ. ಇವು ಸುಮಾರು 9 ಅಡಿ ಎತ್ತರವಾಗಿ ನಿರ್ಮಾಣಗೊಂಡಿವೆ ಎಂದು ಡಾ.ಶರಣಬಸಪ್ಪ ಕೋಲ್ಕಾರ್ ಅವರು ಅಭಿಪ್ರಾಯಪಟ್ಟಿದ್ದಾರೆ.

ಇಲ್ಲಿರುವ ಶಿಲಾಸಮಾಧಿಗಳು ಸುಮಾರು 7–8 ಅಡಿಯ ಚಚ್ಚೌಕಾರದಲ್ಲಿ ನಿರ್ಮಾಣಗೊಂಡ ಮನೆಯಂತೆ ಕಾಣುತ್ತವೆ. ಅದರಲ್ಲಿ ಕೆಲವು ಒಂದು, ಎರಡು ಮತ್ತು ಮೂರು ಚಪ್ಪಟೆ ಬಂಡೆಗಳಿಂದ ನಿಲಾಕಾರದಲ್ಲಿ ನಿಂತಿದ್ದರೆ; ಇನ್ನು ಕೆಲವು ಸುತ್ತಲೂ ನಾಲ್ಕು ನೀಳ ಕಲ್ಲುಗಳಿಂದ ನಿಂತು, ಮೇಲೆ ಒಂದು ಹಾಸುಬಂಡೆ (ಚತ್ತು) ಇರುವುದು ಕಂಡುಬರುತ್ತದೆ. ಅವುಗಳನ್ನು ನೋಡಿದರೆ ಸಹಜವಾಗಿಯೇ ಅವು ಮನೆಯ ಆಕಾರದಂತೆ ಕಂಡುಬರುತ್ತವೆ. ಕೆಲವೊಂದು ಸಮಾಧಿಗಳು ನಿಲಾಕಾರದಲ್ಲಿ ನಿಲ್ಲಿಸಿದ ನಿಲಾಬಂಡೆಗಳಲ್ಲಿ ಸುಮಾರು 1–2 ಅಡಿಯ ವೃತ್ತಾಕಾರದಲ್ಲಿ ಕಿಂಡಿ (ಕಂಡಿ)ಗಳನ್ನು ಕೊರೆಯಲಾಗಿದೆ. ಅವರು ಸತ್ತ ಬಳಿಕ ಶವಸಂಸ್ಕಾರದ ನಂತರ ಅವರ ಆತ್ಮಗಳು ಈ ಕಿಂಡಿಗಳ ಮೂಲಕವೇ ಹೊರಬಂದು ತಮ್ಮ ಇಷ್ಟ ಕಾಮನೆಗಳನ್ನು ಈಡೇರಿಸಿಕೊಳ್ಳುತ್ತಿದ್ದವೆಂದು ನಂಬಲಾಗಿತ್ತು. ಆದ್ದರಿಂದಲೇ ಆದಿಮಾನವರು ಇಂತಹ ಶಿಲಾಸಮಾಧಿಗಳನ್ನು ನಿರ್ಮಿಸಿ ಅವುಗಳಲ್ಲಿ ಕಿಂಡಿಗಳನ್ನು ಬಿಡುತ್ತಿದ್ದರು. ಆ ಶಿಲಾಸಮಾಧಿಗಳ ಮುಂದೆ ಅವರು ಇಷ್ಟಪಡುತ್ತಿದ್ದ ವಸ್ತುಗಳನ್ನು ಇಡುತ್ತಿದ್ದರಂತೆ. ಅವರ ಆತ್ಮಗಳು ಬಂದು ಆ ವಸ್ತುಗಳನ್ನು ತಿಂದು ಹೋಗುತ್ತವೆ ಎಂದು ನಂಬಲಾಗಿದೆ. ಈ ಪದ್ಧತಿಯನ್ನು ಇಂದಿಗೂ ಸಹ ಕೆಲ ಸಮುದಾಯಗಳಲ್ಲಿ ಕಾಣಬಹುದಾಗಿದೆ. ಮೂರುದಿನದ ಕೂಳು ಎಂದು ಕರೆಯಲ್ಪಡುವ ಪದ್ಧತಿಯಲ್ಲಿ ಅವರು ಇಷ್ಟ ಪಡುತ್ತಿದ್ದ ಆಹಾರಾದಿಗಳ ವಸ್ತುಗಳನ್ನು ಸಮಾಧಿಯ ಮುಂದೆ ಇಡುವ ಸಂಪ್ರದಾಯ ಕಾಣಬಹುದಾಗಿದೆ. ಈ ನಂಬಿಕೆಗಳ ಸಂಪ್ರದಾಯವು ಸಾವಿರಾರು ವರ್ಷಗಳಿಂದಲೂ ಮುಂದುವರೆದುಕೊಂಡು ಬಂದಿರುವುದು ವಿಶೇಷ.

ಇಲ್ಲಿರುವ ಅಷ್ಟೂ ಶಿಲಾಸಮಾಧಿಗಳು ಒಂದೇ ಸಂದರ್ಭದಲ್ಲಿ ನಿರ್ಮಾಣವಾದವುಗಳಲ್ಲಾ. ಅವು ಹಂತ ಹಂತವಾಗಿ ನಿರ್ಮಾಣವಾದ ಸ್ಮಾರಕಗಳಾಗಿವೆ. ಅವು ಯಾವ ಕಾಲದಲ್ಲಿ ನಿರ್ಮಾಣವಾದವೆಂದು ನಿಖರವಾಗಿ ಹೇಳಲು ಸಾಧ್ಯವಾಗಿಲ್ಲ. ಆದರೂ ಸಂಶೋಧಕರು ಹೇಳುವಂತೆ ಅವು ಕ್ರಿ.ಪೂ ಸುಮಾರು 1200 ರಿಂದ 500ರ ಅವಧಿಯಲ್ಲಿ ನಿರ್ಮಾಣವಾಗಿರಬೇಕೇಂದು ಅಂದಾಜಿಸಲಾಗಿದೆ. ಆ ಬೆಟ್ಟದ ಮೇಲೆಯೇ ಆದಿಮಾನವರು ವಾಸವಾಗಿದ್ದರು. ಅವರು ಸತ್ತ ಬಳಿಕ ಅಲ್ಲಿ ವಿಧಿವತ್ತಾಗಿ ಶವ ಸಂಸ್ಕಾರ ಮಾಡಿ, ಶಿಲಾಸಮಾಧಿಗಳನ್ನು ನಿರ್ಮಿಸಿರುವುದು ತಿಳಿದುಬರುತ್ತದೆ. ಸಾವುಗಳು ಹಂತ ಹಂತವಾಗಿ ಸಂಭವಿಸಿರುವುದರಿಂದ ಸಹಜವಾಗಿಯೇ ಆ

ಶಿಲಾಸಮಾಧಿಗಳು ಹಂತ ಹಂತವಾಗಿ ನಿರ್ಮಾಣಗೊಂಡಿವೆ. ಈ ಸಮಾಧಿಗಳು ಸುಮಾರು ಒಂದು ಸಾವಿರ ವರ್ಷಗಳಕಾಲ ಒಂದೊಂದು ಸಂದರ್ಭದಲ್ಲಿ ನಿರ್ಮಾಣವಾಗಿರುವುದಂತೂ ಸತ್ಯ.

ಹಿರೇಬೆಣಕಲ್ ಗ್ರಾಮದಲ್ಲಿರುವಂತೆ ದೇಶದ ಬೇರೆ ಬೇರೆ ಭಾಗಗಳಲ್ಲಿಯೂ ಸಹ ಇಂತಹ ಶಿಲಾಸಮಾಧಿಗಳು ಕಂಡುಬರುತ್ತವೆ. ತಮಿಳುನಾಡು, ಆಂಧ್ರಪ್ರದೇಶ ಮುಂತಾದ ರಾಜ್ಯಗಳಲ್ಲಿ ಕಾಣಬಹುದಾಗಿದೆ. ಆದರೆ ಕರ್ನಾಟಕದ ಹಿರೇಬೆಣಕಲ್ ಗ್ರಾಮದಲ್ಲಿ ಇರುವಷ್ಟು ಸಂಖ್ಯೆ ದೇಶದ ಯಾವುದೇ ಭಾಗದಲ್ಲಿ ಇಲ್ಲಿಯವರೆಗೂ ಕಾಣಲು ಸಾಧ್ಯವಾಗಿಲ್ಲ. ಅಲ್ಲದೇ ಇಷ್ಟು ಬೃಹತ್ ಆಕಾರದ ಶಿಲಾಸಮಾಧಿಗಳು ಸಹ ಇಲ್ಲಿಯೇ ಕಾಣಲು ಸಾಧ್ಯ. ಹೀಗಾಗಿಯೇ ಹಿರೇಬೆಣಕಲ್ ಗ್ರಾಮದಲ್ಲಿರುವ ಶಿಲಾಸಮಾಧಿಗಳಿಗೆ ದೇಶದಲ್ಲೇ ಹೆಚ್ಚಿನ ಪ್ರಾಧಾನ್ಯತೆ ದೊರಕಿರುವುದು.

ಕೊಪ್ಪಳ ಜಿಲ್ಲೆಯ ಕೆಲ ಗ್ರಾಮಗಳಲ್ಲಿಯೂ ಸಹ ಶಿಲಾಸಮಾಧಿಗಳು ಕಂಡುಬರುತ್ತವೆ. ಚಿಕ್ಕಬೆಣಕಲ್, ಚಿಕ್ಕಮಲ್ಲಾಪುರ, ಘಟ್ಟ, ಮಳೆಮಲ್ಲೇಶ್ವರ ಪರ್ವತದ ಮೇಲೆ ಕೂಡಾ ಕಾಣಬಹುದಾಗಿದೆ. ಆ ಗ್ರಾಮಗಳಲ್ಲಿಯೂ ಸಹ ಚಿಕ್ಕ ಚಿಕ್ಕ ಗಾತ್ರದ ಮತ್ತು ಬೆರಳೆಣಿಕೆಯಷ್ಟು ಶಿಲಾಸಮಾಧಿಗಳು ಕಂಡುಬರುತ್ತಿವೆ. ಆದರೆ ಹಿರೇಬೆಣಕಲ್ ಬೆಟ್ಟದ ಮೇಲಿರುವ ಶಿಲಾಸಮಾಧಿಗಳು ಅತಿಹೆಚ್ಚು. ಹೀಗಾಗಿಯೇ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಹಿರೇಬೆಣಕಲ್ ಗ್ರಾಮದ ಬೆಟ್ಟದ ಮೇಲಿರುವ ಶಿಲಾಸಮಾಧಿಗಳಿಗೆ ಹೆಚ್ಚಿನ ಪ್ರಾಧಾನ್ಯತೆ ದೊರಕಿದೆ. ಅದಕ್ಕಾಗಿ ವಿಶ್ವಸಂಸ್ಥೆಯ UNESCO (ಯುನೆಸ್ಕೋ) ಅಂಗ ಸಂಸ್ಥೆಯು ತಾತ್ಕಾಲಿಕ ಮಾನ್ಯತೆ ನೀಡಿದೆ. ಅದನ್ನು ಖಾಯಂ ಆಗಿ ನೀಡಿದಾಗಲೇ ಅದಕ್ಕೆ ನ್ಯಾಯ ಒದಗಿಸಿದಂತೆ ಮತ್ತು ಅವುಗಳ ಮಹತ್ವ ವಿಶ್ವಕ್ಕೆ ಪರಿಚಯಿಸಿದಂತೆ ಆಗುತ್ತದೆ.

### ಆಕರ ಗ್ರಂಥಗಳು :–


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಡಾ.ಶರಣಬಸಪ್ಪ ಕೋಲ್ಕಾರ, ಕೊಪ್ಪಳ–ಹಂಪಿ ಪ್ರದೇಶ ಚರಿತ್ರೆ ಮತ್ತು ಪುರಾತತ್ವ, ಮಣಿ ಪ್ರಕಾಶನ, ಮೈಸೂರು–2021
3) ಡಾ.ಶರಣಬಸಪ್ಪ ಕೋಲ್ಕಾರ, ಶಿಲಾಯುಗದ ಗವಿಚಿತ್ರಗಳು, ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು, ಗುಲಬರ್ಗಾ–2010
4) ಮೋಹನ ಆರ್. ಕರ್ನಾಟಕದ ಆದಿಮ ಚಿತ್ರಕಲೆ, ಇತಿಹಾಸ ದರ್ಪಣ ಪ್ರಕಾಶನ, ಬೆಂಗಳೂರು–2019


* * * * *

# ಯಲಬುರ್ಗಿಯ ಸಿಂದರು

ಭಾರತ ದೇಶವನ್ನಾಳಿದ ಮಹಾನ್ ಸಾಮ್ರಾಜ್ಯಗಳಿಗೇನೂ ಕಮ್ಮಿ ಇಲ್ಲ. ಒಂದೇ, ಎರಡೇ? ನೂರಾರು–ಸಾವಿರಾರು ಎಂದರೂ ನಡೆಯುತ್ತದೆ. ಪೌರಾಣಿಕ ಕಾಲದಿಂದ ಹಿಡಿದು ಇತಿಹಾಸ ಕಾಲದವರೆಗೆ ನೂರಾರು ದೊಡ್ಡ–ದೊಡ್ಡ ಸಾಮ್ರಾಜ್ಯಗಳೇ ಆಳ್ವಿಕೆ ನಡೆಸಿ ಇತಿಹಾಸದಲ್ಲಿ ತಮ್ಮ ಹೆಸರನ್ನು ಅಚ್ಚೊತ್ತಿ ಹೋಗಿದ್ದಾರೆ. ಅಖಂಡ ಪ್ರಪಂಚವನ್ನೇ ಆಳಬೇಕೆಂದವರು ಭಾರತದ ನೆಲದಲ್ಲಿ ಬೀಡುಬಿಟ್ಟಿದ್ದರು. ಇನ್ನು ಕೆಲವರು ಭಾರತದ ಗಡಿಯನ್ನೂ ಸಹ ದಾಟಲಾಗಲಿಲ್ಲ. ಇಂತಹ ಅನೇಕ ಮಹಾನ್ ಸಾಮ್ರಾಜ್ಯಗಳು ಈ ದೇಶದ ನೆಲದಲ್ಲಿ ಆಳ್ವಿಕೆ ನಡೆಸಿ ಹೋಗಿದ್ದಾರೆ.

ಗ್ರೀಕ್–ರೋಮ್‌ನಿಂದ ಶ್ರೀಲಂಕಾದವರೆಗೆ; ಭಾರತ ದೇಶದ ಕಾಶ್ಮೀರದಿಂದ ಹಿಡಿದು ಕನ್ಯಾಕುಮಾರಿಯವರೆಗೆ ಆಡಳಿತ ನಡೆಸಿದ ಅನೇಕ ಮಹಾನ್ ಸಾಮ್ರಾಜ್ಯಗಳು ಇತಿಹಾಸದಲ್ಲಿ ಸಿಗುತ್ತವೆ. ದೊಡ್ಡ–ದೊಡ್ಡ ಸಾಮ್ರಾಜ್ಯಗಳು ಆಳ್ವಿಕೆ ನಡೆಸಿ ಇತಿಹಾಸದಲ್ಲಿ ತಮ್ಮ ಛಾಪನ್ನು ಮೂಡಿಸಿ ಹೋಗಿದ್ದಾರೆ. ಈ ದೇಶವನ್ನು ಕೇವಲ ಮಹಾನ್ ಸಾಮ್ರಾಜ್ಯಗಳು ಮಾತ್ರವಷ್ಟೇ ಆಳಿ ಹೋಗಿವೆಯೋ ಎಂಬ ಪ್ರಶ್ನೆ ಬಂದಾಗ ಉತ್ತರಿಸಲೇಬೇಕು. ದೊಡ್ಡ–ದೊಡ್ಡ ಸಾಮ್ರಾಜ್ಯಗಳ ಜೊತೆಗೆ ಅನೇಕ ಸಣ್ಣ–ಪುಟ್ಟ ಸಾಮಂತ, ಪಾಳೇಗಾರ ಹಾಗೂ ನಾಯಕ ಮನೆತಗಳೂ ಸಹ ಈ ನೆಲವನ್ನು ಆಳಿದ್ದಾರೆ.

ಈ ದೇಶದಲ್ಲಿ ಕ್ರಿ.ಶ. ಸುಮಾರು 17ನೇ ಶತಮಾನದ ನಂತರ ಮಹಾನ್ ಸಾಮ್ರಾಜ್ಯಗಳು ಪತನವಾದವು. ಅದಕ್ಕೆ ಬೇರೆ ಬೇರೆ ಕಾರಣಗಳಿವೆ. ಬಹಳ ಮುಖ್ಯವಾಗಿ ವಿದೇಶಿಯರ ಆಗಮನದಿಂದಾಗಿ ಈ ದೇಶದ ಆಳ್ವಿಕೆಯಲ್ಲಿ ಬಹುದೊಡ್ಡ ಬದಲಾವಣೆಗಳು ನಡೆದು ಹೋದವು. ಅಳಿದುಳಿದ ಸಾಮ್ರಾಜ್ಯಗಳ ಅಧೀನದಲ್ಲಿ ಮತ್ತು ವಿದೇಶಿಯರ ಆಳ್ವಿಕೆ ಪ್ರಾರಂಭವಾದ ನಂತರ ಕೆಲವು ಸಣ್ಣ–ಪುಟ್ಟ ಮನೆತಗಳು ಅವರ ಆಳ್ವಿಕೆಯ ಅಧೀನದಲ್ಲಿ ತಲೆ ಎತ್ತಿದವು. ಇಂತಹ ಅನೇಕ ಸಣ್ಣ–ಪುಟ್ಟ ಮನೆತಗಳು ಯಾರದೋ ಕೃಪಾಪೋಷಿತವಾಗಿ ಆಳ್ವಿಕೆ ನಡೆಸಲು ಪ್ರಾರಂಭಿಸಿದವು.

ದೇಶ–ರಾಜ್ಯಗಳಲ್ಲಿ ಆಯಾ ದೇಶ, ಪ್ರದೇಶ, ಪರಿಸರ ಮತ್ತು ತಮಗೆ ಅನುಕೂಲವಾದ ರೀತಿಯಲ್ಲಿ ಸ್ಥಳೀಯ ಸಾಮಂತ ಮನೆತಗಳನ್ನು ಸ್ಥಾಪಿಸಿಕೊಂಡು, ಆಳ್ವಿಕೆ ಪ್ರಾರಂಭಿಸಿದರು. ಅದರಂತೆ ಕೊಪ್ಪಳ ಜಿಲ್ಲೆಯಲ್ಲಿಯೂ ಸಹ ಕೆಲ ಸಣ್ಣ–ಪುಟ್ಟ ಪಾಳೆಗಾರಿಕೆ ಮತ್ತು ಸಾಮಂತ ಮನೆತಗಳು ಆಳ್ವಿಕೆ ನಡೆಸಿದ್ದಾರೆ. ಕನಕಗಿರಿ ನಾಯಕರು, ಆನೆಗೊಂದಿ ಪಾಳೆಗಾರರು ಹೀಗೆ ಅನೇಕ ಸ್ಥಳೀಯ ಸಾಮಂತ ಮನೆತಗಳು

ಆಳ್ವಿಕೆ ನಡೆಸಿದ್ದಾರೆ. ಅದರಲ್ಲಿ 'ಯಲಬುರ್ಗಿ ಸಿಂದರ' ಸಾಮಂತ ಮನೆತನವೂ ಸಹ ಒಂದಾಗಿತ್ತು.

ಯಲಬುರ್ಗಿ ಸಿಂದರ ಮನೆತನದ ಬಗ್ಗೆ ತಿಳಿಯುವುದು ಕಷ್ಟವೇ ಸರಿ. ಯಾಕೆಂದರೆ 'ಸಿಂದ' ಮನೆತಗಳು ಭಾರತ ದೇಶದಲ್ಲಿ ಅನೇಕ ಕಡೆಗಳಲ್ಲಿ ಆಳ್ವಿಕೆ ನಡೆಸಿದ್ದಾರೆ. ವಿಶೇಷವಾಗಿ ಕರ್ನಾಟಕ, ಮಹಾರಾಷ್ಟ್ರ, ಆಂದ್ರಪ್ರದೇಶಗಳಲ್ಲಿ ಈ ಸಿಂದ ಮನೆತಗಳು ಆಳ್ವಿಕೆ ನಡೆಸಿದ ಬಗ್ಗೆ ಇತಿಹಾಸದಿಂದ ತಿಳಿದುಬರುತ್ತದೆ. ಅದರಲ್ಲಿ ಕರ್ನಾಟಕದಲ್ಲಿ ಬಾಗೇವಾಡಿ ಸಿಂದರು, ಬೆಳಗಟ್ಟಿ ಸಿಂದರು, ಮುಳಗುಂದ ಸಿಂದರು, ರಂಜೋಲದ ಸಿಂದರು, ಬೆಳಗುತ್ತಿ ಸಿಂದರು, ಪ್ರತ್ಯಂಡದ ಸಿಂದರು, ಕೋಗಳಿ ಸಿಂದರು, ಸಾಲಗುಂದ ಸಿಂದರು, ಕುರುಗೋಡ ಸಿಂದರು ಮತ್ತು ಯಲಬುರ್ಗಿ ಸಿಂದರು. ಹೀಗೆ ಅನೇಕ ಈ ಸಿಂದ ಮನೆತಗಳು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಬಗ್ಗೆ ಇತಿಹಾಸದಿಂದ ತಿಳಿದುಬರುತ್ತದೆ. ಅದರಲ್ಲಿ ಯಲಬುರ್ಗಿ ಸಿಂದರು ಪ್ರಬಲರಾಗಿದ್ದಾರೆಂದು ಇತಿಹಾಸ ಹೇಳುತ್ತದೆ. ಈ ಸಿಂದರ ಮೂಲ ಹುಡುಕುತ್ತಾ ಹೋದರೆ ಸಿಂಧು ನದಿಯ ಬಯಲಿನಲ್ಲಿ ನಿರ್ಮಾಣವಾದ 'ಸಿಂಧೂ ನಾಗರಿಕತೆ'ಯ ಮೂಲದಿಂದ ಬಂದವರು ಎಂದು ಹಲವಾರು ಸಂಶೋಧಕರ ಅಭಿಪ್ರಾಯವಾಗಿದೆ.

ಕೇವಲ ಸಿಂದು ಮನೆತವನ್ನು ಕುರಿತು ಇಲ್ಲಿ ಚರ್ಚಿಸುವುದಾದರೆ ಅದಕ್ಕೆ ಬಹು ದೊಡ್ಡ ಇತಿಹಾಸವೇ ದೊರೆಯುತ್ತದೆ. 'ಸಿಂದ' ಎಂಬ ಪದಕ್ಕೆ ಪತಾಕೆ, ಜಯಿಸಿದ, ಧ್ವಜ ಎಂಬ ಮುಂತಾದ ಅರ್ಥಗಳನ್ನು ಕೊಡುತ್ತದೆ. ಈ ಮನೆತನದ ಮೂಲ ಪುರುಷ ನಿಡುದೋಳ ಸಿಂದ. ಇವನು ನಾಗ ಜನಾಂಗಕ್ಕೆ ಸೇರಿದ ಸಾಮಾನ್ಯ ವೀರನಾಗಿದ್ದನು. ಮುಂದೆ ಕದಂಬ ಅರಸ ಮಯೂರವರ್ಮನ ಮಗಳು ಲಕ್ಷ್ಮೀಮತಿಯನ್ನು ಮದುವೆಯಾದ. ಅಲ್ಲಿಂದ ಇವರ ಮನೆತನ ಪ್ರಾರಂಭವಾಯಿತು ಎಂದು ಸಂಶೋಧಕರಾದ ಡಾ. ಚೆನ್ನಬಸಯ್ಯ ಹಿರೇಮಠರವರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲಿಂದ ಸಾಮಾನ್ಯ ವೀರರಾದ ಇವರು ಪ್ರಮುಖರಾದರು. ಅಂದರೆ ಡಾ.ಚೆನ್ನಬಸಯ್ಯ ಹಿರೇಮಠ ಅಭಿಪ್ರಾಯದಂತೆ ಕ್ರಿ.ಶ. ಸುಮಾರು ನಾಲ್ಕನೆಯ ಶತಮಾನದ ನಂತರದಲ್ಲಿ ಈ 'ಸಿಂದ' ಮನೆತನವು ಅಸ್ತಿತ್ವಕ್ಕೆ ಬಂದಿತು ಎಂದಂತಾಯಿತು. ಆದರೆ ಸಂಶೋಧಕರಾದ ಡಾ.ಕೆ.ಬಿ.ಬ್ಯಾಳಿಯರವರ ಅಭಿಪ್ರಾಯವೇ ಬೇರೆಯಾಗಿದೆ. ಈ ಸಿಂದ ಮನೆತನ 'ಸಿಂಧೂ' ನದಿಯ ಸಂಸ್ಕೃತಿಯ ನಾಗರಿಕತೆಯಲ್ಲಿ ಉಗಮವಾದದ್ದು. ಆದ್ದರಿಂದ ಈ ಮನೆತನಕ್ಕೆ 'ಸಿಂದ' ಮನೆತನ ಎಂಬ ಹೆಸರು ಬಂದಿದೆ ಎಂದು ಅವರು ಅಭಿಪ್ರಾಯ ಪಡುತ್ತಾರೆ. ಈ ಸಿಂಧೂ ನಾಗರಿಕತೆಯು ಕ್ರಿ.ಪೂ. ಸುಮಾರು ಆರು–ಏಳು ಸಾವಿರ ವರ್ಷಗಳ ಹಿಂದೆ ಇದ್ದ ಸಂಸ್ಕೃತಿ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅಂದರೆ ಡಾ. ಕೆ.ಬಿ.ಬ್ಯಾಳಿಯವರ ಅಭಿಪ್ರಾಯವನ್ನು ಇಲ್ಲಿ ಒಪ್ಪುವುದಾದರೆ

ಈ 'ಸಿಂದ' ಮನೆತವು ಕ್ರಿ.ಪೂ. ಸುಮಾರು ಆರು-ಏಳು ಸಾವಿರ ವರ್ಷಗಳ ಹಿಂದೆ ಇದ್ದ ಸಿಂಧೂ ನಾಗರಿಕತೆಯಲ್ಲಿ ಇತ್ತು ಎಂದಂತಾಗುತ್ತದೆ. ಅದಕ್ಕೆ ಇನ್ನೂ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ.

'ಸಿಂಧೂ' ನದಿಯ ಬಯಲಿನ ನಾಗರಿಕತೆಯಲ್ಲಿನ ಸಿಂದ ಮನೆತಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯದಿದ್ದರೂ ಕರ್ನಾಟಕದಲ್ಲಿ ಕ್ರಿ.ಶ. 4ನೇ ಶತಮಾನದಲ್ಲಿನ ಕದಂಬರ ಜೊತೆಯಲ್ಲಿ ಹುಟ್ಟಿಕೊಂಡ ಮನೆತನವೇ ಸಿಂದರ ಮೂಲ ಮನೆತನ ಎಂದು ಬಹುತೇಕ ವಿದ್ವಾಂಸರು ಒಪ್ಪಿದ್ದಾರೆ. ಕದಂಬರು ಬ್ರಾಹ್ಮಣರಾಗಿದ್ದರು. ಸಿಂದರು ಅವರ ಸಂಬಂಧವನ್ನು ಬೆಳಸಿದ್ದರಿಂದ ಇವರೂ ಸಹ ಬ್ರಾಹ್ಮಣರಾಗಿರಬೇಕು ಎನಿಸುವುದು ಸಹಜ. ಈ ಮನೆತನವು ಸಿಂಧೂ ನದಿಯ ಬಯಲಿನಲ್ಲಿನ ನಾಗರಿಕತೆಯಲ್ಲಿ ಹುಟ್ಟಿಕೊಂಡಿದೆ ಎಂಬ ವಿಷಯದ ಮೇಲೆ ಚರ್ಚಿಸುವುದಾದರೆ ಇಂದಿನ ಪಾಕಿಸ್ತಾನ, ಕಾಶ್ಮೀರ, ಉತ್ತರ ಭಾಗದ ಕೆಲಭಾಗಳಲ್ಲಿ ಆಳ್ವಿಕೆ ನಡೆಸಿರಬಹುದು. ಅದಕ್ಕೆ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ.

ಯಲಬುರ್ಗಾವು ಕೊಪ್ಪಳ ಜಿಲ್ಲೆಯ ಒಂದು ತಾಲ್ಲೂಕು. ತೀರಾ ಇತ್ತೀಚಗೆ ಕುಕನೂರು ಸಹ ಯಲಬುರ್ಗಿಯಿಂದ ಪ್ರತ್ಯೇಕವಾದ ಒಂದು ತಾಲ್ಲೂಕು ಆಗಿ ಮಾರ್ಪಟ್ಟಿದೆ. ಪ್ರಾಚೀನ ಕಾಲದಲ್ಲಿ ಯಲಬುರ್ಗಾವನ್ನು ಶಾಸನಗಳಲ್ಲಿ ಎರಂಬರಿಗೆ, ಯಲಂಬರಿಗೆ, ಯರಂಬರವಿ, ಯರಬರವಿ, ಯರಂಬರವಿ ಎಂಬ ಮುಂತಾದ ಹೆಸರುಗಳಿಂದ ಉಲ್ಲೇಖಗೊಂಡಿದೆ. ಕ್ರಿ.ಶ 11-13ನೇ ಶತಮಾನದಲ್ಲಿ ಸಿಂದರ ಕಾಲದಲ್ಲಿ ಇದನ್ನು ತಮ್ಮ ರಾಜ್ಯಧಾನಿಯನ್ನಾಗಿ ಮಾಡಿಕೊಂಡಿದ್ದರು. ಆ ಕಾಲಗಳಲ್ಲಿ ಈ ಯಲಬುರ್ಗಿ ಸಿಂದರು ಕಿಸುಕಾಡು-70, ಬಾಗಡಗೆ-70, ಕೆಳವಡಿ-30, ನೆರೆಯಂಗಲ್ಲು-12, ಕರಿವಿಡಿ-30 ಮುಂತಾದ ಪ್ರದೇಶಗಳನ್ನು ಈ ಸಿಂದುಮನೆತನದವರು ಆಳ್ವಿಕೆ ನಡೆಸಿರುವ ಬಗ್ಗೆ ಇತಿಹಾಸದಿಂದ ತಿಳಿದುಬರುತ್ತದೆ. ಈ ಯಲಬುರ್ಗಿ ಸಿಂದರ ಬಗ್ಗೆ ಕೊಪ್ಪಳ ಜಿಲ್ಲೆಯ ಯಲಬುರ್ಗಾ, ಕುಕನೂರು, ಕಲ್ಲೂರು, ಮುಧೋಳ, ಸಂಕನೂರು ಹಾಗೂ ಗದಗ ಜಿಲ್ಲೆಯ ರೋಣ, ಸೂಡಿ, ನರೇಗಲ್, ಸವಡಿ, ಅಬ್ಬಿಗೇರಿ, ಬಾಗಲಕೋಟೆ ಜಿಲ್ಲೆಯ ನಿಡಗುಂದಿ ಮುಂತಾದ ಗ್ರಾಮಗಳಲ್ಲಿನ ಶಾಸನಗಳಿಂದ ಮಾಹಿತಿ ತಿಳಿದುಬರುತ್ತದೆ.

ವಿದ್ವಾಂಸರಾದ ದಿನಕರ ದೇಸಾಯಿಯವರು ಈ ಯಲಬುರ್ಗಿ ಸಿಂದರ ವಂಶಾವಳಿಯನ್ನು ಈ ಮುಂದಿನಂತೆ ವಿವರಿಸಿದ್ದಾರೆ.

## ಯಲಬುರ್ಗಿಯ ಸಿಂದರ ವಂಶಾವಳಿ




(ಆಧಾರ ಡಾ. ಎನ್. ನಂದೀಶ್ವರ ಕೊಪ್ಪಳ ಪ್ರದೇಶದಲ್ಲಿ ಯಲಬುರ್ಗಿ ಸಿಂಧರ ಆಡಳಿತ; ಕೊಪ್ಪಳ ಜಿಲ್ಲೆ ಇತಿಹಾಸ ಮತ್ತು ಪುರಾತತ್ವ, ಪುಟ–124)

ಶಾಸನಗಳಲ್ಲಿ ಇವರ ಮೂಲಪುರುಷನ ಹೆಸರನ್ನು ಹೇಳದೆ ಏಳು ಜನ ಸಹೋದರರ ವಂಶವೃಕ್ಷವನ್ನು ಹೇಳಲಾಗಿದೆ ಇವರ ತಂದೆ-ತಾಯಿ ಯಾರೆಂಬುದು ತಿಳಿದುಬರುವುದಿಲ್ಲ. ಈ ವಂಶದ ಮೊದಲ ದೊರೆ ಒಂದನೇ ಆಚಾಂಗಿ ಇವನು ಕಲ್ಯಾಣಿ ಚಾಲುಕ್ಯರ ಆರನೇ ವಿಕ್ರಮಾದಿತ್ಯನ ಸಾಮಂತನಾಗಿದ್ದನು. ಈ ಒಂದನೇ ಆಚಾಂಗಿ ಆದಿ ಮಾಂಡಳಿಕ ಎಂದು ಶಾಸನಗಳಲ್ಲಿ ಬಣ್ಣಿಸಿದೆ. ಹೀಗಾಗಿ ಇವನನ್ನೇ ಸಿಂದರ ಮೂಲ ಪುರುಷ ಎಂದು ತಿಳಿದುಬರುತ್ತದೆ.

ಕ್ರಿ.ಶ 1185ರ ಕಲ್ಲೂರು ಗ್ರಾಮದ ಶಾಸನದಲ್ಲಿ ಯಲಬುರ್ಗಿಯ ಸಿಂದು ವಂಶದ ವೀರಬಿಜ್ಜಳದೇವನ ವರ್ಣನೆ ಬರುತ್ತದೆ. ಪ್ರಸ್ತುತ ಶಾಸನದಲ್ಲಿ ಅವರ ವಂಶಾವಳಿಯನ್ನು ಮುಂದಿನ ಕೋಷ್ಟಕದಲ್ಲಿ ಉಲ್ಲೇಖಿಸಲಾಗಿದೆ. ಅದೇ ರೀತಿ ಕುಕನೂರಿನ ಕ್ರಿ.ಶ 1078ರ ಶಾಸನದಲ್ಲಿ ಸಿಂದರ ರಾಜಧಾನಿ ಯಲಬುರ್ಗಿಯನ್ನು ಉಲ್ಲೇಖಿಸುವುದರ ಜೊತೆಗೆ ಮಹಾಮಂಡಳೇಶ್ವರ ಸಿಂದರಾಜ ಪೆರ್ಮಾಡಿಯು ಅವನ ಮಾಂಡಳೇಶ್ವರ ಚಾವುಂಡನಿಗು ಗುರುವಾಗಿದ್ದ ಕಳಕೇಶ್ವರ ಯತಿಯನ್ನು ಕುರಿತು ಉಲ್ಲೇಖಿಸುತ್ತದೆ. ಯಲಬುರ್ಗಿಯ ಸಿಂದರ ಚಾವುಂಡನನ್ನು ಕುರಿತು ಕ್ರಿ.ಶ 1098ರ ಕಲ್ಲೂರಿನ ಶಾಸನ, ಕ್ರಿ.ಶ 1127ರ ಕುಕನೂರು ಶಾಸನದಲ್ಲಿ ಹಾಗೂ ಕ್ರಿ.ಶ 1163ರ ಕುಕನೂರು ಶಾಸನದಲ್ಲಿ, ಕ್ರಿ.ಶ 11ನೇ ಶತಮಾನದ ಮುಧೋಳ ಶಾಸನದಲ್ಲಿ ಹಾಗೂ ಕ್ರಿ.ಶ 1113ರ ಸಂಕನೂರು ಶಾಸನದಲ್ಲಿ ಆಚರಸ ಸಿಂದರ ಉಲ್ಲೇಖಗಳು ಬರುತ್ತವೆ. ವಿವಿಧ ಲಭ್ಯವಾದ ಆಧಾರಗಳ ಮಾಹಿತಿಗಳಿಂದ ಯಲಬುರ್ಗಿ ಸಿಂದರ ಮಾಹಿತಿಯನ್ನು ಈ ಕೆಳಗಿನಂತೆ ವಿವರಿಸುತ್ತಾ ಹೋಗಲಾಗಿದೆ.

**ಒಂದನೆ ಅಚಗಿ:–** ಇವನು ಯಲಬುರ್ಗಿ ಸಿಂದರ ಮೊದಲ ದೊರೆ. ಇವನನ್ನು ಆದಿ ಮಂಡಳಿಕ ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಆರನೇ ವಿಕ್ರಮಾದಿತ್ಯನ ಸಾಮಾಂತನಾಗಿದ್ದ ಇವನು ಕೀರ್ತಿಯುಳ್ಳವನಾಗಿದ್ದನು. ವೈರಿಗಳು ಇವನನ್ನು ಕಂಡರೆ ಭಯಪಡುತ್ತಿದ್ದರಂತೆ. ಇವನು ಯುದ್ಧದಲ್ಲಿ ಸಾಮರ್ಥ್ಯ ಉಳ್ಳವನಾಗಿದ್ದನಾಗಿದ್ದನಂತೆ. ಅಲ್ಲದೆ ಇವನನ್ನು ಶಾಸನಗಳಲ್ಲಿ ಸೂರ್ಯನಂತೆ ಪ್ರಕಾಶಮಾನವುಳ್ಳವನಾಗಿದ್ದನೆಂದು ವರ್ಣಿಸಲಾಗಿದೆ.

**ಬೊಮ್ಮರಸ:–** ಇವನು 6ನೇ ವಿಕ್ರಮಾದಿತ್ಯನ ಕಾಲದಲ್ಲಿ ಕಿಸುಕಾಡು–70, ನೆರೆಗಲ್ಲು–12 ಮೊದಲಾದ ಘಟಕಗಳನ್ನು ಆಳುತ್ತಿದ್ದನು. ಈ ಯಲಬುರ್ಗಿ ಸಿಂದರು ಕಲ್ಯಾಣಿ ಚಾಲುಕ್ಯರ ಆಪ್ತಸೇವಕರಾಗಿದ್ದರು. ಕೊನೆಗೆ ಬಿಜ್ಜಳನ ಸಂಬಂಧ ಬೆಳೆಸಿದರಿಂದ ಬಿಜ್ಜಳನಿಗೆ ಸಹಾಯ ಮಾಡಿರಬೇಕು ಎಂಬುದು ಇತಿಹಾಸಕಾರರ ಅಭಿಪ್ರಾಯವಾಗಿದೆ.

**ಮಹಾಮಂಡಳೇಶ್ವರ ಒಂದನೇ ಅಚುಗಿ:–** ಯಲಬುರ್ಗಿ ಸಿಂದವಂಶಕ್ಕೆ ಭದ್ರಬುನಾದಿ ಹಾಕಿದನು. ಇವನ ಬಗ್ಗೆ ನರೆಗಲ್ ಶಾಸನದಲ್ಲಿ ಉಲ್ಲೇಖ ಬರುತ್ತದೆ.

**ಮಹಾಮಂಡಳೇಶ್ವರ ಸಿಂಗಣದೇವ:**–ಇವನ ಬಗ್ಗೆ ನಿಡಗುಂದಿ, ನರೆಗಲ್, ಸೂಡಿ ಶಾಸನಗಳಲ್ಲಿ ಉಲ್ಲೇಖವಿದೆ. ನರೆಗಲ್ ಕಿಸುಕಾಡು–70ರ ಅಗ್ರಹಾರ ನಿಡಗುಂದಿ ಆಳುತ್ತಿದ್ದ ಬಗ್ಗೆ ತಿಳಿದು ಬರುತ್ತದೆ. ಈ ನಿಡಗುಂದಿಯು ಅಗ್ರಹಾರವಾಗಿತ್ತು. ಇಲ್ಲಿ ಕಲಿದೇವಸ್ವಾಮಿಗೆ ದಾನ ನೀಡಿದ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿದೆ.

**ಮಹಾಮಂಡಳೇಶ್ವರ ಬೊಮ್ಮಭೂಪ:**– ಒಂದನೆ ಅಚನ ಮಗನಾದ ಇವನು ನೆರೆಗಲ್ಲಿನ ಬ್ರಮ್ಮೇಶ್ವರ ದೇವಾಲಯವನ್ನು ಸ್ಥಾಪಿಸಿದಂತೆ ತಿಳಿದುಬರುತ್ತದೆ. ಇವನ ಬಗ್ಗೆ ಸ್ವತಂತ್ರ ಶಾಸನಗಳಿಲ್ಲದಿದ್ದರೂ ಬೇರೆಯವರ ಶಾಸನಗಳಲ್ಲಿ ಇವನ ಉಲ್ಲೇಖವಿದೆ.

**ಮಹಾಮಂಡಳೇಶ್ವರ ಎರಡನೇ ಅಚುಗಿ:**– ಯಲಬುರ್ಗಿ ಸಿಂದರಲ್ಲಿ ಹೆಚ್ಚು ಪ್ರಸಿದ್ಧನಾಗಿದ್ದವನು. ಚಾಲುಕ್ಯರ ವಂಶಸ್ಥರು ಹೊಯ್ಸಳ, ಗೋವೆಯ ಕದಂಬರು, ಕರಹಾಡದ ಶಿಲಾಹಾರರು, ಉಚ್ಚಂಗಿಯ ಪಾಂಡ್ಯರ ಮುಂತಾದವರ ವಿರುದ್ಧ ನಡೆದ ಅನೇಕ ಯುದ್ಧದ ಸಂದರ್ಭದಲ್ಲಿ ಕಾಪಾಡಿದವನು. ಬಿಕ್ಕಟ್ಟಿನ ಸಂದರ್ಭದಲ್ಲಿ ನಿವರ್ಹಿಸಬೇಕಾದ ಹೊಣೆಯನ್ನು ಇವನಿಗೇ ವಹಿಸುತ್ತಿದ್ದರು. ಇವನ ಕುರಿತು ಅನೇಕ ಶಾಸನಗಳು ವರ್ಣಿಸಿವೆ. ಸವಡಿ, ಸಂಕನೂರು, ಅಬ್ಬಿಗೇರಿ ಮುಂತಾದ ಗ್ರಾಮಗಳ ಶಾಸನದಲ್ಲಿ ಇವನ ಉಲ್ಲೇಖವಿದೆ. ವಿಕ್ರಮ ಚಕ್ರವರ್ತಿಗಳಿಗೆ ಇವನು ನೆಚ್ಚಿನ ಮಹಾಮಂಡಳೇಶ್ವರನಾಗಿದ್ದನು.

**ಮಹಾಮಂಡಳೇಶ್ವರ ಭೂಲೋಕಮಲ್ಲ ಪೆರ್ಮಾಡಿದೇವ:**– ಕ್ರಿ.ಶ1178ರ ಕುಕನೂರಿನ ಮಹಾಮಾಯೆ ದೇವಾಲಯದ ಶಾಸನದಲ್ಲಿ ಇವನನ್ನು ಕಾವ್ಯಮಯವಾಗಿ ವರ್ಣಿಸಿದೆ. ಇವನು ಅನೇಕ ದೇವಾಲಯಗಳಿಗೆ ದಾನ ನೀಡಿದ ಬಗ್ಗೆ ಶಾಸನಗಳಿಂದ ತಿಳಿದುಬರುತ್ತದೆ.

ಈ ಭೂಲೋಕಮಲ್ಲನನ್ನು ಕ್ರಿ.ಶ 1083ರ ಸವಡಿಯ ಶಾಸನದಲ್ಲಿ ಉಲ್ಲೇಖವಿದೆ. ಇವನು ಕಿಸುಕಾಡು–70, ಬಾಗಡಗೆ–70, ನೆರೆಯಂಗಲು–12 ಮುಂತಾದ ವಿಭಾಗಗಳನ್ನು ಆಳುತ್ತಿದ್ದನು. ಎರಡನೆ ಆಚುಗಿ ಹಾಗೂ ಸಿರಿಯಾದೇವಿ ದಂಪತಿಗಳ ಮಗನಾಗಿದ್ದನು. ವಿರೋಧಿಮಂಡಳಿಕ ಮಹಾಶ್ವರ, ದುಷ್ಟಮಂಡಳಿಕ ಸರಭಭೇರುಂಡ, ಪಗೆಮೆಚ್ಚೆಗಂಡ, ಶರಣಾಗತನೃಪಾಳಸರವಿಧಿ, ಸರಳವಿದ್ಯಾನಿಧಿ, ರಸಗೀತಾಕೌತುಕ, ಸುಧಾಸಾರಧಾಕಾರ, ಪುರಪುರ ತ್ರಿಪುರ ಗಂಗಾಧರ, ನಿಜಕುವಳಯಸುಧಾಕರ, ಗಂಭೀರ ವೀರಾಕರಂ, ದೇವದ್ವಿಜಗುರು ಪೂಜಾಸಂತರ್ಪ್ಪಣ, ಮಂಡಳಿಕ ಮುಖದರ್ಪಣ, ನಿರ್ವ್ವಿಕಾರ ಮನಸಿಜಾಕಾರ, ಪರಂಗನಾದೂರ, ಅಯ್ಯನಗಂಧವಾರಣ, ಭೂಲೋಕಮಲ್ಲ ದೇವಪಾದಾರಧಕ, ಪರಭಳಸಾಧಕ ಮುಂತಾದ ಪ್ರಶಸ್ತಿಗಳನ್ನು ಹೊಂದಿದ್ದನೆಂದು ಶಾಸನಗಳಲ್ಲಿ ವರ್ಣಿಸಲಾಗಿದೆ.

**ಎರಡನೇ ಚಾವುಂಡ :–** ಈ ಇಮ್ಮಡಿ ಚಾವುಂಡನು ಕಳಚೂರಿ ಬಿಜ್ಜಳನ ಇಬ್ಬರ ಮಕ್ಕಳಾದ ಲಕ್ಷ್ಮೀದೇವಿ(ಏಚಲದೇವಿ) ಮತ್ತು ಸಿರಿಯದೇವಿಯರನ್ನು ಮದುವೆಯಾಗಿದ್ದನು. ಸಿರಿಯಾದೇವಿಗೆ ವೀರಬಿಜ್ಜಣ್ಣ ಮತ್ತು ವೀರವಿಕ್ರಮ ಎಂಬ ಇಬ್ಬರು ಮಕ್ಕಳು, ಇವನ ಮೊತ್ತೊಬ್ಬ ಪತ್ನಿಯಾದ ದೇಮಾಲದೇವಿಯಲ್ಲಿ ಮೂರನೇ ಆಚುಗಿ ಹಾಗೂ ಎರಡನೆ ಪೆರ್ಮಾಡಿ ಎಂಬ ಇಬ್ಬರು ಮಕ್ಕಳು ಜನಿಸಿರುತ್ತಾರೆ. ಇವನ ಕುರಿತು ಯಲಬುರ್ಗಿ ತಾಲೂಕಿನ ಕಲ್ಲೂರು ಶಾಸನದಲ್ಲಿ ವಿವರಣೆ ಇದ್ದು, ಅವನ ವಂಶಾವಳಿಯನ್ನು ಈ ಕೆಳಗಿನ ಕೋಷ್ಠಕದಂತೆ ತಿಳಿದುಬರುತ್ತದೆ.




**(ಆಧಾರ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ ಪುಟ : 168)**

ಹೀಗೆ ಕೊಪ್ಪಳ ಜಿಲ್ಲೆಯ ಯಲಬುರ್ಗಿ ಸಿಂದರು ಯಲಬುರ್ಗಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಬಗ್ಗೆ ಇತಿಹಾಸದಿಂದ ತಿಳಿದುಬರುತ್ತದೆ. ಸುಮಾರು ಎರಡುನೂರು ವರ್ಷಗಳ ಕಾಲ ಕರ್ನಾಟಕದ ಇತಿಹಾಸದಲ್ಲಿ ವಿವಿಧ ರಾಜಕೀಯ ಮನೆತನಗಳಿಗೆ ಬೆನ್ನೆಲುಬಾಗಿ ನಿಂತುಕೊಂಡು, ಅವರ ಆಳ್ವಿಕೆ ಮತ್ತು ಉಳಿವಿಕೆಗಾಗಿ ಹೋರಾಟ ಮಾಡಿರುವುದು ಶ್ಲಾಘನೀಯ. ಇಂತಹ ಯಲಬುರ್ಗಾ ಸಿಂದರು ಎಂಬ ಚಿಕ್ಕ ಮನೆತನದ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ. ಆಗ ಮಾತ್ರ ಅವರ ಸಮಗ್ರ ಇತಿಹಾಸ ದೊರೆತಂತೆ ಆಗುತ್ತದೆ.

**ಆಕರ ಗ್ರಂಥಗಳು :–**


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಡಾ.ಶರಣಬಸಪ್ಪ ಕೋಲ್ಕಾರ, ಕೊಪ್ಪಳ–ಹಂಪಿ ಪ್ರದೇಶ ಚರಿತ್ರೆ ಮತ್ತು ಪುರಾತತ್ವ, ಮಣಿ ಪ್ರಕಾಶನ, ಮೈಸೂರು–2021
3) ಸಂ,ಡಾ.ಆರ್.ಗೋಪಾಲ್, ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು–2010
4) ಡಾ. ಸಿ. ಸಿದ್ಧಲಿಂಗಪ್ಪ ಕೊಟ್ನೇಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ 2ನೇ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020
5) ಡಾ. ಚನ್ನಬಸವಯ್ಯ ಹಿರೇಮಠ, ಕುರುಗೋಡು ಸಿಂದರು ಒಂದು ಅಧ್ಯಯನ, ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ–1995


* * * * *

# ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ

ಶಾಸನಗಳು ಆಯಾ ಕಾಲದ ಇತಿಹಾಸವನ್ನು, ಮತ್ತು ದೇಶದ ಇತಿಹಾಸವನ್ನು ಪುನರ್ ರಚಿಸುವಲ್ಲಿ ಶಾಸನಗಳ ಪಾತ್ರ ಬಹು ಮುಖ್ಯವಾಗಿದೆ. ಒಂದು ನಾಡಿನ ಚರಿತ್ರೆಯನ್ನು ದಾಖಲಿಸುವಲ್ಲಿ ಶಾಸನಗಳು ಅತ್ಯಂತ ಪ್ರಮುಖವಾದ ಪಾತ್ರ ನಿರ್ವಹಿಸುತ್ತವೆ. ಇತರೆ ಆಧಾರಗಳಿಂದ ದೊರೆಯದ ಎಷ್ಟೋ ಅಂಶಗಳು ಶಾಸನಗಳಿಂದ ದೊರೆಯುತ್ತಿವೆ. ಶಾಸನಗಳಲ್ಲಿ ಬರೆಯಲ್ಪಟ್ಟ ವಿಷಯವು ಅತಿಶಯೋಕ್ತಿಯಿಂದ ಕೂಡಿರದೇ ಹೆಚ್ಚಾಗಿ ವಾಸ್ತವ ಸತ್ಯಾಂಶವನ್ನು ಒಳಗೊಂಡಿರುತ್ತದೆ. ಗಟ್ಟಿಯಾದ ಪದಾರ್ಥಗಳ ಮೇಲೆ ಕೊರೆದ ವಿಷಯವು ಗಟ್ಟಿಯಾಗಿಯೇ ಇರುತ್ತದೆ. ಒಂದು ನಾಡಿನ ಚರಿತ್ರೆಯನ್ನು ಕಟ್ಟುವಾಗ ಶಾಸನಗಳಿಗೆ ಮೊದಲ ಆದ್ಯತೆ ಕೊಡಬೇಕಾಗುತ್ತದೆ. ಅದಕ್ಕಾಗಿ ವಿದ್ವಾಂಸರು ಶಾಸನಗಳನ್ನು 'ಭಾರತ ದೇಶದ ಜೀವನಾಡಿ' ಎಂದು ಕರೆದಿದ್ದಾರೆ.

ಈ ನಿಟ್ಟಿನಲ್ಲಿ ಕೊಪ್ಪಳ ಜಿಲ್ಲೆಯ ಶಾಸನಗಳು ತಮ್ಮದೇ ಆದ ವೈಶಿಷ್ಟ್ಯತೆಯಿಂದ ಇತಿಹಾಸದಲ್ಲಿ ಪ್ರಮುಖ ಪಾತ್ರ ಪಡೆದುಕೊಂಡಿವೆ. ಕನ್ನಡ ನಾಡಿನ ಪ್ರಮುಖ ಅರಸು ಮನೆತನಗಳು ನೆಲೆವೂರಿ ಆಳಿದ್ದು ಇಲ್ಲಿ ಮಹತ್ವದ ಅಂಶವಾಗಿದೆ. ಇದಕ್ಕೆ ಸಾಕ್ಷಿಯಾಗಿ ಇಂದು ನಮಗೆ ದೊರಕಿರುವ ಶಾಸನಗಳು ಹಾಗೂ ಶಾಸನಗಳಲ್ಲಿ ಕಂಡು ಬರುವ ಸಮಗ್ರ ಮಾಹಿತಿಯು ಕೊಪ್ಪಳ ಜಿಲ್ಲೆಯ ಚರಿತ್ರೆಯ ಬಗೆಗಿರುವ ಪರಿಜ್ಞಾನದ ನಿಷ್ಪನ್ನವಾಗಿರುವುದು ಸಂಪೂರ್ಣ ಶಾಸನಗಳ ಈ ಒಂದು ಸಹನಾ ಪೂರ್ಣ ಅಧ್ಯಯನದಿಂದ ಎಂದು ಹೇಳಬಹುದಾಗಿದೆ. ಇಲ್ಲಿಯ ಒಟ್ಟು ಐತಿಹಾಸಿಕ ಪರಂಪರೆಯನ್ನು ಗುರುತಿಸುವಲ್ಲಿ ಶಾಸನಗಳ ಅಧ್ಯಯನ ಇಲ್ಲಿನ ಪ್ರಾಮುಖ್ಯತೆಯನ್ನು ಎತ್ತಿ ಹಿಡಿಯುವುದು ಮತ್ತು ಅದು ಪ್ರಸ್ತುತತೆಯಾಗಿದೆ.

ಕೊಪ್ಪಳ ಜಿಲ್ಲೆಯ ಶಾಸನಗಳ ಅಧ್ಯಯನದಿಂದ ನಮ್ಮ ಸಂಸ್ಕೃತಿ ಮತ್ತು ಚರಿತ್ರೆಗಳಿಗೆ ಸಂಬಂಧಿಸಿದಂತೆ ವಾಸ್ತವಿಕ ಅಂಶಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಈ ಅಧ್ಯಯನದ ಅವಧಿಯಲ್ಲಿ ಸಂಗ್ರಹಿಸಿದ ಮೂಲ ಹಾಗೂ ಅನುಷಂಗಿಕ ಆಕರಗಳು ಕೊಪ್ಪಳ ಜಿಲ್ಲೆಯ ಅಂದಿನ ಕಾಲದ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ವಿಚಾರಗಳ ಬಗೆಗೆ ನಿಖರವಾದ ಸ್ಪಷ್ಟತೆಯನ್ನು ಪಡೆಯಲು ವಿಪುಲವಾದ ಸಾಮಗ್ರಿಗಳನ್ನು ಒದಗಿಸಿವೆ. ಸಂಗ್ರಹಿಸಿದ ಮಾಹಿತಿಗಳನ್ನು ಇದುವರೆಗೂ ನಡೆಸಿರುವ ಚರ್ಚೆಯ ಬೆಳಕಿನಲ್ಲಿ ಪುನರ್ ಅವಲೋಕನಕ್ಕೆ ಗುರಿಪಡಿಸಲಾಗಿದೆ. ಇದರೊಂದಿಗೆ ನಮ್ಮ ಅಧ್ಯಯನದ ಚಿಂತನ ಶೀಲತೆಯಿಂದ ತತ್ವಗಳ ಹಿನ್ನಲೆಯಲ್ಲಿ ಅಧ್ಯಯನ ಮಾಡಿದಾಗ ಕೊಪ್ಪಳ ಜಿಲ್ಲೆಯ ಮಹತ್ವವನ್ನು ಗುರುತಿಸಬಹುದಾಗಿದೆ.

ಕೊಪ್ಪಳ ಜಿಲ್ಲೆಯ ಪ್ರದೇಶವು ಪ್ರಾಚೀನ ಕಾಲದಲ್ಲಿ ಇತಿಹಾಸ ಕ್ಷೇತ್ರಕ್ಕೆ ತನ್ನದೆ ಆದ ವಿಶಿಷ್ಟ ಕೊಡುಗೆಯನ್ನು ಸಲ್ಲಿಸಿದೆ. ಶತಮಾನಗಳ ಇತಿಹಾಸದಲ್ಲಿ ಕೊಪ್ಪಳ ಪ್ರದೇಶ ಅನೇಕ ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟು ವಿಭಿನ್ನ ಸಂಸ್ಕೃತಿಯನ್ನು ಪರಿಚಯ ಮಾಡಿಕೊಟ್ಟಿದೆ. ಕೊಪ್ಪಳ ಜಿಲ್ಲೆಯನ್ನಾಳಿದ ಅರಸು ಮನೆತನಗಳಲ್ಲಿ ಪ್ರಥಮವಾಗಿ ಮೌರ್ಯವಂಶ ಹಾಗೂ ನಂತರದಲ್ಲಿ ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ಚಾಲುಕ್ಯರು, ನೊಳಂಬರು, ಕಲಚೂರಿಗಳು, ಹೊಯ್ಸಳರು, ಯಾದವರು, ಹೊಸಮಲೆದುರ್ಗದ ಅರಸರು, ಕನಕಗಿರಿ ಪಾಳೆಗಾರರು, ಕೋಗಳಿ ಕದಂಬರು, ಕರಡಿಕಲ್ಲು ಕದಂಬರು, ಆನೆಗುಂದಿ ಅರಸರು ಆಳಿದ್ದರೆಂದು ಇಲ್ಲಿನ ಶಾಸನ ಮತ್ತು ಬೇರೆ ಬೇರೆ ಆಕರಗಳಿಂದ ತಿಳಿಯಬಹುದಾಗಿದೆ. ಈ ಜಿಲ್ಲೆಯನ್ನಾಳಿದ ಅರಸರಲ್ಲಿ ಮೌರ್ಯ ಚಕ್ರವರ್ತಿ ಅಶೋಕನಿಂದ ಹಿಡಿದು ಹೊಯ್ಸಳರು, ಗಂಗರವರೆಗೆ ಹಾಗೂ ಮುಂದೆ ಆನೆಗುಂದಿ ಅರಸರವರೆಗೆ ನಿರಂತರವಾಗಿ ಬಂದ ರಾಜಕೀಯ ಇತಿಹಾಸವನ್ನು ಈ ಜಿಲ್ಲೆ ಹೊಂದಿದೆ.

ಧರ್ಮವು ಅಂದಿನ ಕಾಲದ ರಾಜ್ಯಾಡಳಿತದಲ್ಲಿ ಮುಖ್ಯ ಪಾತ್ರವಾಗಿತ್ತು. ಕರ್ನಾಟಕದಲ್ಲಿಯೂ ಪ್ರಾಚೀನ ಕಾಲದಿಂದಲೂ ಅನೇಕ ಧರ್ಮಗಳು ಹುಟ್ಟಿ ಪ್ರಭಾವ ಬೀರಿದ ನಿದರ್ಶನಗಳಿವೆ. ಅವುಗಳಲ್ಲಿ ಬೌದ್ಧ, ಜೈನಧರ್ಮಗಳು ಪ್ರಮುಖವೆನಿಸಿವೆ. ಇವುಗಳ ಪ್ರಭಾವದ ಕುರಿತು ಈ ಜಿಲ್ಲೆಯ ಹಲವಾರು ಶಾಸನಗಳು ನಿದರ್ಶನವಾಗಿವೆ. ನಂತರದಲ್ಲಿ ತತ್ವ ಮತ್ತು ನಿಯಮಗಳನ್ನು ರೂಢಿಸಿಕೊಂಡು ಅಸ್ತಿತ್ವಕ್ಕೆ ಬಂದ ವೈಷ್ಣವಪಂಥ, ವೀರಶೈವಪಂಥ ಹಾಗೂ ಇಸ್ಲಾಂಧರ್ಮಗಳು ಇಲ್ಲಿ ಅಚ್ಚಳಿಯದ ಪ್ರಭಾವ ಬೀರಿದ್ದನ್ನು ಶಾಸನಗಳಿಂದ ತಿಳಿದುಬರುತ್ತದೆ.

ಕೊಪ್ಪಳ ಜಿಲ್ಲೆಯ ಶಾಸನಗಳ ಆಧಾರಗಳಿಂದ ಜಿಲ್ಲೆಯ ಕೆಲವು ಅಗ್ರಹಾರಗಳ ಪರಿಚಯವಾಗುತ್ತದೆ. ಈ ಜಿಲ್ಲೆಯ ಮಾದಿನೂರು, ಅಳವಂಡಿ, ಕೌಲೂರು, ಕುಕನೂರು, ತಳಕಲ್, ಇಟಗಿ, ಬೇಳೆಗೆಯೂರು ಮುಂತಾದವು ಪ್ರಮುಖ ಅಗ್ರಹಾರಗಳಾಗಿವೆ. ಈ ಅಗ್ರಹಾರಗಳನ್ನು ಶಾಸನಗಳು ಮುಕ್ತ ಕಂಠದಿಂದ ಹೊಗಳಿವೆ. ಅಗ್ರಹಾರಗಳಂತೆ ಬ್ರಹ್ಮಪುರಿ, ಭತ್ತಗ್ರಾಮಗಳು ಶಿಕ್ಷಣದ ನೆಲೆಗಳಾಗಿರುವುದು ಕಂಡು ಬರುತ್ತದೆ.

ಕನ್ನಡ ನಾಡಿನ ಶಿಲ್ಪಕಲಾ ಪ್ರಪಂಚದ ಬಹುದೊಡ್ಡ ಆಸ್ತಿಯಾಗಿರುವ ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ಧೆ, ಭಕ್ತಿ, ನಂಬಿಕೆಗಳ ಪ್ರತೀಕವಾಗಿ ಬೆಳೆದು ಬಂದಿರುವುದು ತಿಳಿದ ಸಂಗತಿಯಾಗಿದೆ. ಹೊಯ್ಸಳರ ಕಾಲದಲ್ಲಿ ರೂಪಗೊಂಡ ಕಲಾವಾಸ್ತುಶಿಲ್ಪ ವಿಶ್ವಪ್ರಸಿದ್ಧಿ ಪಡೆದಿದೆ. ಅಂದಿನ ಅರಸರು, ರಾಣಿಯರು, ಮಾಂಡಲಿಕರು, ದಂಡನಾಯಕರು ಅಷ್ಟೇ ಅಲ್ಲ ಸಾಮಾನ್ಯ ಜನರೂ ಕೂಡ ದೇವಾಲಯಗಳನ್ನು ಸ್ಥಾಪಿಸುತ್ತಿದ್ದುದು ಆಯಾ ಕಾಲದ ಶಾಸನಗಳ ಮೂಲಕ ತಿಳಿಯಬಹುದಾಗಿದೆ.

ದೇವಾಲಯಗಳು ಸಮಾಜದಲ್ಲಿ ಶಿಕ್ಷಣ ಸಂಸ್ಥೆಗಳಾಗಿ, ಸಾಂಸ್ಕೃತಿಕವಾಗಿ ಸಲ್ಲಿಸಿದ ಸೇವೆಯನ್ನು ಹಾಗೂ ಧಾರ್ಮಿಕವಾಗಿ ಯಾವ ರೀತಿ ಪ್ರಭಾವ ಬೀರಿದ್ದವು ಎನ್ನುವ ಅಂಶ ಶಾಸನಗಳಲ್ಲಿ ಉಕ್ತಗೊಂಡಿದೆ.

ಕನ್ನಡ ನಾಡಿನಲ್ಲಿ ಸಾಮಾಜಿಕ ಸ್ಥಿತಿಗತಿಗಳು ತಲೆಮಾರಿನಿಂದ ತಲೆಮಾರಿಗೆ ಮುಂದುವರೆದುಕೊಂಡು ಬಂದಿವೆ. ಶಾಸನಗಳಲ್ಲಿ ಒಡಮೂಡಿರುವ ಜಾತಿ ಪದ್ಧತಿ, ಸಂಪ್ರದಾಯ ಮತ್ತು ನಂಬಿಕೆಗಳು, ಸ್ತ್ರೀಯರ ಸ್ಥಾನಮಾನ, ವೀರಜೀವನ ಹಾಗೂ ಲೋಕೋಪಯೋಗಿ ಕಾರ್ಯಗಳ ವಿವರಗಳು ದೊರೆಯುತ್ತವೆ.

ಶಾಸನಗಳು ಸಾಹಿತ್ಯಿಕವಾಗಿ ತುಂಬಾ ಮಹತ್ವವನ್ನು ಪಡೆದಿವೆ. ಕನ್ನಡ ಸಾಹಿತ್ಯ ಮತ್ತು ಶಾಸನಗಳ  ಪರಸ್ಪರ ಮತ್ತು ಪೂರಕ ಸಂಬಂಧವನ್ನು ಗ್ರಹಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಶಾಸನಗಳು ಯಾವ ಯಾವ ವಿಷಯಗಳನ್ನು ಮುಖ್ಯವಾಗಿ ಹೇಳಲು ಬಯಸುತ್ತವೆಯೋ ಅವು ಕೊಡುವ ವಿವರಗಳು ನಮಗೆ ಬಹು ಅಮೂಲ್ಯವಾಗಿರುತ್ತವೆ. ಇತಿಹಾಸವನ್ನು ಕುರಿತು ಗಟ್ಟಿಯಾದ, ಖಚಿತವಾದ, ಸ್ಪಷ್ಟವಾದ ಮಾಹಿತಿಯನ್ನು ನೀಡುವ ಪ್ರಮುಖ ಆಧಾರಗಳಾಗಿವೆ ಈ ಶಾಸನಗಳು. ಇವು ಅತ್ಯಂತ ಮಹತ್ವದ ಹಾಗೂ ನಂಬಲರ್ಹವಾದ ಮೂಲಾಧಾರವಾದುದರಿಂದ ಇತರ ಆಧಾರಗಳು ತುಂಬಿಕೊಡಲಾರದ ಕೆಲವು ಅಂಶಗಳನ್ನು ಶಾಸನ ಸಂಪತ್ತು ಒದಗಿಸಿಕೊಟ್ಟಿದೆ. ಆಯಾ ಕಾಲದ ಜನಜೀವನದ ವಿವಿಧ ಮುಖಗಳ ಪರಿಚಯ ಮಾಡಿಕೊಡುವುದರೊಂದಿಗೆ ಅವರ ರೂಢಿ ಪರಂಪರೆಗಳು, ನಂಬಿಕೆ ಮೌಲ್ಯಗಳು, ಪ್ರಗತಿ ಸಾಧನೆಗಳು, ಆಚಾರ–ವಿಚಾರಗಳ ಸ್ಪಷ್ಟ ಚಿತ್ರಣವನ್ನು ನೀಡುವಲ್ಲಿ ಶಾಸನಗಳು ಸಫಲವಾಗಿವೆ.

ಜಿಲ್ಲೆಯ ಶಾಸನಗಳು ತಮ್ಮದೇ ಆದ ವೈಶಿಷ್ಟತೆಯಿಂದ ಇತಿಹಾಸದಲ್ಲಿ ಪ್ರಮುಖ ಪಾತ್ರ ಪಡೆದುಕೊಂಡಿವೆ. ಅವುಗಳ ಒಟ್ಟು ಮೊತ್ತವನ್ನು ಕಲೆಹಾಕಿ ಅದರಿಂದ ಹೊರಬರುವ ಸಂಪೂರ್ಣ ಮಾಹಿತಿಯ ಮೂಲಕ ಕೊಪ್ಪಳ ಜಿಲ್ಲೆಯ ಇತಿಹಾಸದ ಸ್ಥೂಲವಾದ ಚಿತ್ರಣವನ್ನು ಒದಗಿಸಲಾಗಿದೆ. ಹಾಗೂ ಕನ್ನಡ ನಾಡಿನ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ಕೊಪ್ಪಳ ಜಿಲ್ಲೆಯು ಪಡೆದುಕೊಂಡಿರುವ  ಮಹತ್ವವನ್ನು ಅರಿಯಬಹುದಾಗಿದೆ.

ಕೊಪ್ಪಳ ಜಿಲ್ಲೆಯಲ್ಲಿ ದೊರೆತ ಶಾಸನಗಳಲ್ಲಿ ಕನ್ನಡ ಮಾತ್ರವಲ್ಲದೆ ಸಂಸ್ಕೃತ, ಪ್ರಾಕೃತ, ಸಸ್ತಲಿಟ್, ತೆಲುಗು ಹಾಗೂ ಫರ್ಷಿಯಾ ಭಾಷೆಯ ಶಾಸನಗಳೂ ದೊರೆಕಿವೆ. ಈ ಶಾಸನಗಳು ವಿವಿಧ ಅರಸು ಮನೆತನಗಳಿಗೆ ಸಂಬಂಧಿಸಿವೆ. ಯಲಬುರ್ಗಾ ಹಾಗೂ ಕುಷ್ಟಗಿ ತಾಲೂಕಿನಲ್ಲಿ ಕನ್ನಡವನ್ನು ಹೊರತು ಪಡಿಸಿ ಬೇರೆ ಭಾಷೆಯ ಶಾಸನಗಳು ನಮಗೆ ದೊರೆತಿರುವುದಿಲ್ಲ. ಆದರೆ ಗಂಗಾವತಿ ಮತ್ತು ಕೊಪ್ಪಳ

ತಾಲೂಕುಗಳಲ್ಲಿ ಬೇರೆ ಭಾಷೆಯ ಶಾಸನಗಳು ಸಿಗುತ್ತವೆ. ಕೊಪ್ಪಳ ತಾಲೂಕಿನ ಪ್ರಾಚೀನ ಕಾಲದ ಶಾಸನ ಪ್ರಾಕೃತ ಭಾಷೆಯಲ್ಲಿದೆ. ಇದು ಮೌರ್ಯರ ಕಾಲದ್ದು. ಅದೇ ರೀತಿ ಸಂಸ್ಕೃತ ಹಾಗೂ ಫರ್ಷಿಯಾ ಭಾಷೆಯ ಶಾಸನಗಳು ಈ ತಾಲೂಕಿನಲ್ಲಿ ದೊರೆತಿವೆ. ಹಾಗೂ ಸಸ್ತಲಿಟ್ ಲಿಪಿಯ ಒಂದು ಶಾಸನವೂ ದೊರಕಿದೆ. ಗಂಗಾವತಿ ತಾಲೂಕಿನಲ್ಲಿ ಸಂಸ್ಕೃತ ಹಾಗೂ ತೆಲುಗು ಭಾಷೆಯ ಶಾಸನಗಳು ದೊರೆತಿವೆ. ಜಿಲ್ಲೆಯಲ್ಲಿ ದೊರೆತ(ಪ್ರಕಟಿತ) ಭಾಷಾವಾರು ಶಾಸನಗಳ ಕೋಷ್ಟಕವನ್ನು ಈ ಮುಂದಿನಂತೆ ನೋಡಲಾಗಿದೆ.

| ಕ್ರ.ಸಂ | ತಾಲೂಕು | ಕನ್ನಡ | ಸಂಸ್ಕೃತ | ಪರ್ಷಿಯಾ | ಪ್ರಾಕೃತ | ತೆಲುಗು | ಸಸ್ತಲಿಟ್ | ಒಟ್ಟು |
|---|---|---|---|---|---|---|---|---|
| 1 | ಕೊಪ್ಪಳ | 166 | 02 | 03 | 02 | – | 01 | 174 |
| 2 | ಯಲಬುರ್ಗಾ | 72 | – | – | – | – | – | 72 |
| 3 | ಕುಷ್ಟಗಿ | 31 | – | – | – | – | – | 31 |
| 4 | ಗಂಗಾವತಿ | 108 | 02 | – | – | 03 | – | 113 |
| | ಒಟ್ಟು | 377 | 04 | 03 | 02 | 03 | 01 | 390 |

ಕೊಪ್ಪಳ ಜಿಲ್ಲೆಯಲ್ಲಿ ಮೌರ್ಯರಿಂದ ಹಿಡಿದು ವಿಜಯನಗರದೋತ್ತರದವರೆಗೆ ಹಲವು ಬಗೆಯ ಶಾಸನಗಳು ದೊರೆತಿವೆ. ಈ ಶಾಸನಗಳ ಆಧಾರದಿಂದ ಈ ಜಿಲ್ಲೆಯಲ್ಲಿನ ರಾಜಮನೆತನಗಳ ಆಳ್ವಿಕೆಯ ವಿವರವನ್ನು ತಿಳಿಯಬಹುದಾಗಿದೆ. ಈಗ ದೊರೆತಿರುವ ಶಾಸನಗಳಲ್ಲಿ ಅತ್ಯಂತ ಪ್ರಾಚೀನವಾದ ಶಾಸನ ಅಶೋಕನ ಕಾಲದ್ದಾಗಿದೆ. ನಂತರದಲ್ಲಿ ವಿವಿಧ ಅರಸು ಮನೆತನಗಳಿಗೆ ಸಂಬಂಧಿಸಿದ ಶಾಸನಗಳು ದೊರೆತಿವೆ.

ಒಟ್ಟಾರೆಯಾಗಿ ಜಿಲ್ಲೆಯ ಎಲ್ಲಾ ಶಾಸನಗಳನ್ನು ಗಮನಿಸಿದಾಗ ಕೊಪ್ಪಳ ನಾಡು ಸಾಂಸ್ಕೃತಿಕ ಹಿರಿಮೆಯಿಂದ ಕೂಡಿದ್ದು ಕಂಡುಬರುತ್ತದೆ. ಅಲ್ಲದೇ ಸಂಪದ್ಭರಿತವಾಗಿ ಅನೇಕ ಅರಸುಮನೆತನಗಳನ್ನು ಕಂಡ ತಿರುಳ್ಗನ್ನಡನಾಡಾಗಿ ಮೆರೆದಿದೆ. ಕೊಪ್ಪಳವು ಕನ್ನಡ ನಾಡಿಗೆ ತನ್ನದೇ ಆದ ಕೊಡುಗೆಯನ್ನು ನೀಡಿರುವುದು ಶಾಸನಗಳ ಆಧಾರದಲ್ಲಿ ತಿಳಿಯಬಹುದು.

## ಆಕರ ಗ್ರಂಥಗಳು :–

1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999

2) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020

3) ಹಂಪ ನಾಗರಾಜಯ್ಯ, ಕೊಪ್ಪಳ ಶಾಸನಗಳು, ರತ್ನತ್ರಯ ಪ್ರಕಾಶನ, ಮೈಸೂರು–1998

4) ಡಾ. ಎಂ. ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, (5ನೇ ಮುದ್ರಣ) ಸ್ವಪ್ನ ಬುಕ್, ಹೌಸ್, ಬೆಂಗಳೂರು–2011

5) ಡಾ. ರವಿ ಎನ್. ಚವ್ಹಾಣ, ಕುಷ್ಟಗಿ ತಾಲೂಕಿನ ಶಾಸನಗಳು ಹಾಗೂ ಸ್ಮಾರಕಗಳು, ಆದಿ ಪ್ರಕಾಶನ, ಗಂಗಾವತಿ–2022

6) ಡಾ. ಶರಣಬಸಪ್ಪ ಕೋಲ್ಕಾರ, ಕೊಪ್ಪಳ, ಹಂಪಿ ಪ್ರದೇಶ ಚರಿತ್ರೆ ಮತ್ತು ಪುರಾತತ್ವ ಮಣಿ ಪ್ರಕಾಶನ, ಮೈಸೂರು–2021

7) ಡಾ. ಗೀತಾ ಪಾಟೀಲ, ಕೊಪ್ಪಳ ಜಿಲ್ಲೆಯ ವಾಸ್ತು–ಶಿಲ್ಪ–ಸಂಸ್ಕೃತಿ, ತಿಳಿವು ಪ್ರಕಾಶನ, ವಳವಂಡಿವಾಡಿ–2021

* * * * *

# ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಸಾಹಿತ್ಯ

ಶಾಸನಗಳು ಮತ್ತು ಸಾಹಿತ್ಯ ಒಂದು ನಾಣ್ಯದ ಎರಡು ಮುಖಗಳಿದ್ದಂತೆ, ಗಂಡ ಹೆಂಡತಿಯ ಸಂಬಂಧವಿದ್ದಂತೆ, ಇತಿಹಾಸದ ಎಷ್ಟೋ ವಿಷಯಗಳು ಶಾಸನಗಳಿಂದಲೇ ವ್ಯಕ್ತವಾಗುತ್ತವೆ. ಶಾಸನಗಳಿಂದ ದೊರೆತ ಇತಿಹಾಸವನ್ನು ಖಾತ್ರಿ ಅಥವಾ ಖಚಿತತೆ ಎಂದು ಹೇಳಬಹುದು. ಶಾಸನಗಳು ಒದಗಿಸಿದ ನಿಖರ ಇತಿಹಾಸವನ್ನು ಬೇರೆ ಯಾವ ಆಕರಗಳೂ ಒದಗಿಸಲಾರವು. ಒಂದು ವೇಳೆ ಅವು ಒದಗಿಸಿದರೂ ಗೌಣ ಆಕರಗಳಾಗುತ್ತವೆ.

ಶಾಸನಗಳೆಂದರೆ ಕೇವಲ ಇತಿಹಾಸವನ್ನಷ್ಟೇ ಅನಾವರಣ ಮಾಡುವ ಸೀಮಿತದ ಆಕರಗಳಲ್ಲ. ಇತಿಹಾಸದ ಜೊತೆಗೆ ಬೇರೆ-ಬೇರೆ ಎಷ್ಟೋ ಸಂಗತಿಗಳನ್ನು ಬಿತ್ತರಿಸುವ ಸಾಕ್ಷಿಗಳಾಗಿವೆ. ಅವುಗಳಲ್ಲಿ ಸಾಹಿತ್ಯಕ ಅಂಶಗಳೂ ಹೇರಳವಾಗಿ ದೊರಕುತ್ತವೆ. ಹೀಗಾಗಿ ಸಾಹಿತ್ಯ ಮತ್ತು ಶಾಸನಗಳಿಗೆ ಅವಿನಾಭಾವ ಸಂಬಂಧವಿದೆ. ಶಾಸನಗಳು ಸಾಹಿತ್ಯದ ಒಂದು ಭಾಗ ಎಂದರೆ ತಪ್ಪಾಗಲಾರದು. ಶಾಸನಗಳಲ್ಲಿ ಹೇಳುವ ವಿಷಯ-ವಿಚಾರಗಳು ಕ್ರಮಬದ್ಧವಾಗಿರಬೇಕು. ವರ್ಣನಾತ್ಮಕವಾಗಿರಬೇಕು, ಅಂದಾಗ ಮಾತ್ರ ಆ ಶಾಸನ ಹೆಚ್ಚು ಪರಿಣಾಮ ಬೀರುತ್ತದೆ ಎಂದು ಶಾಸನ ಕವಿಗಳು ಭಾವಿಸಿದ್ದರು. ಆದ್ದರಿಂದಲೇ ಕವಿಗಳು ಶಾಸನಗಳನ್ನು ಸಾಹಿತ್ಯಬದ್ಧವಾಗಿ ಕೆತ್ತುತ್ತಿದ್ದರು. ಹಲ್ಮಿಡಿ ಶಾಸನ, ಬಾದಾಮಿ ಶಾಸನ, ಅರ್ಜುನವಾಡ ಶಾಸನ, ಲಕ್ಕುಂಡಿ ಶಾಸನ ಮುಂತಾದ ಎಷ್ಟೋ ಶಾಸನಗಳು ಸಾಹಿತ್ಯವನ್ನು ಹದಗೊಳಿಸಿವೆ ಎಂದರೆ ತಪ್ಪಾಗಲಾರದು.

ಕೊಪ್ಪಳ ಜಿಲ್ಲೆಯ ಇತಿಹಾಸ ಸಂಪತ್ಭರಿತವಾಗಿತ್ತು ಎಂದು ಹೇಳುವುದಕ್ಕೆ ಇಲ್ಲಿ ಹುಲುಸಾಗಿ ದೊರೆತ ಶಾಸನಗಳೇ ಸಾಕ್ಷಿ. ಇದು ಬೌದ್ಧ, ಜೈನ, ವೈಷ್ಣವ, ವೀರಶೈವ ಮತ್ತು ಮುಸ್ಲಿಂ ಧರ್ಮಗಳ ಆಡಂಬೋಲಾ ತಾಣವಾಗಿತ್ತೆಂದು ಇಲ್ಲಿನ ಶಾಸನಗಳ ಮುಖಾಂತರ ತಿಳಿಯಬಹುದಾಗಿದೆ. ಜಿಲ್ಲೆಯಲ್ಲಿ ಸುಮಾರು 390 ಕ್ಕೂ ಹೆಚ್ಚಿನ ಶಾಸನಗಳು ಲಭ್ಯವಾಗಿವೆ. ಅವುಗಳಲ್ಲಿ ಹೆಚ್ಚಿನ ಶಾಸನಗಳು ಸಾಹಿತ್ಯಕ ಗುಣಾಂಶಗಳಿಂದ ಕೂಡಿವೆ. ಇಲ್ಲಿನ ಶಾಸನ ಕವಿಗಳು ದೊಡ್ಡ-ದೊಡ್ಡ ಪಂಡಿತರು, ಸಾಹಿತಿಗಳು ಆಗಿದ್ದರು ಎನ್ನುವುದು ಅವರಿಂದ ರಚಿತವಾದ ಶಾಸನಗಳ ಮೂಲಕ ತಿಳಿಯಬಹುದಾಗಿದೆ. ಜಿಲ್ಲೆಯ ಶಾಸನಗಳಲ್ಲಿ ಅನೇಕ ಶಾಸನಕವಿಗಳು ಉಲ್ಲೇಖಗೊಂಡಿದ್ದಾರೆ. ಕವಿಕಂದರ್ಪ, ಮಲ್ಲಕವಿ, ಇನ್ದಯ್ಯ, ಸಮಂತಭದ್ರ ಭಟಾರ, ಪಿಟೋಜ, ಮೈದುನ ಮಾದೆಯ ಹೆಗ್ಗಡೆ, ಬಿರುದರ ಪೆಂಡಿರಗಂಡ ಪೇಷಯ್ಯ, ಸಜ್ಜನ ತಿಲಕ, ಗೋಮಕವಿ, ಆದಿತ್ಯದೇವ, ರಾಮೋಜ, ಗಿರಿಜೇಶ, ಸೇನಬೋವ ಬಂಮರಸ ಮುತಾದ ಶಾಸನಕವಿಗಳು ಜಿಲ್ಲೆಯಲ್ಲಿದ್ದರೆಂದು ತಿಳಿದುಬರುತ್ತದೆ.

ಕವಲೂರಿನ ಕ್ರಿ.ಶ 1177ರ ಶಾಸನದಲ್ಲಿ ಕವಿಕಂದರ್ಪನ ಉಲ್ಲೇಖ ಬರುತ್ತದೆ. ಇವನೊಬ್ಬ ಚತುರ್ಭಾಷ ಕವಿ ಚಕ್ರವರ್ತಿಯಾಗಿದ್ದನೆಂದು ಪ್ರಸ್ತುತ ಶಾಸನದಲ್ಲಿ ವರ್ಣಿಸಿದೆ. ಒಬ್ಬ ಶಾಸನ ಕವಿಯು ಬೇರೆ-ಬೇರೆ ಭಾಷೆಯ ಬಲ್ಲ ವಿದ್ವಾಂಸನಾಗಿದ್ದನೆಂದು ತಿಳಿಯಬಹುದಾಗಿದೆ. ಕ್ರಿ.ಶ 1170ರ ಕುಕನೂರಿನ ಶಾಸನದಲ್ಲಿ ಕವಿ ಸಜ್ಜನ ತಿಲಕನ ಬಗ್ಗೆ ವಿವರವಿದೆ. ಈ ಶಾಸನ ಸಾಹಿತ್ಯಕ ಹೆಚ್ಚಿನ ಅಂಶಗಳಿಂದ ಕೂಡಿದೆ. ಅದರಲ್ಲಿ ಸಂಸ್ಕೃತ ಪದ್ಯಗಳ ಜೊತೆಗೆ, ಕನ್ನಡದ ಪದ್ಯಗಳು ಮತ್ತು ಚಂಪಕಮಾಲ, ಉತ್ಪಲಮಾಲ, ಮತ್ತೇಭ ವಿಕ್ರೀಡತ, ಸ್ರಗ್ದರವೃತ ಮುಂತಾದ ಛಂದಸ್ಸಿನ ರೂಪಗಳು ಇರುವುದು ಕಂಡುಬರುತ್ತದೆ. ಇಲ್ಲಿ ಶಾಸನಗಳಲ್ಲಿಯೂ ಸಹ ಛಂದಸ್ಸಿನ ಬಳಕೆ ಮಾಡಿರುವುದು ಎದ್ದುಕಾಣುತ್ತದೆ. ಅಂದರೆ ಛಂದಸ್ಸಿನ ಪ್ರಕಾರಗಳನ್ನು ಕೇವಲ ಕಾವ್ಯಗಳಲ್ಲಿ ಮಾತ್ರ ಬಳಕೆ ಮಾಡಬೇಕೆಂಬ ನಿಯಮವಿಲ್ಲ. ಈ ಹಿನ್ನೆಲೆಯಲ್ಲಿ ಶಾಸನಗಳಲ್ಲಿನ ವಿವರ ಸಾಹಿತ್ಯಕ ಅಂಶಗಳಿಂದ ಕೂಡಿರುತ್ತಿದ್ದವು ಎನ್ನುವದಕ್ಕೆ ಈ ಶಾಸನಗಳೇ ಸಾಕ್ಷಿ. ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖಿತ ಶಾಸನ ಕವಿಗಳಲ್ಲಿ ಗಿರಿಜೇಶ ಎಂಬುವವನೂ ಒಬ್ಬ ಪ್ರಮುಖ ಕವಿಯಾಗಿದ್ದನು. ಈತನಿಂದ ರಚಿತವಾದ ಸುಮಾರು 13ನೇ ಶತಮಾನಕ್ಕೆ ಸೇರಿದ ಆನೆಗುಂದಿ ತಾಮ್ರಶಾಸನ ಬಹಳ ಪ್ರಮುಖವಾದದ್ದು. ಅದರಲ್ಲಿ ಗಿರಿಜೆ ಕಲ್ಯಾಣವನ್ನು ವಿವರಿಸುತ್ತದೆ. ಪ್ರಸ್ತುತ ಈ ತಾಮ್ರಶಾಸನ ಎಂಟು ಹಲಗೆ(ಪಟ)ಗಳಿಂದ ಕೂಡಿದ್ದು 296 ಸಾಲುಗಳನ್ನು ಹೊಂದಿದ ಬಹಳ ಸುದೀರ್ಘವಾದ ಶಾಸನವಾಗಿದೆ. ಅದರಲ್ಲಿ ಕುಂಬಾರರ ಕುಲದ ಹುಟ್ಟಿನ  ಹೆಗ್ಗಳಿಕೆಯನ್ನು ಹೇಳುವುದರ ಜೊತೆಗೆ, ಶಿವ-ಪಾರ್ವತಿ ವಿವಾಹದ ಕತೆಯನ್ನು ವಿವರಿಸಲಾಗಿದೆ. ಇದರ ಜೊತೆಗೆ ಅಮೃತ ಮಥನ ಕಥೆಯನ್ನೂ ಕವಿ ಇಲ್ಲಿ ಹೇಳಿದ್ದಾನೆ. ಈ ಶಾಸನ ಅಂಶ ಛಂದಸ್ಸಿನ ಅತ್ಯಂತ ಪ್ರಾಚೀನ ಶಾಸನಸ್ಥ ಜಾನಪದಕೃತಿಯೆನಿಸಿಕೊಂಡಿದೆ. ಅದರಲ್ಲಿ ಅಂಶಷಟ್ಪದಿ, ಮಾತ್ರಾವೃತ್ತ, ಅಂಶವೃತ್ತ ಮುಂತಾದ  ಛಂದಸ್ಸಿನ ರೂಪಗಳು ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ.

ಜಿಲ್ಲೆಯ ಶಾಸನಗಳು ಅನೇಕ ವಿಶೇಷ ಸಾಹಿತ್ಯಕ ಅಂಶಗಳಿಂದ ಕೂಡಿವೆ. ಅವುಗಳಲ್ಲಿ ಕ್ರಿ.ಶ. 1061ರ ಅಳವಂಡಿಯಲ್ಲಿ ದೊರೆತ ಶಾಸನವೂ ಒಂದಾಗಿದೆ. ಪ್ರಸ್ತುತ ಶಾಸನದ ಪಾಠ ಹೀಗಿದೆ:-

ಮಾಹಾ ಬ್ರಾಹ್ಮಣ್ದಂ ಚತುಸ್ಸಮುದ್ರ ಪರಿಮಣ್ಡಳಮಣ್ಡಿತರ್। ಷಡ್ಗುಣಾಖಣ್ಡಿತರ್। ಯಮನಿಯಮ ಸ್ವಾಧ್ಯಾಯ ಧ್ಯಾನ ಮೋನಾನುಷ್ಠಾಣ ಪರಾಯಣರ್। ಅಘಘುನ ಸಮೀರಣರ್। ಚತುರ್ವ್ವೇದಾದ್ದ್ಯಾದಸ ಧರ್ಮ್ಮಶಾಸ್ತ್ರ ಪುರಿವ್ಯಾನಿಗಳ್। ಅಲಸ್ಯಾಭಿಮಾನಿಗಳ್ ಪ್ರಭುಮಂತ್ರೋತ್ಸಾಹ ಶಕ್ತಿತ್ರಯ ವಿರಾಜಿತರ್। ಭುವನಜನ ಪೂಜಿತರ್। ಲೋಕ ವಿಖ್ಯಾತರ್। ಭೂವಳಯ ಪೂತರ್। ಮನುಮಾರ್ಗ್ಗ ಚರಿತರ್। ನಿಶ್ಯೇಷ ದುರಿತರ್। ಉಚಿತಾಚಾರರ್। ಅನ್ಯಾಯ ದೂರರ್। ಇನಸೂನು ಸತ್ಯರ್।

ಶಿಷ್ಟ ಸಂಗತ್ಯರ್। ಅಭಿನವ ಯುಧೀಷ್ಠರರ್। ದುಷ್ಟಜನ ನಿಷ್ಠೂರರ್। ಮಿತ್ರೋಪಕಾರಿಗಳ್। ಶತ್ರು ಸಂಹಾರಿಗಳ್। ಶೌಚಾಂಜನೇಯರ್। ನಿರ್ಮ್ಮಳಿನ ಕಾಯರ್ ಶ್ರೀ ಮದಳವಿಣ್ಡಿಯ ಮಹಾಜನ ನಾರ್ಙೂರ್ವ್ವರೂರೊಡೆಯರ ಸನ್ನಿಧಿಯೋಳು.... ಎಂದು ಅಲ್ಲಿನ ಜನರ ವರ್ಣನೆ ಬರುತ್ತದೆ.

ಈ ಮೇಲಿನ ಶಾಸನದ ಪಾಠ್ಯವನ್ನು ಓದುತ್ತಾ ಹೋದರೆ ಕವಿರಾಜಮಾರ್ಗದ ಸಾಲುಗಳು ನೆನಪಿಗೆ ಬರುತ್ತದೆ. ಸುಭಟರ್ಕಳ್, ಸುಕವಿಗಳ್, ಸುಪ್ರಭುಗಳ್, ಚಲುವರ್ಕಳ್ ಭಿಜನರ್ಕಳ್, ಗುಣಿಗಳ್, ಅಭಿಮಾನಿಗಳುತ್ಯುಗ್ರರ್ ಗಂಭೀರ ಚಿತ್ತಾರ್ ವಿವೇಕಿಗಳ ನಾಡವರಗಳ್.... ಎಂದು ಕನ್ನಡ ನಾಡಿನ ಜನರ ವರ್ಣನೆಯಿದೆ.

ಅಂದರೆ ಅಳವಂಡಿಯ ಶಾಸನವನ್ನು ಬರೆದ ಮಲ್ಲಕವಿಯು ಕವಿರಾಜ ಮಾರ್ಗವನ್ನು ಅಧ್ಯಯನ ಮಾಡಿದಂತೆ ತಿಳಿದುಬರುತ್ತದೆ. ಮೇಲಿನ ಎರಡೂ ಅಂಶಗಳನ್ನು ಗಮನಿಸಿದಾಗ ಸಾಹಿತ್ಯ ಮತ್ತು ಶಾಸನಗಳ ಸಂಬಂಧವನ್ನು ಗಟ್ಟಿಗೊಳಿಸುತ್ತವೆ.

ಅದೇ ರೀತಿಯಾಗಿ ಜಿಲ್ಲೆಯ ಯಲಬುರ್ಗಾ ತಾಲೂಕಿನ ಮುಧೋಳು ಗ್ರಾಮದ ಕ್ರಿ.ಶ. 1154ರ ಒಂದು ಶಾಸನದಲ್ಲಿ ಪಂಪನ ವಿಕ್ರಮಾರ್ಜುನ ವಿಜಯದ ಸಾಲುಗಳಂತೆ ಭಾಸವಾಗುತ್ತದೆ. ಅದರ ಪಾಠ ಹೀಗಿದೆ.

ಶ್ರೀ ಮದಯ್ಙೂರ್ವ್ವರ ಪರಾಕ್ರಮವೆನ್ತಂದಡೆ ಬಲದೊಳು ಬಾಲಿಯಂ। ಚಲದೋಳು ದುರ್ಯೋಧನನಂ ಸತ್ಯದೊಳು ಧರ್ಮ್ಮಪುತ್ರನಂ ಸಾಹಸದೋಳು ಭೀಮನಂ। ಪರಾಕ್ರಮದೊಳರ್ಜುನನಂ। ಅಳೆತೆದೊಳ ಸಹದೇವನಂ। ಸೌಚದೊಳು ಗಾಂಗೇಯನಂ। ತೇಜದೊಳಾದಿತ್ಯನಂಬೋಗದೊಳಿಂದ್ರನಂ। ತ್ಯಾಗದೊಳು ಕರ್ಣ್ನನಂ। ಕೋಪದೊಳಗ್ನಿಯಂ ಬಲ್ಲಾಳ್ತನದೊಳು ಜವನಂ। ಪೆಂಪಿಂದಾಕಾಶಮಂ। ಬಿಣ್ಪಿಂ ಧರಣಿಯಂ। ಗುಣ್ಪಿಂ ಮಹಾಸಮುದ್ರಮಂ ಪೋಲ್ವಯ್ಙೂರ್ವ್ವರ ಮಹಿಮೆಯೆಂತೆಂದಡೆ ॥ ........

ಈ ಮೇಲಿನ ಶಾಸನಗಳನ್ನು ಗಮನಿಸಿದರೆ ಪಂಪ ಭಾರತದ ಸಾಲುಗಳಾದ: ಛಲದೋಳ್ ದುರ್ಯೋಧನಂ। ನನ್ನಿಯೊಳನಿತನಯಂ ಗಂಡಿನೊಳ್ ಭೀಮನಸೇನಂ। ಬಲದೋಳ್ ಮುದ್ರಸೇಶನ್ ಅತ್ಯುನ್ನತಿಯೊಳಮರ ಸಿಂಧೊದ್ಭವಂ ಚಾಪವಿದ್ಯಾ ಬಲದೊಳ್ ಕುಂಬೋದ್ಭವಂ ಸಾಹಸದ ಮಹಿಮೆಯೊಳ್ ಮಲ್ಗಣಂ ಧರ್ಮದೊಳ್ ನಿರ್ಮಲ ಚಿತ್ತಂಧರ್ಮಪುತ್ರನ್ ಮಿಗಲ್ ಇವರ್ಗಳಿನೀ ಭಾರತಂ ಲೋಕ ಪೂಜ್ಯಂ....... ಎಂಬ ಪಂಪ ಮಹಾಕವಿಯ ಮಾತುಗಳು ಇಲ್ಲಿ ನೆನಪಿಗೆ ಬರುತ್ತವೆ.

ಜಿಲ್ಲೆಯ ಶಾಸನಗಳಲ್ಲಿ ಸಾಹಿತ್ಯಕ ಅಂಶಗಳು ಹೇರಳವಾಗಿ ದೊರೆಯುತ್ತವೆ. ವರ್ಣವೃತ್ತಾಗಳು ಮಾತ್ರಾವೃತ್ತಾಗಳು ಕರ್ನಾಟಕ ವಿಷಯ ಜಾತಿಗಳು, ಅಂಶವೃತ್ತಾಗಳು ಇತ್ಯಾದಿ ಛಂದಸ್ಸಿನ ರೂಪಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ.

ಕೊಪ್ಪಳದ ಆಗ್ನೇಯ ದಿಕ್ಕಿನ ಕೋಟೆಗೆ ಸೇರಿದ ಶಾಸನದಲ್ಲಿ ಚಂಪಕ ಮಾಲೆಯ ಪದ್ಯವಿದೆ.

ಜನಪತಿ ಬೂತುಗಂ ನೆಗಳ್ದ ಸಂಕರಗಂಡನ ಮಾರಸಿಂಹದೇ
ವನ ಮಹಿಮಾಸ್ಪದಂ ಮರುಳದೇವನ ರಾಯನ ರಾಜಮಲ್ಲದೇ
ವನ ಗುಣದಂಕಕಾರ್ತ್ತಿಯ ಪರೋಕ್ಷದೊಳೀಜನಧರ್ಮ್ಮ ಮಂತುತಾ
ನನು ದಿನ ಮಾನ್ತು ನಿತ್ತರಿಸ ರೇವಕನಿಮ್ಮಡೆಯೇ ಕೃತಾರ್ತ್ಥಯೋ॥

ಹೀಗೆ ಜಿಲ್ಲೆಯ ಶಾಸನಗಳಲ್ಲಿ ಸಾಹಿತ್ಯಕ ಅಂಶಗಳು ಹೇರಳವಾಗಿ ದೊರೆಯುತ್ತವೆ. ಕನ್ನಡ ಭಾಷೆಯ ಜೊತೆಗೆ ಸಂಸ್ಕೃತ, ಫರ್ಷಿಯಾ, ತಲುಗು, ಸಸ್ತಲಿಟ್ ಇತ್ಯಾದಿ ಭಾಷೆಯ ಶಾಸನಗಳೂ ಇಲ್ಲಿ ಲಭ್ಯವಾಗಿವೆ. ಹೆಚ್ಚಿನ ಶಾಸನಗಳಲ್ಲಿ ಆರಂಭದಲ್ಲಿ ಶ್ಲೋಕಗಳು ಕಂಡುಬರುತ್ತವೆ. ಅವರವರ ಧರ್ಮದ ಶ್ಲೋಕಗಳನ್ನು ಬರೆಸಿ ಶಾಸನಗಳನ್ನು ಪ್ರಾರಂಭಿಸಲಾಗಿದೆ. ಅವು ಏನೇ ಇದ್ದರೂ ಈ ಕೊಪ್ಪಳ ಶಾಸನಗಳ ಭಾಷೆ ಮತ್ತು ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ ಎಂಬುದರಲ್ಲಿ ಅನುಮಾನವಿಲ್ಲ.

## ಆಕರ ಗ್ರಂಥಗಳು :–

1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020
3) ಹಂಪ ನಾಗರಾಜಯ್ಯ, ಕೊಪ್ಪಳ ಶಾಸನಗಳು, ರತ್ನತ್ರಯ ಪ್ರಕಾಶನ, ಮೈಸೂರು–1998

* * * * *

# ಕೊಪ್ಪಳ ಜಿಲ್ಲೆಯ ಶಾಸನ ಕವಿಗಳು

'ಕೂಗುತ್ತಿವೆ ಕಲ್ಲುಗಳು ಕಿವಿಯತ್ತಾ ಕಿವುಡರೀರಾ ಕೇಳಿರಿ ಆ ಸೊಲ್ಲಾ' ಎಂಬ ಕುವೆಂಪು ಅವರ ನುಡಿಯನ್ನು ಕೇಳಿದರೆ ಬಹುಶ: ನಾವು ಆ ಕಲ್ಲು ಶಾಸನವನ್ನು ಎಷ್ಟು ನಿರ್ಲಕ್ಷಿಸಿದ್ದೇವೆ ಎಂಬುದು ವ್ಯಕ್ತವಾಗುತ್ತದೆ. ಶಾಸನ ಎಂದರೆ ಕೇವಲ ಆದೇಶವನ್ನಷ್ಟೇ ಹೇಳುವ ಕಲ್ಲು ಆದೇಶವಲ್ಲ; ಅದು ನಮ್ಮ ಇತಿಹಾಸ–ಸಂಸ್ಕೃತಿಯನ್ನು, ಆಚಾರ–ವಿಚಾರಗಳನ್ನು ಒಟ್ಟಾರೆ ಬದುಕಿನ ಮಜಲುಗಳನ್ನು ಅನಾವರಣಗೊಳಿಸುವ ಕಡತಗಳಾಗಿವೆ. ಇಂತಹ ಶಾಸನಗಳು ಇತಿಹಾಸ–ಸಂಸ್ಕೃತಿಯನ್ನು ಹೇಳುವುದರ ಜೊತೆಗೆ ಎಷ್ಟೋ ಸಾಹಿತ್ಯಿಕ ಅಂಶಗಳನ್ನು ವ್ಯಕ್ತಪಡಿಸುತ್ತವೆ.

ಶಾಸನಗಳು ಮತ್ತು ಸಾಹಿತ್ಯ ನಾಣ್ಯದ ಎರಡು ಮುಖಗಳಿದ್ದಂತೆ. ಶಾಸನಗಳಲ್ಲಿ ಹೇಳುವ ವಿಷಯ–ವಿಚಾರಗಳು ಕ್ರಮಬದ್ಧವಾಗಿರಬೇಕು, ವರ್ಣಮಯವಾಗಿರಬೇಕು ಎಂಬುದು ಒಪ್ಪಿಕೊಳ್ಳುವ ವಿಚಾರವಾಗಿದೆ. ಶಾಸನಗಳು ಕಾವ್ಯಮಯವಾಗಿ– ವರ್ಣನಾತ್ಮಕವಾಗಿದ್ದರೆ ಅದು ಹೆಚ್ಚು ಪರಿಣಾಮ ಬೀರುತ್ತದೆ. ಆದ್ದರಿಂದಲೇ ಸಾಹಿತ್ಯಿಕ ಅಂಶಗಳಿಂದ ಕೂಡಿದ ಇಂತಹ ಶಾಸನಗಳನ್ನು ಯಾರೂ ಬೇಕಾದರೂ ರಚಿಸುವಂತಹ ವಾತಾವರಣವಿರಲಿಲ್ಲ. ಅವುಗಳನ್ನು ರಚಿಸುವವರು ಪಂಡಿತ–ವಿದ್ವಾಂಸರೇ ಇರಬೇಕಾಗಿರತ್ತಿತ್ತು. ಅರಸರು ಅಥವಾ ಸಮಾಜ ವಿದ್ವಾಂಸರನ್ನು ಗುರುತಿಸಿ ಅವರನ್ನು ಶಾಸನ ರಚನೆಕಾರರು ಅಥವಾ ಶಾಸನ ಕವಿಗಳು ಎಂದು ಹೇಳುತ್ತಿದ್ದರು. ಆದರೆ ಶಾಸನ ಕೇವಲ ಒಬ್ಬ ವ್ಯಕ್ತಿಯಿಂದ ಮಾತ್ರ ತಯಾರಾಗುತ್ತಿರಲಿಲ್ಲ; ಕವಿ, ಲಿಪಿಕಾರ ಮತ್ತು ರೂವಾರಿ ಎಂಬ ಮೂರು ಜನ ವಿದ್ವಾಂಸರ ಸಂಯುಕ್ತದಿಂದ ರಚನೆಯಾಗುತ್ತಿತ್ತು. ಹೇಳಬೇಕಾದ ಆದೇಶ–ವಿಚಾರಗಳನ್ನು ಕವಿಯಾದವನೂ ಕಾವ್ಯಮಯವಾಗಿಯೋ, ವರ್ಣನಾತ್ಮಕವಾಗಿಯೋ ಅಥವಾ ಸಾಹಿತ್ಯಿಕ ಅಂಶಗಳಿಂದ ಕೂಡಿದ ಶಾಸನವನ್ನು ಮೊದಲು ತಯಾರಿಸಿದರೆ; ಲಿಪಿಕಾರನು ಶಾಸನ ಕವಿಯು ತಯಾರಿಸಿದ ಶಾಸನವನ್ನು ಕಲ್ಲಿನ ಮೇಲೆ ಬರೆ(ಲಿಪಿ)ಯುತ್ತಾನೆ. ನಂತರ ಕೊನೆಯದಾಗಿ ರೂವಾರಿಯು ಶಿಲ್ಪಿಯಂತೆ ಆ ಶಾಸನವನ್ನು ಕೆತ್ತುತ್ತಾನೆ. ಈ ರೀತಿಯಾಗಿ ಒಂದು ಶಾಸನ ಮೂರು ಜನ ಪಂಡಿತರೊಂದಿಗೆ ನಿರ್ಮಾಣವಾಗುತ್ತಿತ್ತು. ಕೆಲವೊಂದು ಸಲ ಈ ಮೂರು ಕಾರ್ಯಗಳನ್ನೂ ಒಬ್ಬನೇ ನಿರ್ವಹಿಸಿದ ಉದಾಹರಣೆಗಳು ಸಾಕಷ್ಟು ಶಾಸನಗಳಲ್ಲಿ ನಿದರ್ಶನಗಳಿವೆ. ಹೆಚ್ಚಿನ ಶಾಸನಗಳಲ್ಲಿ ಶಾಸನ ನಿರ್ಮಾತೃಗಳ ಯಾರ ಹೆಸರೂ ಇಲ್ಲದಿರುವ ಉದಾಹರಣೆಗಳೇ ಹೆಚ್ಚು. ಆದರೆ ಈ ಮೂರು ಜನರಲ್ಲಿ ಶಾಸನ ಕವಿಯ ಪಾತ್ರ ಬಹಳ ಮುಖ್ಯವಾಗಿರುತ್ತಿತ್ತು. ಇವರುಗಳ ವಿವರಗಳು ಶಾಸನದ

ಕೊನೆಗೆ ಲಿಖಿತಂ, ಬರೆದಂ, ಬರೆಪಂ, ಪೇಳಿದ, ನಿಲ್ಲಿಸಿದ ಇತ್ಯಾದಿ ವಿಶೇಷಣಗಳಿಂದ ಉಲ್ಲೇಖಿತಗೊಂಡಿವೆ.

ಕೊಪ್ಪಳ ಜಿಲ್ಲೆಯ ಇತಿಹಾಸವೂ ಸಂಪದ್ಭರಿತವಾಗಿತ್ತು ಎಂದು ಹೇಳುವುದಕ್ಕೆ ಇಲ್ಲಿ ದೊರೆತ ಅಪಾರವಾದ ಶಾಸನಗಳೇ ಸಾಕ್ಷಿ. ಅವುಗಳಲ್ಲಿ ಹೆಚ್ಚಿನ ಶಾಸನಗಳು ಸಾಹಿತ್ಯಿಮಯವಾಗಿರುತ್ತಿದ್ದವು. ಆದರೆ ಇಂತಹ ಸಾಹಿತ್ಯಿಕ ಶಾಸನಗಳನ್ನು ತಯಾರಿಸಿದ ಕವಿಗಳ ಉಲ್ಲೇಖವಿರುವ ಶಾಸನಗಳು ಈ ಜಿಲ್ಲೆಯಲ್ಲಿ ಸಿಗುವುದು ಬಹಳ ವಿರಳ. ಜಿಲ್ಲೆಯ ಶಾಸನ ಕವಿಗಳ ಉಲ್ಲೇಖ ಆರಂಭಗೊಳ್ಳುವುದು ಕ್ರಿ.ಶ 4ನೇ ಶತಮಾನದ ಚಂದ್ರವಳ್ಳಿಯ(ಚಿತ್ರದುರ್ಗ) ಶಾಸನದಿಂದ. ಅದರಲ್ಲಿ 'ಕುಪಣದಚಮ' ಎಂಬ ಶಾಸನ ಕವಿಯ ಉಲ್ಲೇಖ ಬರುತ್ತದೆ. ಈ ಶಾಸನವು ಸಂಸ್ಕೃತ ಮತ್ತು ಕನ್ನಡ ಎರಡೂ ಭಾಷೆಗಳಿಂದ ರಚಿತವಾಗಿದ್ದು; ಅಸ್ಪಷ್ಟತೆಯಿಂದ ಕೂಡಿದೆ. ಈ ಶಾಸನದಿಂದಲೇ ಕೊಪ್ಪಳ ಜಿಲ್ಲೆಯ ಶಾಸನ ಕವಿಗಳ ಉಲ್ಲೇಖಗಳು ಪ್ರಾರಂಭಗೊಳ್ಳುತ್ತವೆ ಎಂದು ಹೇಳಬಹುದು. ನಂತರದ ಕಾಲದಲ್ಲಿ ಜಿಲ್ಲೆಯ ಶಾಸನಗಳಲ್ಲಿ ಕವಿಕಂದರ್ಪ, ಮಲ್ಲಕವಿ, ಇಂದಯ್ಯ, ಸಾಮಂತಭದ್ರ ಭಳಾರ, ಪಿಟ್ಟೋಜ, ಮೈದುನ ಮಾದೆಯ ಹೆಗ್ಗಡೆ, ಬಿರುದರ ಪೆಂಡಿರಗಂಡ ಸೇಷಯ್ಯ, ಸಜ್ಜನ ತಿಲಕ, ಗೋಮಕವಿ, ಆದಿತ್ಯದೇವ, ರಾಮೋಜ, ಗಿರಿಜೇಶ, ಸೇನಬೋವ ಬಂಮರಸ ಮುಂತಾದ ಶಾಸನ ಕವಿಗಳ ಉಲ್ಲೇಖಗಳು ಕಂಡುಬರುತ್ತವೆ. ಆದರೆ ಈ ಕವಿಗಳ ಉಲ್ಲೇಖಗಳು ಶಾಸನದ ಕೊನೆಗೆ ಹೆಸರು ಮಾತ್ರ ಉಲ್ಲೇಖಿತವಿರುವುದರಿಂದ ಅವರುಗಳ ಇತಿಹಾಸ–ಚರಿತ್ರೆ ಇತ್ಯಾದಿಗಳ ವಿವರಗಳು ತಿಳಿಯುವುದು ಕಷ್ಟಸಾಧ್ಯ.

ಕೊಪ್ಪಳ ಜಿಲ್ಲೆಯಲ್ಲಿ ದೊರೆತ ಶಾಸನಗಳಲ್ಲಿ ಆನೆಗುಂದಿಯಲ್ಲಿ ದೊರೆತ ಸುಮಾರು 13ನೇ ಶತಮಾನದ ಕಾಲದ ಶಾಸನ ತಾಮ್ರ ಶಾಸನವೇ ಸಾಹಿತ್ಯಿಕ ಪ್ರಮುಖ ಶಾಸನ ಎಂದರೆ ತಪ್ಪಾಗಲಾರದು. ಇದನ್ನು ಗಿರಿಜೇಶ ಎನ್ನುವ ಕವಿ ರಚಿಸಿದರೆ; ವಿಶ್ವಮಿತ್ರ ಎಂಬ ಲಿಪಿಕಾರನು ಬರೆದನು ಎಂಬುದು ಪ್ರಸ್ತುತ ಶಾಸನದಿಂದ ತಿಳಿದುಬರುತ್ತದೆ. ಈ ತಾಮ್ರಶಾಸನ ಎಂಟು ಹಲಗೆ(ಪಟ)ಗಳಿಂದ ಕೂಡಿದ್ದು 296 ಸುದೀರ್ಘ ಸಾಲುಗಳನ್ನು ಹೊಂದಿದೆ. ಕುಂಬಾರರ ಕುಲ ಹುಟ್ಟಿನ ಹೆಗ್ಗಳಿಕೆಯನ್ನು ಹೇಳುವುದರ ಜೊತೆಗೆ, ಗಿರಿಜೆಯ ವಿವಾಹದ ಕತೆಯನ್ನು ಇಲ್ಲಿ ವಿವರಿಸಲಾಗಿದೆ. ಅಷ್ಟೇ ಅಲ್ಲದೆ ಅಮೃತಮಥನ ಕತೆಯನ್ನೂ ಇಲ್ಲಿ ವಿವರಿಸಲಾಗಿದೆ. ಈ ಶಾಸನ ಛಂದಸ್ಸಿನ ಹಲವು ರೂಪಗಳನ್ನು ಒಳಗೊಂಡಿರುವುದರಿಂದ ಗಿರಿಜೇಶ ಎನ್ನುವ ಶಾಸನ ಕವಿಯು ಬಹಳಷ್ಟು ವಿದ್ವಾಂಸನೇ ಇರಬೇಕೆಂದು ಅನಿಸುತ್ತದೆ. ಇಟಗಿಯ ಒಂದು ಶಾಸನದಲ್ಲಿ ಆದಿತ್ಯದೇವ ಎಂಬ ಕವಿಯ ಉಲ್ಲೇಖವಿದೆ. ಇವನು ತನ್ನನು ತಾನು ಶಕ್ತಿ ಉತ್ಪತ್ತಿ ಸಂಪನ್ನ

ಪಂಡಿತನೆಂದು ಶಾಸನದಲ್ಲಿ ಹೊಗಳಿಕೊಂಡಿದ್ದಾನೆ. ಇದರಿಂದ ಇವನೊಬ್ಬ ಪಂಡಿತನೇ ಇರಬೇಕು ಎನಿಸುತ್ತದೆ. ಜಿಲ್ಲೆಯ ಇನ್ನೊಬ್ಬ ಮಹತ್ವದ ಶಾಸನ ಕವಿ ಎಂದರೆ ಪಿಟ್ಟೋಜ ಎಂದು ಹೇಳಬಹುದು. ಇತನ ಬಗ್ಗೆ ಜಿಲ್ಲೆಯ ಎರಡು ಶಾಸನಗಳಿಂದ ತಿಳಿದು ಬರುತ್ತದೆ. ಉಳಿದ ಎಲ್ಲಾ ಕವಿಗಳ ಬಗ್ಗೆ ಒಂದೊಂದು ಶಾಸನದಿಂದ ತಿಳಿದು ಬಂದರೆ; ಇತನ ಕುರಿತು ಕೊಪ್ಪಳದಲ್ಲೇ ಎರಡು ಶಾಸನಗಳಿಂದ ತಿಳಿದು ಬಂದಿರುವುದು ವಿಶೇಷವಾಗಿದೆ. ಈ ಪಿಟ್ಟೋಜನ ಬಗ್ಗೆ ಮತ್ತೊಂದು ವಿಶೇಷವೆಂದರೆ ಒಂದು ಶಾಸನದ ಆರಂಭದಲ್ಲೇ ಇತನ ಉಲ್ಲೇಖವಿರುವುದು. ಒಟ್ಟಾರೆ ಅದೇನೆ ಇದ್ದರೂ ಜಿಲ್ಲೆಯ ಇವನೊಬ್ಬ ಮಹತ್ವದ ಶಾಸನ ಕವಿ ಎಂಬುದು ಸತ್ಯ.

ಶಾಸನ ಕವಿಗಳು ಕಾವ್ಯಮಯವಾಗಿ ಆದೇಶ, ವಿಷಯ–ವ್ಯಕ್ತಿಗಳನ್ನು ವರ್ಣಿಸುವುದರ ಜೊತೆಗೆ ತಮ್ಮನ್ನೆ ತಾವು ವರ್ಣನಾತ್ಮಕವಾಗಿ ಹೇಳಿಕೊಳ್ಳುತ್ತಿದ್ದರು. ಇಂತಹ ಅನೇಕ ಶಾಸನಗಳು ಲಭ್ಯವಾಗುತ್ತವೆ. ಕವಲೂರು ಗ್ರಾಮದಲ್ಲಿ ದೊರೆತ ಕ್ರಿ.ಶ 1177ರ ಶಾಸನದಲ್ಲಿ ಕವಿಕಂದರ್ಪನ ಉಲ್ಲೇಖ ಬರುತ್ತದೆ. ಇವನನ್ನು ಶಾಸನದಲ್ಲಿ ಚಾತುರ್ಭಾಷ ಚಕ್ರವರ್ತಿ ಕವಿಕಂದರ್ಪ ಎಂದು ವರ್ಣಿಸಿದೆ. ಅಂದರೆ ಜಿಲ್ಲೆಯ ಶಾಸನ ಕವಿಗಳು ಬೇರೆ–ಬೇರೆ ಭಾಷಾ ವಿದ್ವಾಂಸರಾಗಿರುತ್ತಿದ್ದರೆಂದು ತಿಳಿದು ಬರುತ್ತದೆ. ಅಳವಂಡಿಯ ಒಂದು ಶಾಸನದಲ್ಲಿ ಮಲ್ಲಕವಿಯ ಉಲ್ಲೇಖ ಬರುತ್ತದೆ. ಪ್ರಸ್ತುತ ಶಾಸನವನ್ನು ಕುರುವರ ಬರ್ಮ್ಮ ಬರೆಯಿಸಿದ್ದನ್ನು ಮಲ್ಲನು ಬರೆದನು ಎಂದು ಶಾಸನದ ಕೊನೆಯಲ್ಲಿ ವಿವರಿಸಿದೆ. ಈ ಮಲ್ಲಕವಿಯ ವಿವರಗಳು ಗದಗ ಜಿಲ್ಲೆಯ ಶಾಸನಗಳಲ್ಲಿಯೂ ಉಲ್ಲೇಖವಿರುವುದರಿಂದ ಇತನು ಬಹಳ ಪಂಡಿತನಿರಬೇಕೆಂದು ತಿಳಿದುಬರುತ್ತದೆ. ಈ ಕವಿಗಳ ವ್ಯಾಪ್ತಿಯು ಬೇರೆ–ಬೇರೆ ಪ್ರದೇಶಗಳಿಗೆ ಹರಡಿರುವುದು ಇಲ್ಲಿ ವ್ಯಕ್ತವಾಗುತ್ತದೆ. ಕುಕನೂರಿನ ಕ್ರಿ.ಶ 1170ರ ಶಾಸನದಲ್ಲಿ ಸಜ್ಜನ ತಿಲಕನ ಬಗ್ಗೆ ತಿಳಿದುಬರುತ್ತದೆ. ಈ ಶಾಸನವನ್ನು ಅಗಸ್ತ್ಯೆ ಗೋತ್ರದ ಸಜ್ಜನ ತಿಲಕ ಹೇಳಿದ (ರಚಿಸಿದ) ಕಾಶ್ಯಪಗೋತ್ರದ ಶಿವದೇವ ಬರೆದ ಕೂಕನೂರ ಸಾಸಿರ್ವರ ಚನ್ನೊಜನ ಮಗ ದಾಮೋಜ ಕೆತ್ತಿದ ಎಂದು ಉಲ್ಲೇಖಿಸಿದೆ. ಇದೊಂದು ಸುದೀರ್ಘವಾದ ಶಾಸನವಾಗಿದ್ದು; ಕಂದಪದ್ಯ, ಚಂಪಕಮಾಲೆ, ಮತ್ತೇಭ ವಿಕ್ರೀಡಿತ, ಉತ್ಪಲಮಾಲೆ, ಸ್ರಗ್ಧರ ವೃತ್ತ ಮುಂತಾದ ಛಂದಸ್ಸಿನ ಅಂಶಗಳಿಂದ ಕೂಡಿದೆ. ಈ ಎಲ್ಲಾ ಅಂಶಗಳಿಂದ ಸಜ್ಜನ ತಿಲಕ ಕವಿಯು ಛಂದಸ್ಸಿನ ಬಗ್ಗೆ ಬಹಳ ಅಧ್ಯಯನ ಮಾಡಿದವನೆಂದು ತಿಳಿದುಬರುತ್ತದೆ.

ಈ ಮೇಲಿನ ಎಲ್ಲಾ ಕವಿಗಳ ಜೊತೆಗೆ ಇನ್ನೂ ಹತ್ತು–ಹಲವಾರು ಶಾಸನ ಕವಿಗಳು ಜಿಲ್ಲೆಯ ಶಾಸನಗಳಿಂದ ಉಕ್ತವಾಗುತ್ತಾರೆ. ಆದರೆ ಇವರ ಒಂದೊಂದು ಶಾಸನಗಳು ಲಭ್ಯವಾಗುತ್ತವೆ. ಇನ್ದಯ್ಯನನ್ನು ಕೊಪ್ಪಳದ ಒಂದು ಶಾಸನದಲ್ಲಿ ವಿವರಿಸಿದರೆ;

ಸಾಮಂತಭದ್ರ ಭಳಾರನನ್ನು ಕ್ರಿ.ಶ 1032ರ ಕೊಪ್ಪಳದ ಮತ್ತೊಂದು ಶಾಸನದಲ್ಲಿ ಉಲ್ಲೇಖಿಸಿದೆ. ಕ್ರಿ.ಶ 1002ರ ಶಾಸನದಲ್ಲಿ ಬಿರುದರ ಪೆಂಡಿರಗಂಡ ಸೇಷಯ್ಯನ ಬಗ್ಗೆ ವಿವರಿಸಿದೆ. ಈ ಸೇಷಯ್ಯನಿಗೆ ಬಹುಶಃ 'ಪೆಂಡಿರಗಂಡ' ಎಂಬ ಬಿರುದು ಇರಬೇಕೆಂದು ಅನಿಸುತ್ತದೆ. ಅದೇ ರೀತಿಯಾಗಿ ಮೈದುನ ಮಾದೆಯ ಹೆಗ್ಗಡೆನನ್ನು ಕ್ರಿ.ಶ 1315ರ ಶಾಸನದಲ್ಲಿ ಉಲ್ಲೇಖಿಸುತ್ತದೆ. ಈ ಹೆಗ್ಗಡೆಗಳೂ ಶಾಸನ ಕವಿಗಳಾಗಿರುವುದು ಬಹಳ ವಿಶೇಷವಾಗಿದೆ. ಗೋಮುಕವಿಯನ್ನು ಕ್ರಿ.ಶ 1178ರ ಕುಕನೂರಿನ ಶಾಸನದಲ್ಲಿ ಹೆಸರಿಸಿದರೆ; ರಾಮೋಜನನ್ನು ಕ್ರಿ.ಶ 1512ರ ಗೊಂಡಬಾಳು ಶಾಸನದಲ್ಲಿ ಉಲ್ಲೇಖಿಸಿದೆ. ಕ್ರಿ.ಶ 12ನೇ ಶತಮಾನದ ಪುರದ ಶಾಸನದಲ್ಲಿ ಸೇನಬೋವ ಬಂಮರಸನನ್ನು ಉಲ್ಲೇಖಿಸುತ್ತದೆ. ಇಲ್ಲಿಯೂ ಸಹ ಸೇನಬೋವರು ಶಾಸನ ಕವಿಗಳಾಗಿರುವುದು ಬಹಳ ವಿಶೇಷವಾಗಿದೆ.

ಈ ರೀತಿಯಾಗಿ ಜಿಲ್ಲೆ ಶಾಸನಗಳಲ್ಲಿ ಈ ಶಾಸನಗಳ ನಿರ್ಮಾತೃಗಳಾದ ಕವಿಗಳ ಉಲ್ಲೇಖಗಳು ಕಂಡುಬರುತ್ತಿವೆ. ಆದರೆ ಈ ಕವಿಗಳ ಹೆಸರು ಮಾತ್ರ ಶಾಸನಗಳ ಕೊನೆಗೆ ಉಲ್ಲೇಖಿಸಿರುವುದರಿಂದ, ಇವರುಗಳ ಸಂಪೂರ್ಣ ಇತಿಹಾಸ ತಿಳಿದು ಬರುವುದಿಲ್ಲ. ಬೇರೆ ಬೇರೆ ಆಕರಗಳಿಂದ ಇವರ ಬಗ್ಗೆ ಹೆಚ್ಚಿನ ಅಧ್ಯಾಯ ನಡೆಯಬೇಕಿದೆ. ಇತಿಹಾಸವನ್ನೇ ಕಟ್ಟಿಕೊಟ್ಟ ಇಂತಹ ಮಹನೀಯರ ಸಂಪೂರ್ಣ ವಿವರಗಳು ತಿಳಿಯುವುದು ಇಂದು ಅಗತ್ಯವಾಗಿದೆ.

**ಆಕರ ಗ್ರಂಥಗಳು :–**


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಹಂಪ ನಾಗರಾಜಯ್ಯ, ಕೊಪ್ಪಳ ಶಾಸನಗಳು, ರತ್ನತ್ರಯ ಪ್ರಕಾಶನ, ಮೈಸೂರು–1998
3) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರಿಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020


* * * * *

# ಕೊಪ್ಪಳ ತಾಲೂಕಿನ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ

ಬಿಳಿಯರಳೆಯಂತೆ ಗಂಗಾ

ಜಳದಂತೆಸೆವಜಿತಸೇನಮುನಿಪತಿಯ ಗುಣಾ

ವಳಿಯಂತೆ ನೆಗಳ್ದಿ ಕೊಪಣಾ

ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ

ಎಂದು ರನ್ನ ಕವಿಯು 10ನೇ ಶತಮಾನದಲ್ಲಿ ತನ್ನ ಅಜಿತನಾಥಪುರಾಣ ಎಂಬ ಮಹಾನ್ ಧಾರ್ಮಿಕ ಗ್ರಂಥದಲ್ಲಿ ಕೊಪ್ಪಳ ನಾಡಿನ ವರ್ಣನೆ ಮಾಡಿರುವುದನ್ನು ಗಮನಿಸಿದರೆ ಅತ್ತಿಮಬ್ಬೆಯ ಚರಿತ್ರೆಯ ಜೊತೆ–ಜೊತೆಗೆ ಈ ಕೊಪ್ಪಳ ನಾಡಿನ ಚರಿತ್ರೆ ಎಷ್ಟು ಪವಿತ್ರವಾಗಿತ್ತು ಎಂಬುದು ತಿಳಿದುಬರುತ್ತದೆ.

ಕೊಪ್ಪಳ ಭಾಗವು ಕನ್ನಡ ನಾಡಿಗೆ ತನ್ನದೇ ಆದ ಅಪಾರ ಕೊಡುಗೆಯನ್ನು ನೀಡಿದೆ ಎನ್ನುವುದಕ್ಕೆ ಇಲ್ಲಿ ಯಥೇಚ್ಚವಾಗಿ ದೊರೆತ ದೇವಾಲಯ, ಬಸದಿ, ಗುಹೆ, ಕೋಟೆ–ಕೊತ್ತಲಗಳು, ಮೂರ್ತಿ–ಶಿಲ್ಪಗಳು ಮತ್ತು ಅಪಾರ ಪ್ರಮಾಣದ ಶಾಸನಗಳೇ ಸಾಕ್ಷಿ. ಬಹುದೊಡ್ಡ ಇತಿಹಾಸವನ್ನು ಹೊಂದಿದ ಈ ಭಾಗ, ನಾಡಿನಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನ–ಮಾನ ಹೊಂದಿತ್ತೆಂದು ಹೇಳಬಹುದು. ಈ ಭಾಗವನ್ನು "ತಿರುಳ್ಗನ್ನಡನಾಡು" ಎಂತಲೂ ಕರೆಯುತ್ತಿದ್ದರು. ಇಲ್ಲಿನ ಜನ ಒಳ್ಳೆಯ ಕವಿಗಳು, ಪ್ರಭುಗಳೂ ಆಗಿದ್ದರು. ಓದದಯೇ ಕಾವ್ಯವನ್ನು ಬರೆಯುವ ಬುದ್ಧಿಯುಳ್ಳವಾಗಿದ್ದರು. ಇಂತಹ ಜನರು ಮತ್ತು ಇತಿಹಾಸವನ್ನು ಹೊಂದಿದ್ದ ಈ ನಾಡು ಚರಿತ್ರೆಯಲ್ಲಿ ಬಹು ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು ಎಂದರೆ ತಪ್ಪಾಗಲಾರದು.

ಕೊಪ್ಪಳ ನಾಡಿನ ಚರಿತ್ರೆಯು ಕ್ರಿ.ಪೂ. ಸಾವಿರಾರೂ ವರ್ಷಗಳಿಂದಲೂ ಇತ್ತೆಂದು ಹೇಳಲಾಗುತ್ತಿದೆ. ಪ್ರಾಚೀನ ಕಾಲದ ಮಾನವನ ಪಳೆಯುಳಿಕೆಗಳು, ಗುಹೆಗಳು, ರೇಖಾಚಿತ್ರಗಳು, ತಲೆಬುರುಡೆಗಳು, ಆಯುಧಗಳು ಐತಿಹ್ಯಗಳು ಇತ್ಯಾದಿಗಳು ಅದನ್ನು ಸಾಕ್ಷೀಕರಿಸುತ್ತವೆ. ಆದರೆ ಕ್ರಿ.ಪೂ 3–2ನೇ ಶತಮಾನದ ಮೌರ್ಯ ಸಾಮ್ರಾಜ್ಯದ ಚಕ್ರವರ್ತಿ ಅಶೋಕನ ಶಾಸನಗಳೊಂದಿಗೆ ಈ ನಾಡಿನ ಚರಿತ್ರೆಯ ಬಾಗಿಲು ಅಧೀಕೃತವಾಗಿ ತೆರೆದುಕೊಳ್ಳುತ್ತದೆ. ಇದಕ್ಕೂ ಮೊದಲಿನ ಲಿಖಿತ ಇತಿಹಾಸ ಇದುವರೆಗೂ ನಮಗೆ ದೊರೆತಿರುವುದಿಲ್ಲ. ಮೌರ್ಯ ಸಾಮ್ರಾಜ್ಯದ ನಂತರದಲ್ಲಿ ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ಕಲ್ಯಾಣದ ಚಾಲುಕ್ಯರು, ಸೇವಣರು, ನೊಳಂಬರು, ಕಲ್ಯಾಣದ ಕಲಚೂರಿಗಳು, ಹೊಸಮಲೆದುರ್ಗದ ಅರಸರು,(ಕುಮ್ಮಟದುರ್ಗದ ಅರಸರು) ವಿಜಯನಗರದ ಅರಸರು ಹೀಗೆ ಅನೇಕ ಮನೆತನಗಳಿಗೆ ಸಂಬಂಧಿಸಿದ ಇತಿಹಾಸದ ಕುರುಹುಗಳು ಇಲ್ಲಿ ದೊರಕಿರುವುದರಿಂದ

ಈ ಮನೆತನಗಳು ನೇರವಾಗಿಯೋ ಇಲ್ಲವೆ ಪರೋಕ್ಷವಾಗಿಯೋ ಆಳ್ವಿಕೆಯನ್ನು ನಡೆಸಿದ್ದರೆಂದು ತಿಳಿದುಬರುತ್ತದೆ. ಈ ಎಲ್ಲಾ ಪ್ರಮುಖ ಅರಸು ಮನೆತನಗಳ ಜೊತೆಗೆ ಆನೆಗುಂದಿ ಮತ್ತು ಕನಕಗಿರಿಯ ಪಾಳೆಗಾರರು, ಯಲಬುರ್ಗಿ ಸಿಂದರ ಅಂದರೆ ಸ್ಥಳೀಯ ನಾಯಕರೂ(ಸ್ಥಳೀಯ ಅರಸರು) ಸಹ ಆಳ್ವಿಕೆ ನಡೆಸಿದ್ದರ ಬಗ್ಗೆ ಇತಿಹಾಸದ ಕುರುಹುಗಳಿಂದ ತಿಳಿಯಬುದಾಗಿದೆ.

ಇತಿಹಾಸವನ್ನು ಅರಿಯಬೇದಾದರೆ ಉಳಿದ ಎಲ್ಲಾ ಆಕರಗಳಿಗಿಂತ ಶಾಸನ ಆಕರಗಳು ಬಹು ಮುಖ್ಯ ಎನಿಸುತ್ತವೆ. ಯಾಕೆಂದರೆ ಶಾಸನಗಳು ಸ್ಪಷ್ಟ ಮತ್ತು ಖಚಿತತೆಯನ್ನು ನೀಡುತ್ತವೆ. ಇಲ್ಲಿ ಯಾವುದೇ ಅನುಮಾನ ಮತ್ತು ಊಹೆಗಳಿಗೆ ಅವಕಾಶವಿರುವುದಿಲ್ಲ. ಅದರಂತೆ ಕೊಪ್ಪಳ ತಾಲೂಕಿನ ಚರಿತ್ರೆಯನ್ನು ತಿಳಿಯಬೇಕಾದರೆ ಇಲ್ಲಿನ ಶಾಸನಗಳೇ ಮುಖ್ಯ ಆಕರಗಳಾಗಿ ನಿಲ್ಲುತ್ತವೆ. ಕೊಪ್ಪಳ ತಾಲೂಕಿನ ಎಲ್ಲಾ ಶಾಸನಗಳನ್ನು ಅವಲೋಕಿಸಿದಾಗ ಇಲ್ಲಿನ ಬಹುದೊಡ್ಡ ಸಂಸ್ಕೃತಿಯೇ ಅನಾವರಣಗೊಳ್ಳುತ್ತದೆ. ದಾನ–ದತ್ತಿ ನೀಡಿರುವುದು, ಕೋಟೆ–ಕೊತ್ತಲಗಳನ್ನು ಕಟ್ಟಿರುವುದು, ಬಸದಿ–ದೇವಸ್ಥಾನಗಳನ್ನು ನಿರ್ಮಿಸುವುದು ಅಥವಾ ಅವುಗಳನ್ನು ಜೀರ್ಣೋದ್ಧಾರ ಮಾಡಿರುವುದು, ಕೆರೆ–ಕಟ್ಟೆಗಳನ್ನು ಕಟ್ಟಿರುವುದು, ಛತ್ರ–ಅರವಟ್ಟಿಗೆಗಳನ್ನು ಸ್ಥಾಪಿಸಿರುವುದು, ರಸ್ತೆ ನಿರ್ಮಿಸಿರುವುದು ಮುಂತಾದ ಲೋಕೋಪಯೋಗಿ ಕೆಲಸ ಕಾರ್ಯಗಳನ್ನೇ ತಮ್ಮ ಧರ್ಮವೆಂದು ಭಾವಿಸಿದ್ದರು. ಆದ್ದರಿಂದಲೇ ಈ ಭಾಗ ಅಪಾರ ಇತಿಹಾಸವನ್ನು ಹೊಂದಿದೆ ಎಂದು ಹೇಳಬಹುದು. ಅದನ್ನು ಪುಷ್ಠಿ ಕೊಡುವುದಕ್ಕೆ ಇತಿಹಾಸದ ದೊರೆತ ಬೇರೆ ಕುರುಹುಗಳಿಗಿಂತ ಅಪಾರ ಶಾಸನಗಳೇ ಸಾಕ್ಷಿ. ಕೊಪ್ಪಳ ಜಿಲ್ಲೆಯಾದ್ಯಂತ ಸುಮಾರು 390ಕ್ಕೂ ಅಧಿಕ ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳು ಲಭ್ಯವಾಗಿವೆ. ಅದೇ ರೀತಿಯಾಗಿ ಕೊಪ್ಪಳ ತಾಲೂಕಿನಲ್ಲಯೂ ಸಹ ಸುಮಾರು 174ಕ್ಕೂ ಅಧಿಕ ಶಾಸನಗಳು ದೊರಕಿವೆ. ಕೊಪ್ಪಳ ನಗರದಲ್ಲೇ ಸುಮಾರು 120ಕ್ಕೂ ಹೆಚ್ಚಿನ ಶಾಸನಗಳು ಪತ್ತೆಯಾಗಿವೆ. ಅಳವಂಡಿ, ಶಿವಪುರಗಳಲ್ಲಿ ತಲಾ ಆರೂ ಶಾಸನಗಳು ಕಂಡು ಬಂದರೆ, ಹಲಗೇರಿಯಲ್ಲಿ ಐದು ಶಾಸನಗಳು ದೊರಕಿವೆ. ಕುಮ್ಮಟದುರ್ಗದಲ್ಲಿ ನಾಲ್ಕು, ಕವಲೂರೂ, ಮಾದಿನೂರು, ಸೋಮನಾಥನ ಬೆಟ್ಟ, ಹಿರೇಸಿಂದೋಗಿ ಮತ್ತು ಹುಲಿಗಿಯಲ್ಲಿ ತಲಾ ಮೂರು ಶಾಸನಗಳು ಪತ್ತೆಯಾಗಿವೆ. ಉಳಿದಂತೆ ಕೆಲ ಊರುಗಳಲ್ಲಿ ಒಂದು ಎರಡು ಶಾಸನಗಳು ಲಭ್ಯವಾಗಿವೆ. ಈ ಎಲ್ಲಾ ಶಾಸನಗಳನ್ನು ಅವಲೋಕಿಸಿದಾಗ ಇಲ್ಲಿನ ಅಭೂತಪೂರ್ವವಾದ ಸಾಂಸ್ಕೃತಿಕ ಚರಿತ್ರೆ ನಮಗೆ ಗೋಚರವಾಗುತ್ತದೆ.

ಕೊಪ್ಪಳ ನಗರವನ್ನು ಕೋಪಣಾತೀರ್ಥ, ಕೋಪಣಾಚಲ, ಮಹಾತೀರ್ಥ ಮುಂತಾದ ಹೆಸರುಗಳಿಂದ ಶಾಸನಗಳಲ್ಲಿ ಉಲ್ಲೇಖಗೊಂಡಿರುವುದನ್ನು ಗಮನಿಸಿದರೆ

ಇದೊಂದು ಪವಿತ್ರ ಕ್ಷೇತ್ರವಾಗಿತ್ತೆಂದು ತಿಳಿದುಬರುತ್ತದೆ. ತಾಲೂಕಿನಲ್ಲಿ ದೊರೆತ ಶಾಸನಗಳಲ್ಲಿ ಹೆಚ್ಚಿನ ಶಾಸನಗಳು ಜೈನಧರ್ಮಕ್ಕೆ ಸಂಬಂಧಿಸಿದವುಗಳಾಗಿರುವುದು ಇಲ್ಲಿನ ವಿಶೇಷತೆ. ಕ್ರಿ.ಶ 1005ರ ಕೊಪ್ಪಳ ಶಾಸನದಲ್ಲಿ ಅಣ್ಣಿಗೇರಿಯ ಅಭಯನಂದಿಯು ಕೊಪ್ಪಳಕ್ಕೆ ಬಂದು ಸನ್ಯಸವನ್ನು ಸ್ವೀಕರಿಸಿ ಮುಡಿಪಿದನೆಂದು ವಿವರಿಸಿದೆ. ಅದೇ ರೀತಿ ಕ್ರಿ.ಶ 975ರ ಕೊಪ್ಪಳದ ಮತ್ತೊಂದು ಶಾಸನದಲ್ಲಿ ಚಂದ್ರಕಾವಾಟದ ಸಾಧುಸೇನಪಂಡಿತನು ಕೆಲವು ಕಾಲ ಇಲ್ಲಿ ನೆಲೆಸಿ ಇಲ್ಲಿಯೇ ಮುಡಿಪಿದನೆಂದು ಉಲ್ಲೇಖಿಸುತ್ತದೆ. ಬೇರೆ-ಬೇರೆ ಪ್ರದೇಶಗಳಿಂದ ಜೈನಧರ್ಮದ ಅನುಯಾಯಿಗಳು ಇಲ್ಲಿಗೆ ಭೇಟಿ ನೀಡುತ್ತಿದ್ದರು. ಈ ಬಗ್ಗೆ ಕೊಪ್ಪಳ ನಗರದಲ್ಲೇ ಸುಮಾರು ಶಾಸನಗಳಲ್ಲಿ ಉಲ್ಲೇಖಿತಗೊಂಡಿದೆ. ಪಾರಿಸಕೀರ್ತಿ, ಇಂದ್ರನಾಗಮ್ಮ, ಪಾಯಣ, ಮಸೋಪವಾಸಿ, ಮಹಾನಂದಿ, ಬಸದಿ ಸಾಂತಪ್ಪ, ಚಿಕ್ಕಜೀಯ ಚಂದ್ರಪ್ಪ, ವರ್ದಮಾನ ಲಕ್ಕಣ್ಣ, ಕೊಲ್ಲಾಪುರದ ಸೋಬಣ್ಣನ ಮಗ ಗುಂಡಕಲ್ಲ ಸೋವಿಗುಡ್ಡ, ತೋಡರಮಲ್ಲ, ನಂಜಿನಾಥ ಮುಂತಾದ ತಂಡವೆ ಈ ಪ್ರದೇಶಕ್ಕೆ ಭೇಟಿ ಕೊಟ್ಟಿದ್ದಾರೆ. ಕ್ರಿ.ಶ 7-8ನೇ ಶತಮಾನದ ಕೊಪ್ಪಳ ಶಾಸನದಲ್ಲಿ ಸಾಸ್ತಿರಿಯನ್, ದೋಮೆರೆಯನ್, ಅನಿರಬಾತ್ರನ್ನಿರುತೆಯನ್ ಅಣಗಾರನ್, ಅಣನ್ವೆಯನ್, ಕಣ್ಣೆಗೆಯನ್ ಎಂಬ ಜನ ಕೊಪ್ಪಳಕ್ಕೆ ಸಂದರ್ಶಿಸಿದ್ದರೆಂದು ಉಲ್ಲೇಖಿಸಿದೆ. ಈ ಹೆಸರುಗಳನ್ನು ಗಮನಿಸಿದರೆ ನಮ್ಮ ಸುತ್ತಲಿನ ಪ್ರದೇಶದ ಹೆಸರುಗಳು ಆಗಿರಲು ಸಾಧ್ಯವಿಲ್ಲ. ಬಹುಶಃ ಇವರು ಬಹುದೂರದಿಂದ ಈ ಕೊಪ್ಪಳಕ್ಕೆ ಬಂದಿರಬೇಕೆನಿಸುತ್ತದೆ. ಈ ಎಲ್ಲಾ ಭೇಟಿಯ ಉಲ್ಲೇಖಗಳನ್ನು ಗಮನಿಸಿದರೆ ಇದೊಂದು ಬಹುದೊಡ್ಡ ಧಾರ್ಮಿಕ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ.

ಕೊಪ್ಪಳ ನಾಡಿನ ಜನತೆ ದಾನ-ಧರ್ಮಗಳಲ್ಲಿ ಎತ್ತಿದ ಕೈ. ಇದು ತಮ್ಮ ಕರ್ತವ್ಯ ಇಲ್ಲವೆ ಸಂಸ್ಕೃತಿ ಎಂದು ಭಾವಿಸಿದ್ದರು. ತಾಲೂಕಿನಲ್ಲಿ ದೊರೆತ ಶಾಸನಗಳಲ್ಲಿ ದಾನ ಶಾಸನಗಳ ಸಂಖ್ಯೆಯೇ ಹೆಚ್ಚು. ಕ್ರಿ.ಶ 1521ರಲ್ಲಿ ಕೊಪ್ಪಳದ ಶಾಸನದಲ್ಲಿ ಬಂಡಾರದ ಅಪ್ಪರಸಯ್ಯನ ಮಗ ಬಂಡಾರದ ತಮ್ಮಪ್ಪಯ್ಯನು ಕೊಪ್ಪಳದ ಚೆನ್ನಕೇಶವ ದೇವರಿಗೆ ಹಿರೇಸಿಂದೋಗಿ ಗ್ರಾಮವನ್ನು ದಾನವಾಗಿ ಸಮರ್ಪಿಸುತ್ತಾನೆ. ಕ್ರಿ.ಶ 833ರ ಕೊಪ್ಪಳದ ಮತ್ತೊಂದು ಶಾಸನದಲ್ಲಿ ಪೇರ್ಮದೇವ ಮತ್ತು ದಡಿಯಮರಸರು ತಮಗೆ ಪುಣ್ಯವಾಗಲೆಂದು ತಾವು ಕಟ್ಟಿಸಿದ ಬಸದಿಗೆ ಕಳಸಾರೋಹಣ ದಾನ ಮಾಡಿದ ಉಲ್ಲೇಖ ಬರುತ್ತದೆ. ಅದೇ ರೀತಿ ಕಿಡಿದಾಳದ ಕ್ರಿ.ಶ 1514ರ ಶಾಸನದಲ್ಲಿಯೂ ಸಹ ಕೃಷ್ಣದೇವರಾಯನು ಹೊಸವೂರ ಮಹಾಮಾಯೆ ದೇವಸ್ಥಾನಕ್ಕೆ ಕಿಡಿದಾಳ ಗ್ರಾಮವನ್ನು ದಾನವಾಗಿ ನೀಡಿದ ವಿಚಾರ ಹೇಳುತ್ತದೆ. ದೇವಸ್ಥಾನಕ್ಕೆ ದಾನದ ಜೊತೆಗೆ ಜೀರ್ಣೋದ್ಧಾರ ಮಾಡಿದ ಸಂಗತಿಗಳೂ ಇಲ್ಲಿ ದೊರೆಯುತ್ತವೆ. ಕ್ರಿ.ಶ. 1299ರ ಶಾಸನದಲ್ಲಿ ಜಿದ್ದಿ ಸೆಟ್ಟಿಯ ಮಗ ಸಮಸ್ತ ನಾಗಿಸೆಟ್ಟಿಯು ಕಲುಕುಟಿಗನ ಕೈಲಿ

ಮೊದೆಗನೂರು ಸೋಮನಾಥ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದನೆಂದು ತಿಳಿಸುತ್ತದೆ. ದಾನವೆಂದರೆ ಕೇವಲ ದೇವಸ್ಥಾನಕ್ಕೆ ಕೊಡುವುದು ಇಲ್ಲವೆ ಜೀರ್ಣೋದ್ಧಾರ ಮಾಡಿಸುವುದಷ್ಟೇ ಆಗಿರಲಿಲ್ಲ, ವ್ಯಕ್ತಿಗಳಿಗೂ ಸಹ ದಾನ ಕೊಟ್ಟ ಉದಾಹರಣೆಗಳು ತಾಲೂಕಿನ ಶಾಸನಗಳಲ್ಲಿ ಉಲ್ಲೇಖಿತಗೊಂಡಿವೆ. ಬೇರೆ-ಬೇರೆ ಕಾಲದಲ್ಲಿ ಕೆತ್ತಿಸಿದ ಮಾದಿನೂರಿನ ಒಂದು ಶಾಸನದಲ್ಲಿ ನೂರ್ಮಡಿತೇಜ ಆವಮಲ್ಲನು ಬ್ರಾಹ್ಮಣರಿಗೆ ಮಾದಿನೂರು ಗ್ರಾಮವನ್ನು ದಾನವಾಗಿ ನೀಡಿದ ವಿಚಾರ ಉಲ್ಲೇಖಗೊಂಡಿದೆ.

ದಾನ ನೀಡುವುದೊಂದೆ ಸಂಸ್ಕೃತಿಯಾಗಿರಲಿಲ್ಲ, ಜನರಿಗೆ ಬೇಕಾದ ಅಗತ್ಯ ಕೆರೆ, ಬಾವಿ, ಕಟ್ಟೆ, ಛತ್ರ, ಅರವಟ್ಟಿಗೆ ಮುಂತಾದವುಗಳ ನಿರ್ಮಾಣದ ಲೋಕೋಪಯೋಗಿ ಕಾರ್ಯಗಳನ್ನು ಮಾಡುವುದು ಬಹು ಮುಖ್ಯವಾದ ಕರ್ತವ್ಯವಾಗಿತ್ತು. ಇಂತಹ ಮನೋಭಾವ ಹೊಂದಿರುವುದರಿಂದಲೇ ಕೊಪ್ಪಳ ತಾಲೂಕಿನಲ್ಲಿ ಅನೇಕ ನಿರ್ಮಾಣಗಳು ಇಂದಿಗೂ ಕಂಡುಬರುತ್ತಿವೆ. ಕವಲೂರಿನ ಕ್ರಿ.ಶ 1097ರ ಒಂದು ಶಾಸನದಲ್ಲಿ ಚೌಡಭಟ್ಟನ ಮಗ ಸೋಮಯಾಜಿಯು ವಿಷ್ಣುದೇವಾಲಯ ಸತ್ರ ಮತ್ತು ಕೆರೆಯನ್ನು ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ. ಅಳವಂಡಿಯ ಕ್ರಿ.ಶ 1061ರ ಶಾಸನದಲ್ಲಿ ಗುಲ್ಲಿಮಯ್ಯನು ಊರ ಪಶ್ಚಿಮಕ್ಕೆ ತೋಟವನ್ನು, ಪೂರ್ವಕ್ಕೆ ಬಾವಿ, ಕಲ್ಲದೇಗುಲ ಸತ್ರ, ಸತ್ರದ ಮನೆ ಹಾಗೂ ಊರ ನಡುವೆ ಶ್ರೀ ಬಾಗಿಲನ್ನು ಮಾಡಿಸಿದನೆಂದು ತಿಳಿಸುತ್ತದೆ. ಹುಲಿಗಿಯಲ್ಲಿ ದೊರೆತ ಕ್ರಿ.ಶ. 1088ರ ಶಾಸನದಲ್ಲಿ ಚೌವೇದಿಭಟ್ಟನು ಹುಲಿಗಿ ಎಂಬ ಪುರಕ್ಕೆ ತುಂಗಭದ್ರ ನದಿಯಿಂದ ಸೀಳುನಾಲೆಯನ್ನು ಕಟ್ಟಿಸಿದನೆಂದು ವಿವರಿಸುತ್ತದೆ. ಕ್ರಿ.ಶ1557ರ ಅಚಲಾಪುರ ಶಾಸನದಲ್ಲಿ ಜಂಗಮರ ಹಳ್ಳಿಯ ಕೆರೆ ಒಡೆದಿದ್ದು, ಇದನ್ನು ರಾಜಕೊಂಡ ಉಪಾರಮದನ ಬೋವನ ಮಗ ಕನಕಬೋವ, ಯಲಬೋವನ ಮಗ ತಿಮ್ಮ ಬೋವ, ವೇಮುಲ ತಿಮ್ಮನ ಬೋವನ ಮಗ ಯಲಬೋವ ಈ ಮೂವರು ಒಡೆದಿದ್ದ ಕೆರೆಯನ್ನು ಜೀರ್ಣೋದ್ಧಾರ ಮಾಡಿಸಿದರೆಂದು ಉಲ್ಲೇಖಿಸುತ್ತದೆ. ಕೊಪ್ಪಳದ ಕ್ರಿ.ಶ. 16ನೇ ಶತಮಾನದಲ್ಲಿ ದೊರೆತ ಶಾಸನದಲ್ಲಿ ಮಲಿಶೆಟ್ಟಿಯು ಬಾವಿಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ. ರಾಜ್ಯದ ಅತ್ಯವಶ್ಯಕ ಸಪ್ತಾಂಗಗಳಲ್ಲಿ ದುರ್ಗವೂ ಒಂದು. ವೈರಿಗಳಿಂದ ಕಳ್ಳ-ಕಾಕರಿಂದ ತಮ್ಮ ಸಂಪತ್ತು ರಕ್ಷಿಸಿಕೊಳ್ಳಲು ಕೋಟೆಗಳು ಬಹಳ ಮುಖ್ಯವಾಗಿದ್ದವು. ಕ್ರಿ.ಶ.1746ರ ಕೊಪ್ಪಳ ಶಾಸನದಲ್ಲಿ ಹೈದರ್ ಅಲಿ ಆಡಳಿತವಾಧಿಯಲ್ಲಿ ಕೊಪ್ಪಳ ಕೋಟೆಯ ಕೆಲಭಾಗಗಳನ್ನು ಸುಣ್ಣ ಮತ್ತು ಮಣ್ಣಿನಿಂದ ನಿರ್ಮಿಸಿದನೆಂದು ತಿಳಿಸುತ್ತದೆ. ಕ್ರಿ.ಶ 1609ರ ಕೊಪ್ಪಳದ ಮತ್ತೊಂದು ಶಾಸನದಲ್ಲಿ ಇಬ್ರಾಹಿಂ ಆದಿಲ್ ಷಾನ ಅವಧಿಯಲ್ಲಿ ಯಕ್ಕೂತ್‌ಖಾನ್ ಮತ್ತು ಷಾಜೀಖಾನ್ ಇಬ್ಬರು ಕೊಪ್ಪಳ ಕೋಟೆಯ ಅಧಿಕಾರಿಗಳಾಗಿದ್ದು, ಇವರು ಮಸೀದಿಯನ್ನು ನಿರ್ಮಿಸಿದರೆಂದು ತಿಳಿಸುತ್ತದೆ. ಆದರೆ ಕೋಟೆಯ ಈ ಅಧಿಕಾರಿಗಳ ಕಾರ್ಯವ್ಯಾಪ್ತಿಗಳಾಗಲಿ ಅಥವಾ ಇತರ ಮಾಹಿತಿಗಳಾಗಲಿ ತಿಳಿದುಬರುವುದಿಲ್ಲ.

ಅರಸ, ದೇಶ, ಊರು, ಮಹಿಳೆ, ಗೋವುಗಳ ರಕ್ಷಣೆ ಬಹಳ ಮುಖ್ಯವಾದ ಕರ್ತವ್ಯವಾಗಿತ್ತು. ಅವುಗಳ ರಕ್ಷಣೆಗಾಗಿ ತಮ್ಮ ಪ್ರಾಣವನ್ನೂ ಲೆಕ್ಕಿಸದೆ ಹೋರಾಟ ಮಾಡಿ ತಮ್ಮ ಪ್ರಾಣವನ್ನು ಅರ್ಪಿಸಿದ ಅನೇಕ ವೀರರಿದ್ದಾರೆ. ಇಂತಹ ಉದಾಹರಣೆಗಳು ಕೊಪ್ಪಳ ತಾಲೂಕಿನಲ್ಲಿ ಅನೇಕ ವೀರ ಶಾಸನಗಳು ಮತ್ತು ಹೋರಾಟ ಮಾಡಿ ಮಡಿದ ವೀರನ ಸ್ಮರಣಾರ್ಥ ನಿಲ್ಲಿಸಿದ ಲಿಪಿರಹಿತ ಮತ್ತು ಲಿಪಿಸಹಿತ ವೀರಗಲ್ಲುಗಳು ದೊರೆಯುತ್ತವೆ. ಕ್ರಿ.ಶ 1018ರ ಹಲಗೇರಿ ಶಾಸನದಲ್ಲಿ ಬೆಣ್ಣೆಕಲ್ಲು ಸೀಮೆಯ ಕಾಳಗದಲ್ಲಿ ತಳಾಗನಾಯಕ ಎರೆಯಮ್ಮನೆಂಬುವವನು ಹೋರಾಟ ಮಾಡಿ ಸತ್ತಾಗ ಅವನ ಕುಟುಂಬಕ್ಕೆ ಹಲಗೇರಿಯ ಊರೊಡೆಯ ಮತ್ತು ಮಹಾಜನರು ಸೇರಿ ಭೂದಾನ ಮಾಡಿದರೆಂದು ತಿಳಿಸುತ್ತದೆ. ಅದೇ ರೀತಿ ಅಚಲಾಪುರದಲ್ಲಿ ದೊರೆತ ಒಂದು ಶಾಸನದಲ್ಲಿ ವೀರಕಂಪಿಲದೇವನು ಕಮ್ಮಟದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಸುರತ್ರಾಣನ (ಸುಲ್ತಾನನ)ದಳವು ನೇಮಿಯ ನೇತೃತ್ವದಲ್ಲಿ ಬಂದು ಯುದ್ಧ ಮಾಡಿದಾಗ ಕಾಳಗದಲ್ಲಿ ಗಡೆಸಿಂಗನಾಯ್ಕನ ತಮ್ಮ ಕಾಮಿನಾಯ್ಕನು ಹೋರಾಡಿ ಸಾಯುತ್ತಾನೆ. ಅವನ ಅಕ್ಕ ಮತ್ತು ಅಳಿಯ ಸೇರಿ ವೀರಗಲ್ಲು ಹಾಕಿಸುತ್ತಾರೆ. ಈ ಶಾಸನ ಕಾಲ ಕ್ರಿ.ಶ. 1315 ಆಗಿರುತ್ತದೆ. ಹಲಗೇರಿಯಲ್ಲಿ ಕ್ರಿ.ಶ. 8–9ನೇ ಶತಮಾನಕ್ಕೆ ಸೇರಿದ ಮತ್ತೊಂದು ವೀರ ಶಾಸನ ಕಂಡು ಬರುತ್ತದೆ. ಈ ಪ್ರಸ್ತುತ ಶಾಸನವು ಬಹಳ ವಿಶಿಷ್ಟವಾದ ಶಾಸನ ಎಂದು ಹೇಳಬಹುದು. ಇದರಲ್ಲಿ ಹಲಗೇರಿಯ ಬ್ರಾಹ್ಮಣನಾದ ಸಾವಿರ್ಪಿ ಎಂಬುವವನು ಯುದ್ಧದಲ್ಲಿ ಹೋರಾಡಿ ಸತ್ತಂತೆ ತಿಳಿಯುತ್ತದೆ. ಆದರೆ ಬ್ರಾಹ್ಮಣರೆಂದರೆ ಕೇವಲ ಯಜ್ಞ, ಯಾಗಾಧಿ, ಯಜನ, ವಿದ್ಯಾದಾನ ಮಂತ್ರ ಪಠನೆ ಮುಂತಾದ ಪವಿತ್ರ ಕಾರ್ಯಗಳನ್ನು ಮಾತ್ರ ಮಾಡುವವರು ಎನ್ನುವ ಸಂಗತಿಯನ್ನು ಇದು ಮೀರಿ ನಿಲ್ಲುತ್ತದೆ. ಅದಕ್ಕಾಗಿ ಹಲಗೇರಿಯ ಈ ವೀರಶಾಸನ ಬಹಳ ಅಪರೂಪದ್ದು ಎಂದು ಹೇಳಬಹುದು. ಉತ್ಸವ ಆಚರಣೆಗಳೂ ಕೊಪ್ಪಳದಲ್ಲಿ ನಡೆಯುತ್ತಿದ್ದವು. ಕ್ರಿ.ಶ. 1204ರ ಕೊಪ್ಪಳದ ಶಾಸನದಲ್ಲಿ ಬೊಪ್ಪಸೆಟ್ಟಿಯನ್ನು ಹೊಗಳಲು ಬ್ರಹ್ಮನಿಂದಲೂ ಸಾಧ್ಯವಿಲ್ಲವೆಂದು ಹೇಳಿದೆ. ಅದರಲ್ಲಿ ಅವನ ಶಿಷ್ಯರ ಬಗ್ಗೆಯೂ ಸಹ ವರ್ಣಿಸಿದೆ. ಈ ಬೊಪ್ಪಸೆಟ್ಟಿಯೂ ಕೊಳತೂರು, ಲೊಕ್ಕಿಗುಂಡಿ, ಬಂಕಾಪುರ ಹೂಲಿ, ಕೋಗಳಿ, ಮುಳ್ಗುಂದ, ಅಶೋಕೆ, ಬಟ್ಟಕೆರೆ, ಹಾನುಂಗಲ್ಲು, ನವಿಲ್ಗುಂದ, ಬೆಳುಗೊಳ, ಬಂದಣಿಕೆ, ಪುರಿಕರಗಳಲಿದ್ದ ಬಸದಿಗಳ ಜೀರ್ಣೋದ್ಧಾರ ಮಾಡಿದ. ಅನೇಕ ಉತ್ಸವ ಮತ್ತು ಹಬ್ಬಗಳನ್ನು ಆಚರಿಸಿದನೆಂದು ಪ್ರಸ್ತುತ ಶಾಸನದಲ್ಲಿ ಉಲ್ಲೇಖಿಸಿದೆ. ಒಬ್ಬ ವ್ಯಕ್ತಿ ಇಷ್ಟೆಲ್ಲ ಊರುಗಳಲ್ಲಿರುವ ಬಸದಿಗಳನ್ನು ಜೀರ್ಣೋದ್ಧಾರ ಮಾಡುವುದಾಗಲಿ ಇಲ್ಲವೆ ಆಚರಣೆಗಳು ಮಾಡುವುದೆಂದರೆ ಅದು ಸಾಮಾನ್ಯದ ಸಂಗತಿಯಲ್ಲ.

ಜಿಲ್ಲೆಯಲ್ಲಿ ಶೈಕ್ಷಣಿಕ ಪದ್ಧತಿಯೂ ಉತ್ತಮವಾಗಿ ನಡೆಯುತ್ತಿತ್ತು. ಎನ್ನುವುದಕ್ಕೆ ಇಲ್ಲಿ ಅನೇಕ ಉದಾಹರಣೆಗಳು ಶಾಸನಗಳಲ್ಲಿ ಲಭ್ಯವಾಗುತ್ತದೆ. ಇಲ್ಲಿ ಅಗ್ರಹಾರ, ಬ್ರಹ್ಮಪುರಿ ಮತ್ತು ಘಟಿಕಾಲಯಗಳೂ ಇದ್ದವೆಂದೂ ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಕೊಪ್ಪಳ ತಾಲೂಕನ್ನು ಮಾತ್ರ ತೆಗೆದುಕೊಂಡರೆ ನಾಲ್ಕೂ ಅಗ್ರಹಾರಗಳು ಇರುವ ಬಗ್ಗೆ ತಿಳಿದು ಬರುತ್ತದೆ. ಅಳವಂಡಿ, ಮಾದಿನೂರು, ಗೊಂಡಬಾಳ ಮತ್ತು ಕೌಲೂರು ಈ ನಾಲ್ಕು ಪ್ರಾಚೀನ ಕಾಲದಲ್ಲಿ ಅಗ್ರಹಾರಗಳಾಗಿದ್ದವು. ಕ್ರಿ.ಶ 1268ರ ಅಳವಂಡಿಯಲ್ಲಿ ದೊರೆತ ಶಾಸನವು ಅತ್ಯದ್ಭುತವಾಗಿದೆ. ಇಡಿ ಶಾಸನದಲ್ಲಿ ಅಗ್ರಹಾರವಾಗಿದ್ದ ಅಳವಂಡಿ ಗ್ರಾಮದ ಮತ್ತು ಅಲ್ಲಿನ ಜನರ ಬಗ್ಗೆ ವರ್ಣನೆ ಬರುತ್ತದೆ. ಇಲ್ಲಿನ ಮನೆಮನೆಯಲ್ಲೂ ಶಂಕರ ಅಚ್ಯುತ ಬುಧಜನರ, ಅತಿಥಿಗಳ ಪೂಜೆ ನಡೆಯುತ್ತಿತ್ತು. ವೇದ ಮಂತ್ರಗಳಿಂದ, ಮಠ–ಸತ್ರಗಳಿಂದ ಶೋಭಿಸುತ್ತಿತ್ತು. ವ್ಯಾಕರಣ, ಆಗಮ, ಸ್ಮೃತಿ ಪುರಾಣ ಇತ್ಯಾದಿಗಳ ಅಭ್ಯಾಸದಿಂದ ಶೋಭಿಸುತ್ತಿದ್ದ 400 ಮಹಾಜನರು ಈ ಗ್ರಾಮದಲ್ಲಿದ್ದರೆಂದು ವರ್ಣಿಸಿದೆ. ಪ್ರಾಚೀನ ಕಾಲದಲ್ಲಿ ಅಗ್ರಹಾರವಾಗಿದ್ದ ಈ ಅಳವಂಡಿ ಗ್ರಾಮವು ಒಂದು ಬಹುದೊಡ್ಡ ವಿದ್ಯಾಕೇಂದ್ರವಾಗಿತ್ತೆಂದು ಹೇಳಬಹುದು. ಮಾದಿನೂರಿನಲ್ಲಿಯೂ ಸಹ ದೊರೆತ ಶಾಸನ ಬಹಳ ವಿಶಿಷ್ಟವಾಗಿದೆ. ಈ ಶಾಸನವು ಮೂರು ಬೇರೆ ಬೇರೆ ಕಾಲಗಳಲ್ಲಿ ರಚಿತವಾಗಿದ್ದು ಸ್ವಲ್ಪ ತ್ರುಟಿತವಾಗಿದೆ. ಅಗ್ರಹಾರವಾಗಿದ್ದ ಈ ಮಾದಿನೂರು ಗ್ರಾಮವನ್ನು ಮೊದೆನೂರು, ಮೋದಿಗ್ರಾಮ, ಮೋದನೂರು ಮುಂತಾದ ಹೆಸರುಗಳಿಂದ ಪ್ರಸಿದ್ಧವಾಗಿತ್ತು. ಇಲ್ಲಿನ ಮಹಾಜನರ ವರ್ಣನೆಯೂ ಸಹ ಬರುತ್ತದೆ. ಈ ಊರಿನ ಪ್ರಸಿದ್ಧಿಯನ್ನು ನೋಡಿ ದಿನೇಶ, ಶಿವ ಮೊದಲಾದ ದೇವತೆಗಳು ಇಲ್ಲಿ ಬಂದು ನೆಲೆಸಿದ್ದರೆಂದು ಶಾಸನದಲ್ಲಿ ವರ್ಣನೆ ಬರುತ್ತದೆ. ಕವಲೂರು ಗ್ರಾಮದಲ್ಲಿ ಬೇರೆ ಬೇರೆ ಏಳು ಕಾಲಗಳಲ್ಲಿ ಕೆತ್ತಿಸಿದ ಒಂದು ಶಾಸನದಲ್ಲಿ ಕವಲೂರು ಅಗ್ರಹಾರದ ಬಗ್ಗೆ ಉಲ್ಲೇಖ ಬರುತ್ತದೆ. ಅದೇ ರೀತಿಯಾಗಿ ಕ್ರಿ.ಶ 1512ರಲ್ಲಿ ಗೊಂಡಬಾಳದಲ್ಲಿ ದೊರೆತ ಶಾಸನದಲ್ಲಿ ಗೊಂಡಬಾಳ ಗ್ರಾಮವನ್ನು ಅಗ್ರಹಾರ ಎಂದು ಕರೆದಿದ್ದು ಈ ಗ್ರಾಮದ ಎಲ್ಲೆಯನ್ನು, ಗಡಿ ವಿವರಿಸುತ್ತದೆ. ತಾಲೂಕಿನ ಕೆಲ ಶಾಸನಗಳಲ್ಲಿ ಬ್ರಹ್ಮಪುರಿ ಎಂಬ ಉಲ್ಲೇಖ ಬರುತ್ತದೆ. ಆದರೆ ಆ ಊರುಗಳ ಹೆಸರು ಎಲ್ಲಿಯೂ ಉಲ್ಲೇಖಗೊಂಡಿರುವುದಿಲ್ಲ. ಅದೇನೆ ಇದ್ದರೂ ಅಗ್ರಹಾರ ಮತ್ತು ಬ್ರಹ್ಮಪುರಿಗಳು ಪ್ರಾಚೀನ ಕಾಲದಲ್ಲಿ ವಿದ್ಯಾಕೇಂದ್ರಗಳಾಗಿದ್ದವೆಂದು ಹೇಳಬಹುದು.

ಹೀಗೆ ಕೊಪ್ಪಳ ತಾಲೂಕಿನ ಶಾಸನಗಳಲ್ಲಿ ಸಂಸ್ಕೃತಿಯು ಅನಾವರಣಗೊಳ್ಳುತ್ತದೆ. ಪ್ರಾಚೀನ ಕಾಲದಲ್ಲಿ ಸಂಸ್ಕೃತಿಯನ್ನೇ ಬಹುಮುಖ್ಯವಾಗಿ ಬದುಕಿನ ಒಂದು ಭಾಗವೆಂದು ಭಾವಿಸಿದ್ದರು. ಆದ್ದರಿಂದಲೇ ಇಂದು ಅನೇಕ ಅವಶೇಷಗಳು ನಮಗೆ ಶಾಸನಗಳ ಮೂಲಕ ಕಂಡು ಬರುತ್ತಿವೆ. ಅವುಗಳನ್ನು ಮುಂದಿನ ಪೀಳಿಗೆಗೂ ಕೊಂಡೊಯ್ಯಬೇಕಾಗಿದೆ.

**ಆಕರ ಗ್ರಂಥಗಳು :–**


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999

2) ಹಂಪ ನಾಗರಾಜಯ್ಯ, ಕೊಪ್ಪಳ ಶಾಸನಗಳು, ರತ್ನತ್ರಯ ಪ್ರಕಾಶನ, ಮೂಸೂರು–1998

3) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020

4) ಡಾ.ಶರಣಬಸಪ್ಪ ಕೋಲ್ಕಾರ, ಕೊಪ್ಪಳ–ಹಂಪಿ ಪ್ರದೇಶ ಚರಿತ್ರೆ ಮತ್ತು ಪುರಾತತ್ವ, ಮಣಿ ಪ್ರಕಾಶನ, ಮೈಸೂರು–2021

4) ಡಾ. ರವಿ ಎನ್. ಚವ್ಹಾಣ, ಕುಷ್ಟಗಿ ತಾಲೂಕಿನ ಶಾಸನಗಳು ಹಾಗೂ ಸ್ಮಾರಕಗಳು, ಆದಿ ಪ್ರಕಾಶನ, ಗಂಗಾವತಿ–2022


* * * * *

## ಆನೆಗುಂದಿ ಶಾಸನಗಳು; ಒಂದು ಅವಲೋಕನ

ಕುಮ್ಮಟದುರ್ಗದ ಅರಸರ ಕಾಲದಲ್ಲಿ ಹೊಸಮಲೆದುರ್ಗ, ಕುಮ್ಮಟದುರ್ಗ, ಕಂಪ್ಲಿ, ಆನೆಗುಂದಿ ಪಟ್ಟಣಗಳಾಗಿದ್ದವು. ಕುಮ್ಮಟದುರ್ಗದ ಅರಸರು ಕುಮ್ಮಟದುರ್ಗದಿಂದ ಆಳ್ವಿಕೆ ನಡೆಸುವಾಗ ಅವುಗಳು ಪಟ್ಟಣಗಳಾಗಿ ಬಿಂಬಿತವಾಗಿದ್ದವು. ಕುಮ್ಮಟದುರ್ಗದ ಅರಸರು ನಾಶವಾದ ನಂತರವೇ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತು. ಆದರೆ ಕ್ರಿ.ಶ 1336ರಲ್ಲಿ ಸ್ಥಾಪಿತವಾದ ವಿಜಯನಗರವು ಮೊದಲ ಸ್ಥಾಪನೆಗೊಂಡಿದ್ದು ಆನೆಗುಂದಿಯಲ್ಲಿ. ಆನೆಗುಂದಿಯನ್ನು ಅದರ ರಾಜಧಾನಿಯನ್ನಾಗಿ ಮಾಡಿಕೊಂಡು ನಂತರದಲ್ಲಿ ಬಂದ ಅರಸರು ವಿಜಯನಗರದ ಸಾಮ್ರಾಜ್ಯವನ್ನು ಹಂಪೆಗೆ ಸ್ಥಳಾಂತರಿಸಿ ಅಲ್ಲಿಯೇ ಭವ್ಯವಾದ ಸಾಮ್ರಾಜ್ಯವನ್ನು ಕಟ್ಟಿದರು. ಹಂಪೆಯನ್ನು ಅದರ ರಾಜಧಾನಿಯನ್ನಾಗಿ ಮಾಡಿಕೊಂಡು ತುಂಗಭದ್ರ ನದಿಯಿಂದ ಕೃಷ್ಣಾ ನದಿಯವರೆಗೂ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿಕೊಂಡರು.

ಆನೆಗುಂದಿಯು ವಿಜಯನಗರ ಸಾಮ್ರಾಜ್ಯದ ಆರಂಭಿಕ ರಾಜ್ಯಧಾನಿಯಾಗಿ ಮೆರೆದು, ನಂತರದಲ್ಲಿ ಇತಿಹಾಸದುದ್ದಕ್ಕೂ ತನ್ನ ಅಭೂತಪೂರ್ವವಾದ ಕೊಡುಗೆಯನ್ನು ನೀಡಿದೆ. ಇತಿಹಾಸ ಮತ್ತು ಸಾಂಸ್ಕೃತಿಕ ಲೋಕಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಈ ಆನೆಗುಂದಿಯು ಇತಿಹಾಸವನ್ನು ಅನೇಕ ಆಕರಗಳಿಂದ ತಿಳಿಯಬಹುದಾಗಿದೆ. ಅದರಲ್ಲಿ ಶಾಸನ ಆಕರಗಳೂ ಒಂದು ಮತ್ತು ಮುಖ್ಯವಾದ ಆಕರಗಳೆನ್ನಬಹುದು. ಆನೆಗುಂದಿಯು ನಾಡಿಗೆ ನೀಡಿದ ಸಾಂಸ್ಕೃತಿಕ ಕೊಡುಗೆಯನ್ನು ಶಾಸನಗಳ ಆಕರಗಳಿಂದ ತಿಳಿದುಬರುತ್ತದೆ. ಆನೆಗುಂದಿಯಲ್ಲಿ ಸುಮಾರು 45ಕ್ಕೂ ಅಧಿಕ ಶಾಸನಗಳು ಲಭ್ಯವಾಗಿರುವುದು ವಿಶೇಷವಾಗಿದೆ. ಶಿಲಾಶಾಸನಗಳು, ಕಲ್ಲುಬಂಡೆಯ ಶಾಸನಗಳು, ನಿಶಧಿಗಲ್ಲು ಶಾಸನಗಳು, ವೀರಗಲ್ಲು ಶಾಸನಗಳು, ಗರುಡಗಂಭ ಶಾಸನಗಳ ಜೊತೆಗೆ ತಾಮ್ರಶಾಸನ, ಹಿತ್ತಾಳೆ ಶಾಸನಗಳು ದೊರಕಿರುವುದರಿಂದ ಆನೆಗುಂದಿಯ ಹಿರಿಮೆ ಇಲ್ಲಿ ದೊರೆತ ಶಾಸನಗಳಲ್ಲಿ ಚಿಕ್ಕ–ಚಿಕ್ಕ, ಅಸ್ಪಷ್ಟ ಮತ್ತು ಹಾಳಾದ ಶಾಸನಗಳೂ ಇವೆ. ಅವುಗಳಲ್ಲಿ ಹೆಚ್ಚಿನ ಮಾಹಿತಿ ದೊರೆಯಲಾರದು. ಕೆಲ ಶಾಸನಗಳಂತೂ ಕೇವಲ ಕಾಲದ ಉಲ್ಲೇಖವಿದ್ದರೆ, ಇನ್ನೂ ಕೆಲ ಶಾಸನಗಳಲ್ಲಿ ಲಿಪಿ ಮಾತ್ರ ಕಾಣುವ ಶಾಸನಗಳು ದೊರಕಿವೆ. ಅವುಗಳಿಂದ ಹೆಚ್ಚಿನ ಮಾಹಿತಿ ಅಥವಾ ಇತಿಹಾಸವನ್ನು ನಿರೀಕ್ಷಿಸುವುದು ಕಷ್ಟವಾಗುತ್ತದೆ.

ಕ್ರಿ.ಶ ಸುಮಾರು 13ನೇ ಶತಮಾನಕ್ಕೆ ಸೇರಿದ ಒಂದು ತಾಮ್ರ ಶಾಸನವು, ಆನೆಗುಂದಿಯಲ್ಲಿ ದೊರೆತ ಶಾಸನಗಳಲ್ಲೇ ಬಹಳ ವಿಶಿಷ್ಟವಾದ ಶಾಸನವಾಗಿದೆ. ಅದು ಇತಿಹಾಸ ಮತ್ತು ಸಾಂಸ್ಕೃತಿಕ ಲೋಕದ ಜೊತೆಗೆ ಸಾಹಿತ್ಯಿಕ ಲೋಕವನ್ನೂ

ಅನಾವರಣ ಮಾಡುತ್ತದೆ. ಈ ಶಾಸನವು ಶಿವ–ಪಾರ್ವತಿ(ಗಿರಿಜೆ)ಯ ವಿವಾಹದ ಕತೆ ಮತ್ತು ಅಮೃತಮಂಥನ ಕತೆಯನ್ನೂ ವಿವರಿಸುತ್ತದೆ. ವಿವಾಹವನ್ನು ವಿವರಿಸುವುದರ ಜೊತೆಗೆ ಕುಂಬಾರರ ಕುಲ ಹುಟ್ಟಿನ ಬಗ್ಗೆ ಶಾಸನಕಾರ ಉಲ್ಲೇಖಿಸಿದ್ದಾನೆ. 269 ಸಾಲುಗಳನ್ನು ಹೊಂದಿದ ಏಂಟು ಹಲೆಗೆಯ ಬಹಳ ಸುದೀರ್ಘವಾದ ಮತ್ತು ಅಪರೂಪದ ತಾಮ್ರ ಶಾಸನ ಎಂದು ಹೇಳಬಹುದು. ಈ ಶಾಸನವನ್ನು ಸಾಹಿತ್ಯಿಕ ದೃಷ್ಠಿಯಿಂದ ನೋಡುವುದಾದರೆ ಅತ್ಯದ್ಭುತವಾಗಿದೆ. ಛಂದಸ್ಸಿನ ಹಲವು ರೂಪಗಳಿಂದ ಕೂಡಿದೆ. ಅಂಶಷಟ್ಪದಿ, ಮಾತ್ರವೃತ್ತ, ಅಂಶವೃತ್ತಗಳಲ್ಲಿ ಶಾಸನ ರಚಿತವಾಗಿರುವುದು ಬಹಳ ವಿಶೇಷವಾಗಿದೆ. ಆನೆಗುಂದಿಯಲ್ಲಿ ಅಂಬಿಗರಿಗೆ ಸಂಬಂಧಿಸಿದ ಶಾಸನಗಳು ದೊರಕಿವೆ. ಕ್ರಿ.ಶ 17–18ನೇ ಶತಮಾನಕ್ಕೆ ಸೇರಿದ ತಾಮ್ರ ಶಾಸನದಲ್ಲಿ ವಿಜಯನಗರದ ಅರಸ ಸದಾಶಿವರಾಯನು ಆನೆಗುಂದಿಯ ನಾಗಜೋಗಿ ಮತ್ತು ಬಸವಜೋಗಿ ಇರ್ವರಿಗೆ ಎರಡು ಭಾಗದಲ್ಲಿ ಒಟ್ಟು ಮೂವತ್ತು ಕೊಳಗ ನೀರು ಭೂಮಿಯನ್ನು ನೀಡಿ, ಅದರ ಆದಾಯವನ್ನು ಅನುಭವಿಸುತ್ತಾ ಬ್ರಾಹ್ಮಣ, ಸಾಧು–ಸಂತರಿಗೆ ಸೇವೆ ಮಾಡಬೇಕೆಂದು ಆಜ್ಞಾಪಿಸಿದನೆಂದು ತಿಳಿಸುತ್ತದೆ. ಕ್ರಿ.ಶ 1721ರ ತೆಲುಗು ಭಾಷೆಯ ಶಾಸನದಲ್ಲಿ ಆನೆಗುಂದಿಯ ಸಂಸ್ಥಾನದವರು ಅಂಬಿಗರ ಬರಮ ಮತ್ತು ಬಸವ ಎಂಬುವವರು ಸಂಸ್ಥಾನದ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸುತ್ತಿರುವುದರಿಂದ ಇವರಿಗೆ ಎರಡು ಹುಟ್ಟುಗಳನ್ನು ಬಹುಮಾನವಾಗಿ ನೀಡುತ್ತಾರೆ. ಮತ್ತು ಇವರು ಜಾತಿಯ ರೀತಿ–ರಿವಾಜುಗಳನ್ನು ನಿಯಂತ್ರಿಸುವವರೂ ಆಗಿದ್ದಾರೆಂದು ಶಾಸನದಲ್ಲಿ ವಿವರಿಸುವುದರಿಂದ, ಇವರು ತಮ್ಮ ಜನಾಂಗದ ನಾಯಕರಾಗಿದ್ದರೆಂದು ತಿಳಿದುಬರುತ್ತದೆ. ಆದರೆ ಈ ಶಾಸನ ತೆಲುಗು ಭಾಷೆಯಲ್ಲಿ ಯಾಕೆ ಲಿಖಿತವಾಯಿತು ಎಂಬ ಪ್ರಶ್ನೆ ಉದ್ಭವವಾದರೂ ಅರ್ಥ ಕಂಡುಕೊಳ್ಳುವುದು ಬಹಳ ಕಷ್ಟವಾಗುತ್ತದೆ. ಅಂಬಿಗರು ಕೇವಲ ತಾವಷ್ಟೇ ದಾನ–ಬಹುಮಾನಗಳನ್ನು ಪಡೆಯುವುದು ಅವರ ಕರ್ತವ್ಯವಾಗಿರಲಿಲ್ಲ. ತಾವೂ ಸಹ ತಮ್ಮ ಕೈಲಾದ ಮಟ್ಟಿಗೆ ಇತರರಿಗಿಂತ ಕಡಿಮೆ ಇಲ್ಲ ಎಂಬಂತೆ ದಾನ ನೀಡುವ ಸಂಸ್ಕೃತಿಯನ್ನು ಮೆರೆದಿದ್ದಾರೆ. ಕ್ರಿ.ಶ 1556ರ ಶಾಸನದಲ್ಲಿ ಸದಾಶಿವರಾಯನ ಕಾಲದಲ್ಲಿ ಹೊಳೆಯ 14 ಬೋವರು, 300 ಮಂದಿ ಅಂಬಿಗರು ಮಹಲಿಂಗವೊಡೆಯರಿಗೆ ತಮ್ಮ ಚಿಕ್ಕ ಮತ್ತು ದೊಡ್ಡ ಹರಿಗೋಲುಗಳ ಮೇಲಿನ ಹಣವನ್ನು ದಾನವಾಗಿ ಬಿಟ್ಟ ವಿಷಯ ತಿಳಿಸುತ್ತದೆ.

ಆನೆಗುಂದಿಯ ಜನತೆ ದಾನ–ಧರ್ಮಗಳಲ್ಲಿ, ಸಾಮಾಜಿಕ ಕಾರ್ಯಗಳಲ್ಲಿ ಹಿಂದೆ ಬಿದ್ದಿರಲಿಲ್ಲ ಎನ್ನುವುದಕ್ಕೆ ಇಲ್ಲಿ ದೊರೆತ ಶಾಸನಗಳೇ ಸಾಕ್ಷಿ. ಕ್ರಿ.ಶ 1533ರ ಶಾಸನದಲ್ಲಿ ಅಚ್ಯುತದೇವರಾಯನು ಆಳುತ್ತಿದ್ದಾಗ ಆನೆಗುಂದಿ ಮಾಗಣಿಯ ತಮ್ಮರಸಯ್ಯನು ಅಚ್ಯುತರಾಯನಿಗೆ ಪುಣ್ಯವಾಗಲೆಂದು ಮಹೇಶನಗುಡಿಗೆ ನೈವೆದ್ಯಕ್ಕೆ ದಾನ ನೀಡುತ್ತಾನೆ.

ಅಂದರೆ ಇಲ್ಲಿ ಗಮನಿಸಬೇಕಾದ ಮುಖ್ಯ ವಿಚಾರವೆಂದರೆ ತಮ್ಮನ್ನು ಆಳುತ್ತಿದ್ದ ಅರಸನಿಗೆ ಒಳ್ಳೆಯದಾಗಲಿ ಎಂದು ಜನಸಾಮಾನ್ಯರೂ ದಾನ ನೀಡುತ್ತಿದ್ದು ಬಹಳ ವಿಶೇವಾಗಿದೆ. ಕ್ರಿ.ಶ 1531ರ ಶಾಸನದಲ್ಲಿ ಅಚ್ಯುತದೇವರಾಯನ ಕಾಲದಲ್ಲಿ ಬಸವರಾಜದೇವರಿಗೆ ಚಮರದ ಕೋನಪ್ಪನಾಯಕನ ಮಗ ಮಾದ್ಯೆಯ, ಪೆನುಗುಂಡೆಯ ನಾಗ್ಯೆಯನು ದೇವರ ನಿತ್ಯ ನೈವೇದ್ಯಕ್ಕಾಗಿ ದಾನ ನೀಡಿ, ಅರವಟ್ಟಿಗೆ ನಿರ್ಮಿಸಿದ್ದನ್ನು ತಿಳಿಸುತ್ತದೆ. ಕ್ರಿ.ಶ 1382ರ ಶಾಸನದಲ್ಲಿಯೂ ಹರಿಹರನ ಮಗ ಕಂಪ ಭೂಪಾಲನು ತುಂಗಭದ್ರೆ ತೀರದಲ್ಲಿ ಸೋಪಾನ ಮಾಡಿಸಿದನೆಂದು ಉಲ್ಲೇಖಿಸಿದೆ. ಮಾಳಿಜೆಟಿಯ ಮಗ ಮಲ್ಲರಾಯಪ ಮೆಟ್ಟಿಲುಗಳನ್ನು ಮಾಡಿಸಿದಂತೆ ಕ್ರಿ.ಶ ಸುಮಾರು 16ನೇ ಶತಮಾನದ ತೃಟಿತ ಶಾಸನದಲ್ಲಿ ಉಲ್ಲೇಖವಿರುವುದು ಕಂಡುಬರುತ್ತದೆ.

ಕೊಪ್ಪಳ ಜಿಲ್ಲೆಯು ಜೈನಧರ್ಮದ ಪವಿತ್ರ ಕ್ಷೇತ್ರವಾಗಿತ್ತು. ಎನ್ನುವುದಕ್ಕೆ ಇಲ್ಲಿ ದೊರೆತ ಅಪಾರವಾದ ಇತಿಹಾಸವೇ ಸಾಕ್ಷಿ. ಬಿಳಿಯರಳೆಯಂತೆ ಇದ್ದು ಮಹಾತೀರ್ಥವಾಗಿತ್ತು. ಅಚಲವಾಗಿ ಧರ್ಮಕ್ಕೆ ಅಪಾರ ಕೊಡುಗೆಯನ್ನು ನೀಡಿದೆ. ಈ ಕೊಪಣಾಚಲ ನಾಡು ಜೈನ ಧರ್ಮದ ಬೀಡಾಗಿತ್ತು. ಜೈನಧರ್ಮಕ್ಕೆ ಕೇವಲ ಕೊಪ್ಪಳ ಅಷ್ಟೇ ಪ್ರಸಿದ್ದಿ ಪಡೆದಿರಲಿಲ್ಲ: ಸುತ್ತಲಿನ ಪರಿಸರದಲ್ಲಿಯೂ ಜೈನಧರ್ಮದ ಕಂಪು ಪಸರಿಸಿತ್ತು. ಎನ್ನುವುದಕ್ಕೆ ಆನೆಗುಂದಿಯೇ ಸಾಕ್ಷಿ. ಜೈನ ಧರ್ಮಕ್ಕೆ ಸಂಬಂಧಿಸಿದ ಅನೇಕ ಶಾಸನಗಳು ಇಲ್ಲಿ ದೊರಕಿವೆ. ಜೈನಧರ್ಮದ ಪ್ರಭಾವ ಇಲ್ಲಿಯೂ ಬೀರಿತ್ತೆಂದು ಹೇಳಬಹುದು. ಕ್ರಿ.ಶ 1371ರ ಶಾಸನದಲ್ಲಿ ಮೂಲಸಂಘ ಬಲಾತ್ಕಾರಗಣದ ಧರ್ಮಭೂಷಣ ಭಟ್ಟಾರಕರ ಪ್ರಿಯಶಿಷ್ಯ ಬೂಚಣನು ನಿಷಿಧಿಗೆಯಾದ ಬಗ್ಗೆ ತಿಳಿಸುತ್ತದೆ. ಕ್ರಿ.ಶ 1375ರ ಶಾಸನದಲ್ಲಿಯೂ ಮೂಲಸಂಘ ಬಲತ್ಕಾಗಣದ ಮದನಕೀರ್ತಿರವುಳನ ಪ್ರಿಯಶಿಷ್ಯ ಬ್ಯಂನುರ ಚಿಕ್ಕಣನ ಮಗ ನಾಗಪ್ಪ ನಿಷಿಧಿಗೆಯಾದ ವಿಷಯ ತಿಳಿಸುತ್ತದೆ. ಅದೇ ರೀತಿ ಕ್ರಿ.ಶ 1366ರ ಮತ್ತೊಂದು ಶಾಸನದಲ್ಲಿ ಮೂಲಸಂಘು ದೇಶಿಗಣದ ನರೇಂದ್ರಸೇನನ ಪ್ರಿಯಶಿಷ್ಯ ಹಾನಿಯ ಲಿಖ್ಖಿಸೆಟ್ಟಯ ಮಗ ಗೋಪಿಸೆಟ್ಟಿ ನಿಷಿಧಿಗೆಯಾದದ್ದು ತಿಳಿಸುತ್ತದೆ. ಕಾಲದ ಉಲ್ಲೇಖವಿರದ ಮತ್ತೊಂದು ಶಾಸನದಲ್ಲಿ ಯಾರೋ ಒಬ್ಬ ವ್ಯಕ್ತಿಯೋರ್ವನು ನಿಷಿಧಿಯಾದಂತೆ ತಿಳಿದುಬರುತ್ತದೆ. ಈ ಇಚ್ಛಾಮರಣ, ನಿಶಧಿಗೆ ಕೇವಲ ಪುರುಷರಿಗಷ್ಟೆ ಮೀಸಲಿರಲಿಲ್ಲ. ಮಹಿಳೆಯರಿಗೂ ಸಹ ಇಚ್ಛಾಮರಣವನ್ನು ಪಡೆದುಕೊಳ್ಳುತ್ತಿದ್ದರು. ಅವರ ಸಾಧನೆಯ ನೆನಪಿಗಾಗಿ ನೀಶಿಧಿಗೆಯನ್ನು ಕಟ್ಟಿಸುತ್ತಿದ್ದರು. ಇಂತಹ ಉಲ್ಲೇಖವನ್ನು ಹೇಳುವ ಶಾಸನಗಳೂ ಆನೆಗುಂದಿಯಲ್ಲಿ ಲಭ್ಯವಾಗಿವೆ. ಕ್ರಿ.ಶ. 1371ರ ಶಾಸನದಲ್ಲಿ ಹೊನ್ನಹಟ್ಟಿಯ ಸಯಿತಿಯ ಮಗಳು ಸೊಯಿಶೆಟ್ಟಿಯು ನಿಶಿಧಿಗೆಯಾದ ಬಗ್ಗೆ ಉಲ್ಲೇಖಿಸುತ್ತದೆ.

ಕ್ರಿ.ಶ. 1325ರ ಶಾಸನದಲ್ಲಿ ಮಂಡಳಾರ್ಯನಾದ ಲಳಿತಕೀರ್ತಿಬಟ್ಟಾರನ ಪ್ರಿಯಶಿಷ್ಯ ಹಂಗುದ ಗೋವಿಸೆಟ್ಟಿಯ ಸೊಸೆ ಸೋವಿಯಕ್ಕನು ನಿಷಿಧಿಗೆಯಾದ ಬಗ್ಗೆ ತಿಳಿಸುತ್ತದೆ. ಕ್ರಿ.ಶ. 1357ರ ಶಾಸನದಲ್ಲಿ ಪ್ರಧಾನ್ಯೋತ್ತಮ ಬುಳ್ಳರಾಜನ ಪತ್ನಿ ಕಳುಬಾಯಿಯು ಸಮ್ಯಕ್ತ್ವವ್ರತ ಪೂರ್ವಕವಾಗಿ ಚಾಲಚಂದ್ರಯೋಗೀಂದ್ರನ ಪಾದಕಮಲಗಳಲ್ಲಿ ದೀಕ್ಷೆ ಸ್ವೀಕರಿಸಿ ಮುಡುಪಿದ ವಿಷಯ ಉಲ್ಲೇಖಿಸುತ್ತದೆ. ಆನೆಗುಂದಿಯಲ್ಲಿ ಸತಿಸಹಗಮನ ಪದ್ಧತಿ ಜಾರಿಯಲ್ಲಿತ್ತೆಂದು ಹೇಳುವುದಕ್ಕೆ ಇಲ್ಲಿ ಒಂದು ಶಾಸನ ಪುಷ್ಟಿಕೊಡುತ್ತದೆ. ಕಾಲದ ಉಲ್ಲೇಖವಿರದ ಒಂದು ಶಾಸನದಲ್ಲಿ ಭಯಿರಿಸೆಟ್ಟ ಮಗ ನಾಗಿಸೆಟ್ಟಿಯ ಹೆಂಡತಿ ತಿಂಮಾಯಿ ತನ್ನ ಗಂಡ ಸತ್ತಾಗ ಕಿಚ್ಚು ಹಾಯ್ದಳೆಂದು ತಿಳಿಸುತ್ತದೆ. ಆನೆಗುಂದಿಯು ವೀರತ್ವಕ್ಕೇನೂ ಕೊರತೆ ಇರಲಿಲ್ಲ ಎನ್ನಬಹುದು. ಇದಕ್ಕೆ ಸಾಕ್ಷಿ ಎನ್ನುವಂತೆ ಇಲ್ಲಿ ಎರಡು ವೀರಗಲ್ಲು ಶಾಸನಗಳು ದೊರಕಿವೆ. ಒಂದು ಶಾಸನದಲ್ಲಿ ವಚಯಹೆರಾಯನ ಮಗ ಹಂಪಂಣನನ್ನು ಹೆಸರಿಸಿದರೆ, ಮತ್ತೊಂದು ಶಾಸನದಲ್ಲಿ ಭುರುಮದೇವನ ಮಗ ಗಂಗಣನನ್ನು ಉಲ್ಲೇಖಿಸುತ್ತದೆ. ಆದರೆ ಈ ಎರಡೂ ವೀರಗಲ್ಲುಗಳು ಅಸ್ಪಷ್ಟವಾಗಿದ್ದು ಕೇವಲ ಹೆಸರುಗಳನ್ನು ಮಾತ್ರ ಉಲ್ಲೇಖಿಸುತ್ತದೆ. ಲಿಪಿಯು ಆಧಾರದ ಮೇಲೆ ಇವುಗಳ ಕಾಲವನ್ನು ಕ್ರಿ.ಶ. ಸುಮಾರು 16–17ನೇ ಶತಮಾನಕ್ಕೆ ಹೋಲಿಸಬಹುದಾಗಿದೆ.

ಈ ರೀತಿಯಾಗಿ ಆನೆಗುಂದಿಯ ಶಾಸನಗಳು ತಮ್ಮ ಒಡಲೊಳಗೆ ಇಟ್ಟುಕೊಂಡಿದ್ದ ಇತಿಹಾಸವನ್ನು ಅನಾವರಣ ಮಾಡುತ್ತವೆ. ಇತಿಹಾಸದಲ್ಲಿ ಈ ನಾಡಿನ ಹಿರಿಮೆಯು ಹೆಚ್ಚಾಗುತ್ತಾ ಹೋಗುತ್ತದೆ. ಇಂತಹ ಇತಿಹಾಸದ ಜೀವನಾಡಿ ಶಾಸನಗಳನ್ನು ರಕ್ಷಿಸಬೇಕಾದದ್ದು ಸಮಾಜದ ಮೇಲಿದೆ.

**ಆಕರ ಗ್ರಂಥಗಳು :–**


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020
3) ಡಾ. ಶರಣಬಸಪ್ಪ ಕೋಲ್ಕಾರ, ಕೊಪ್ಪಳ–ಹಂಪಿ ಪ್ರದೇಶ ಚರಿತ್ರೆ ಮತ್ತು ಪುರಾತತ್ವ, ಮಣಿ ಪ್ರಕಾಶನ, ಮೈಸೂರು–2021


* * * * *

## ಕನಕಗಿರಿ ನಾಯಕರ ಕಾಲದ ಶಾಸನಗಳು

ವಿಜಯನಗರವು ದಕ್ಷಿಣ ಭಾರತದಲ್ಲೇ ಒಂದು ಬಹುದೊಡ್ಡ ಸಾಮ್ರಾಜ್ಯವಾಗಿ ಬೆಳೆದು ನಿಂತಿತ್ತು ಎನ್ನುವುದಕ್ಕೆ ಇಲ್ಲಿನ ಇತಿಹಾಸವೇ ಸಾಕ್ಷಿ, ರಾಜಕೀಯವಾಗಿ ಬೆಳೆದು ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಮತ್ತು ಕಲೆ ಮತ್ತು ವಾಸ್ತುಶಿಲ್ಪ, ಸಾಹಿತ್ಯ ಕ್ಷೇತ್ರಗಳಿಗೆ ನೀಡಿದ ಕೊಡುಗೆ ಅಪಾರ. ಈ ಸಾಮ್ರಾಜ್ಯದಲ್ಲಿ ಸಂಗಮ, ಸಾಳವ ತುಳು ಮತ್ತು ಅರವೀಡು ಎಂಬ ನಾಲ್ಕು ಬಹುಮುಖ್ಯ ಮನೆತನಗಳು ಆಳ್ವಿಕೆ ನಡೆಸಿ, ನಾಡಿಗೆ ತನ್ನದೇ ಆದ ಕೊಡುಗೆಯನ್ನು ನೀಡಿವೆ. ಈ ಸಾಮ್ರಾಜ್ಯವು ಆಳ್ವಿಕೆ ನಡೆಸಿ ನಾಡಿಗೆ ಏನೇ ಕೊಡುಗೆ ನೀಡಿದ್ದರೂ ಅದಕ್ಕೆ ಸಹಕಾರ ನೀಡಿದ ಸಣ್ಣ ಸಣ್ಣ ಪಾಳೆಗಾರಿಕೆ ಮನೆತನಗಳನ್ನು ಇಲ್ಲಿ ನೆನೆಯಲೇಬೇಕು. ಸಣ್ಣ–ಸಣ್ಣ ದೊರೆ, ಪಾಳೆಗಾರಿಕೆ, ನಾಯಕ ಮುಂತಾದವರು ಅರಸರಿಗೆ ಸೈನ್ಯ, ಆರ್ಥಿಕ, ರಾಜಕೀಯವಾಗಿ ಬೆಂಬಲ ನೀಡಿದ್ದನ್ನು ಮೆಚ್ಚಬೇಕು. ಈ ಪಾಳೆಗಾರಿಕೆ ಮನೆತನಗಳು ತಾವು ಕೂಡಾ ಬಲಶಾಲಿಯಾಗಿ ಬೆಳೆದು ಸಾಮ್ರಾಜ್ಯಕ್ಕೆ ಎಲ್ಲಾ ರೀತಿಯಿಂದಲೂ ಸಂಪೂರ್ಣ ಸಹಾಯ ಸಹಕಾರವನ್ನು ನೀಡುತ್ತಿದ್ದವು. ಈ ಪಾಳೆಗಾರರನ್ನು ಆಡಳಿತಾತ್ಮಕವಾಗಿ 'ಸ್ಥಳೀಯ ಅರಸ'ರೆಂತಲೂ ಕರೆಯಬಹುದು. ಇದು ವಿಕೇಂದ್ರಿಕರಣದ ಒಂದು ಪದ್ಧತಿಯಾಗಿತ್ತೆಂದು ಹೇಳಬಹುದು.

ಕನಕಗಿರಿಯು ಕೊಪ್ಪಳ ಜಿಲ್ಲೆಯ ಒಂದು ಪಟ್ಟಣ. ವಿಜಯನಗರ ಅರಸರ ಕಾಲದಲ್ಲಿ ಇದು ಒಂದು ಬಹುದೊಡ್ಡ ಸಾಂಸ್ಕೃತಿಕ ಮತ್ತು ಧಾರ್ಮಿಕ ಕೇಂದ್ರವಾಗಿ ಬೆಳೆದು ಪ್ರಸಿದ್ಧಿಯನ್ನು ಪಡೆದಿತ್ತು ಎಂದು ಹೇಳಲಾಗುತ್ತದೆ. ಈ ಕನಕಗಿರಿಗೆ ಪ್ರಾಚೀನ ಕಾಲದಲ್ಲಿ 'ಸುವರ್ಣಗಿರಿ' ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಗ್ರೀಕ್ ಪ್ರವಾಸಿ ಟಾಲೆಮಿಯ ಕೃತಿಯಲ್ಲಿ ಉಲ್ಲೇಖಗೊಂಡ ಕಲಿಗೇರಿಯಸ್ ಎಂಬ ಸ್ಥಳವು ಇಂದಿನ ಕನಕಗಿರಿಯೇ ಆಗಿರಬೇಕು ಎಂದು ವಿದ್ವಾಂಸರು ಊಹಿಸಿದ್ದಾರೆ. ಈ ಸುವರ್ಣಗಿರಿಯು ಕನಕಗಿರಿ ಹೇಗಾಯಿತು? ಯಾವ ಕಾಲಘಟ್ಟದಲ್ಲಿ ಯಾವ ಕಾರಣಕ್ಕಾಗಿ ಹೆಸರು ಬದಲಾಯಿತು ಎನ್ನುವುದಕ್ಕೆ ಅನೇಕ ಐತಿಹ್ಯ ಮತ್ತು ದಂತಕತೆಗಳು ಹುಟ್ಟಿಕೊಂಡಿವೆ. ಈ ಭಾಗದ ಸಂಶೋಧಕಾರದ ಡಾ. ಡಿ.ಕೆ ಮಾಳೆಯವರು ಹೇಳುವಂತೆ ಕನಕಗಿರಿಯ ಪುಷ್ಪಾ, ಜಯಂತಿ ಮತ್ತು ಗೋಪಿಕಾ(ಗುಪ್ತಗಾಮಿನಿ)ಎಂಬ ನದಿಗಳ ಸಂಗಮ ತೀರದಲ್ಲಿ ಕನಕಮುನಿ ಎಂಬ ಮಹಾಸನ್ಯಾಸಿ ತಪಸ್ಸನ್ನು ಆಚರಿಸಿದನು ಮತ್ತು ಈ ಪ್ರದೇಶದಲ್ಲಿ ಹೊನ್ನಿನ ಮಳೆಯನ್ನೆ ಸುರಿಸಿದನು. ಆ ಕನಕಮುನಿ ಬೇರೆಯಾರು ಅಲ್ಲ ದಾಸ ಶ್ರೇಷ್ಠ ಕನಕದಾಸರೇ ಇರಬೇಕು. ಅವರು ತಿರುಪತಿಗೆ ಹೋಗುವಾಗ ಕನಕಗಿರಿಯಲ್ಲಿ ಸ್ವಲ್ಪಕಾಲ ತಂಗಿದ್ದರು. ಅವರ ಜನಪ್ರಿಯತೆಯಿಂದ ಸುವರ್ಣಗಿರಿಯು ಕನಕಗಿರಿ ಎಂದು ಹೆಸರು ಪಡೆಯಿತೆಂದು ದಂತಕತೆಯನ್ನು ಶ್ರೀ ಮಾಳೆಯವರು ವಿವರಿಸಿದ್ದಾರೆ. ಅವರು ಇದೇ

ವಾದವನ್ನು ಮುಂದುವರೆಸಿ 10ನೇ ಶತಮಾನಕ್ಕಿಂತ ಮೊದಲೇ ಇದು ಕನಕಗಿರಿ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಕನಕಮುನಿಯಿಂದ ಕನಕಗಿರಿಯಾಯಿತೆಂದು ಹೇಳುವುದಕ್ಕೆ ಯಾವುದೇ ಐತಿಹಾಸಿಕ ದಾಖಲೆಗಳಿಲ್ಲ ಎಂದು ತಮ್ಮ 'ಕನಕಗಿರಿಯ ನಾಯಕರು' ಎಂಬ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಆದರೂ ಕನಕಗಿರಿ ಮತ್ತು ಸುವರ್ಣಗಿರಿ ಎರಡೂ ಬಂಗಾರದ ನಿಧಿಗಳು ಆಗಿರುವುದರಿಂದ ಈ ಕನಕಗಿರಿಯು ಬಹಳ ಪ್ರಸಿದ್ಧಿ ಪಡೆದ ಸ್ಥಳವಾಗಿತ್ತು ಎಂಬುದನ್ನು ಇಲ್ಲಿ ಒಪ್ಪಲೇಬೇಕು. ಈ ಜಿಲ್ಲೆಯಲ್ಲಿ ಅಶೋಕನ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಶಾಸನಗಳು, ಅನೇಕ ಜೈನ ಶಾಸನಗಳು ಮತ್ತು ಬಸದಿಗಳು ಲಭ್ಯವಾಗಿರುವುದರಿಂದ ಈ ಪ್ರದೇಶಕ್ಕೆ ಬೌದ್ಧ ಮತ್ತು ಜೈನ ಧರ್ಮದ ಪ್ರಭಾವ ಬೀರಿರಬಹುದು.

ಕನಕಗಿರಿಯ ಇತಿಹಾಸವು ಕ್ರಿ.ಪೂ ಕಾಲದಿಂದಲೂ ತೆರೆದುಕೊಳ್ಳುತ್ತದೆ. ಈ ಪ್ರದೇಶವನ್ನು ಶಿಲಾ ತಾಮ್ರಯುಗದ ಸಂಸ್ಕೃತಿಯ ಕಾಲದಲ್ಲಿ ಇತ್ತೆಂದು ಹೇಳಲಾಗುತ್ತಿದೆ. ಅಂದರೆ ಈ ಶಿಲಾ ತಾಮ್ರಯುಗದ ಕಾಲವು ಕ್ರಿ.ಪೂ 2300 ರಿಂದ 1000ರ ಕಾಲದಲ್ಲಿ ಇತ್ತು. ಈ ಕಾಲ ಘಟ್ಟದಲ್ಲಿ ಶಿಲೆಗಳ ಬದಲಾಗಿ ಲೋಹದ ಆಯುಧಗಳನ್ನು ಬಳಕೆ ಮಾಡುತ್ತಿದ್ದರು. ಸುಟ್ಟ ಮಣ್ಣಿನ ಪಾತ್ರೆ, ಸುಧಾರಿಸಿದ ಬೇಸಾಯ ಪದ್ಧತಿ ಮೊದಲಾದ ಲಕ್ಷಣಗಳು ಈ ಸಂಸ್ಕೃತಿಯ ಮುಖ್ಯ ಲಕ್ಷಣವಾದ್ದವು. ಅಂದರೆ ಈ ಕನಕಗಿರಿಯು ಕ್ರಿ.ಪೂ 2000ಕ್ಕಿಂತಲೂ ಮೊದಲೇ ಇತ್ತೆಂದು ಹೇಳಬಹುದು.

ಕನಕಗಿರಿಯು ಪ್ರಾಚೀನ ಕಾಲದಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದು ಇದೊಂದು ಬಹಳ ಪುಣ್ಯ ಮತ್ತು ಪವಿತ್ರ ಕ್ಷೇತ್ರವಾಗಿತ್ತೆಂದು ಇಲ್ಲಿನ ಇತಿಹಾಸದ ಕುರುಹುಗಳಿಂದ ತಿಳಿದುಬರುತ್ತದೆ. ಇದನ್ನು 'ಎರಡನೇ ತಿರುಪತಿ' ಎಂತಲೂ ಕರೆಯುತ್ತಿದ್ದರಂತೆ. ಈ ಹಿಂದೆ ಬಹಳ ಪ್ರಮುಖವಾಗಿ ಇದು ಮೂರು ನದಿಗಳ ಸಂಗಮವಾಗಿತ್ತು. 701 ಬಾವಿಗಳು, 701 ದೇವಾಲಯಗಳು, 701 ಗೊಲಕಿಗಳು(ಗೊಲ್ಲರ ಗುಡಿಸಲುಗಳು) ಮತ್ತು ಕೋಟೆ-ಕೊತ್ತಲಗಳಿಂದ ಕೂಡಿದ ಬಹಳ ಪ್ರಮುಖ ಸ್ಥಳವಾಗಿತ್ತೆಂದು ಹೇಳಬಹುದು. ಇದರ ಜೊತೆಗೆ ಇಂದು ಸುಮಾರು ಹತ್ತು ಶಾಸನಗಳು ಈ ಕನಕಗಿರಿಯಲ್ಲಿ ಲಭ್ಯವಾಗಿವೆ. ಈ ಎಲ್ಲಾ ಇತಿಹಾಸದ ಕುರುಹುಗಳನ್ನು ಅಧ್ಯಯನ ಮಾಡಿದಾಗ ಇದೊಂದು ಬಹುದೊಡ್ಡ ಸಾಂಸ್ಕೃತಿಕ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ನಾನು ಇಲ್ಲಿ ಕೇವಲ ಶಾಸನಗಳನ್ನು ಮಾತ್ರ ತೆಗೆದುಕೊಂಡು ಕನಕಗಿರಿಯ ಇತಿಹಾಸವನ್ನು ಅದರಲ್ಲಿ ವಿಶೇಷವಾಗಿ ಕನಕಗಿರಿ ನಾಯಕರಿಗೆ ಸಂಬಂಧಿಸಿದ ಐದು ಶಾಸನಗಳು ಕನಕಗಿರಿಯಲ್ಲಿ ಮತ್ತು ಸುತ್ತಲಿನ ಪ್ರದೇಶದ ಗ್ರಾಮಗಳಲ್ಲಿ ಹತ್ತು ಶಾಸನಗಳು, ಹೀಗೆ ಒಟ್ಟು ಹದಿನೈದು ಶಾಸನಗಳು ಲಭ್ಯವಾಗಿವೆ. ಅವುಗಳ ಅಧ್ಯಯನದಿಂದ ಕನಕಗಿರಿಯ ನಾಯಕರ ರಾಜಕೀಯ, ಸಾಮಾಜಿಕ ಮತ್ತು ಅವರ ಸಾಂಸ್ಕೃತಿಕ ವಿಚಾರಗಳು

ಕಟ್ಟಿಕೊಡುವ ಪ್ರಯತ್ನ ಮಾಡಿದ್ದೇನೆ. ಈ ನಾಯಕರಿಗೆ ಸಂಬಂಧಿಸಿದ ಶಾಸನಗಳು ಕ್ರಿ.ಶ 1506ರಿಂದ 1820ರ ಕಾಲದೊಳಗೆ ಕೆತ್ತಿಸಿದವುಗಳಾಗಿವೆ. ಆದರೆ ಕನಕಗಿರಿಯ ನಾಯಕ ವಂಶವು ಪರಸಪ್ಪ ಉಡಿಚಿನಾಯಕ ಕ್ರಿ.ಶ 1436ರಿಂದ ಪ್ರಾರಂಭಗೊಂಡು ಹಿರೇನಾಯಕನ ಕಾಲ ಕ್ರಿ.ಶ 1800ಕ್ಕೆ ಮುಕ್ತಾಯಗೊಳ್ಳುತ್ತದೆ. ಈ ಕಾಲದ ಮಧ್ಯದೊಳಗೆ ಅನೇಕ ನಾಯಕರು ಆಡಳಿತವನ್ನು ನಡೆಸಿದ್ದಾರೆ. ಆದರೆ ನನಗೆ ಲಭ್ಯವಾದ ಶಾಸನಗಳಲ್ಲಿ ಇಮ್ಮಡಿ ಉಡಿಚಿನಾಯಕ, ರಂಗಪ್ಪನಾಯಕ ಮತ್ತು ನರಸಣ್ಣನಾಯಕ ಎಂಬ ಮೂರು ಜನ ನಾಯಕರ ಜೊತೆಗೆ ಇಮ್ಮಡಿ ಉಡಿಚಿನಾಯಕನ ಪತ್ನಿಯರಾದ ಚಿನ್ನಮ್ಮ ಮತ್ತು ಕನಕಮ್ಮಳ ಉಲ್ಲೇಖಗಳು ಕಂಡುಬರುತ್ತವೆ. ಈ ನಾಯಕರಿಗೆ ಸಂಬಂಧಿಸಿದ ಶಾಸನಗಳು ಕೇವಲ ಸಾಮಾಜಿಕ ಕೆಲಸ ಕಾರ್ಯದ ಮತ್ತು ದಾನ ಶಾಸನಗಳಾಗಿರುವುದರಿಂದ ಅವು ಹೆಚ್ಚಿನ ವಿಚಾರಗಳನ್ನು ತಿಳಿಸುವುದಿಲ್ಲ. ಅವುಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ಒಂದೊಂದಾಗಿ ಚರ್ಚಿಸಲಾಗಿದೆ. ಮೊದಲನೆಯದಾಗಿ ಇಮ್ಮಡಿ ಉಡಿಚಿನಾಯಕರಿಗೆ ಸಂಬಂಧಿಸಿದ ಶಾಸನಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇವರು ಕ್ರಿ.ಶ 1618ರಿಂದ 1689ರ ಕಾಲದಲ್ಲಿ ಇವರ ಆಳ್ವಿಕೆ ನಡೆಸಿದ್ದರು. ಕ್ರಿ.ಶ 1674ರ ಕನಕಗಿರಿಯ ಒಂದು ಶಾಸನ ಬಹಳ ಅತ್ಯದ್ಭುತವಾಗಿ ಇಮ್ಮಡಿ ಉಡಿಚಿನಾಯಕನ ವರ್ಣನೆ ಬರುತ್ತದೆ. ಪ್ರಸ್ತುತ ಶಾಸನದಲ್ಲಿ ಕನಕಗಿರಿಯ ಲಕ್ಷ್ಮೀನರಸಿಂಹಸ್ವಾಮಿಯ ಅನುಗ್ರಹದಿಂದ ಸಕಲ ಇತಿಹಾಸ ಪುರಾಣಗಳನ್ನು ಓದಿಸಿ ತಿಳಿದ ವಿಷಯ ಮಥಿಸಿದಾಗ ಈ ದೇವರನ್ನು ನಂಬಿ ಭಜಿಸಿದವರಿಗೆ ಸದ್ಗತಿ ಉಂಟಾಗುತ್ತದೆ ಎಂದು ಹೇಳಿದ ಶಾಸನದಲ್ಲಿ ಇಮ್ಮಡಿ ಉಡಿಚಿನಾಯಕನನ್ನು 'ಶ್ರೀಮಾನ್ ಮಹಾನಾಯಕಾಚಾರ್ಯ ನಾಯಕ ಸಿರೋಮಣಿಗಳಾದ ಕನಕಗಿರಿಯ ಲಕ್ಷ್ಮಾನಾಕತಿ ಇಮ್ಮಡಿ ಉಡಿಚಿನಾಯಕ' ಎಂದು ಆತನನ್ನು ಬಿರುದುಗಳಿಂದ ವರ್ಣನೆ ಮಾಡಿರುವುದು ಬಹಳ ವಿಶೇಷತೆಯಿಂದ ಕೂಡಿದ ಶಾಸನವಾಗಿದೆ. ಇಲ್ಲಿ ಇಮ್ಮಡಿ ಉಡಚಿನಾಯಕನನ್ನು ಮಹಾನಾಯಕಾಚಾರ್ಯ ಎಂದು ಸಂಭೋದಿಸಿದೆ. ಅಂದರೆ ಆಚಾರ್ಯ ಎಂದು ವರ್ಣಿಸಿರುವುದರಿಂದ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಪ್ರಮುಖವಾದ ನಾಯಕನಾಗಿದ್ದರಿಂದಲೇ ಆತನನ್ನು ಶಾಸನಗಳಲ್ಲಿ ಬಿರುದು–ಬಾವಲಿಗಳಿಂದ ವರ್ಣಿಸಿರುವುದು ತಿಳಿದುಬರುತ್ತದೆ. ಇದರಿಂದ ಅವರ ಘನ ವ್ಯಕ್ತಿತ್ವವನ್ನು ತಿಳಿಯಬಹುದಾಗಿದೆ. ಇಮ್ಮಡಿ ಉಡಿಚಿನಾಯಕನನ್ನು ಪ್ರಸ್ತುತ ಶಾಸನದ ಸಾಲುಗಳ ಒಂದು ಭಾಗವನ್ನು ಇಲ್ಲಿ ಗಮನಿಸಬಹುದಾಗಿದೆ.

............................................ ಶ್ರೀ ಮಂನ್ನಾರಾಯಣಸ್ವಾಮಿಯೇ

ಲಕ್ಷ್ಮೀಪತಿಯೆನಿಸಿ ಗುಣತ್ರಯವನ್ನು ಸ್ರಷ್ಟಿ ಸ್ಥಿತಿ ಸಂಹಾರಾರ್ಥವಾಗಿ ಧರಿಸಿದ ರಜೋಗುಣದಿಂದ ಶಿಷ್ಟಕಾರಣಮೂರ್ತಿಯಾದ ಬ್ರಹ್ಮನೇ ಜಗತ್ತಿನ ತಂದೆಯೆ

ನಿಸಿದ ತಮೋಗುಣದಿಂದ ಸಂಹಾರ ಕಾರಣ ಮೂರ್ತಿಯಾದಂಥಾ ಮಹೇಶ್ವರನೆ ಜಗದ್ಗುರುವೆನಿಸಿದ ಸತ್ವಗುಣಗಳಿಂದ ಪರಿಪಾಲನೆಯ ಮಾಡುತ್ತಿದ್ದಂಥಾ ಲಕ್ಷ್ಮಿಪ ತಿಯಾದ ಶ್ರೀ ಮಹಾವಿಷ್ಣುವೇ ಜಗತಿಗೆ ಸ್ವಾಮಿಯನಿಸಿ ಕಡೇಲಿ ಶ್ರೀಮನ್ನಾರಯ ಣಸ್ವಾಮಿಯೇ ಯಿಷ್ಟಕ್ಕು ವಬ್ಬನೆ ಕರ್ತನೆಂದು ನಿಶ್ಚಯಿಸಿದೆವು ಯಿದಕ್ಕೆ ಪ್ರಮಾಣವೇನು

ಯೆಂದಡೆ ಬ್ರಹ್ಮಮೂರ್ತಿ ಪಿತಾಮಹ ಬ್ರಹ್ಮಾಯಂಬ ವಚನ ಪ್ರಮಾಣ ದಿಂದ ಜಗತ್ತಿಗೆ ಬ್ರಹ್ಮದೇವರು ತಂದದೆಯಂತೆ ನಿಶ್ಚಯಿಸಿದೆವು ಜ್ಞಾನಮಿಚ್ಛೇದಾ ತುಯೆಂಬ ವಚನದಿಂದಲೂ ಕಾಶಿಯಲ್ಲಿ ತಾರಕ ಬ್ರಹ್ಮ ವ್ಯಾಜಪೇಯಯೆಂಬ ಪ್ರಮಾಣದಿಂದಲೂ ಶ್ರೀಮಂತ್ರವ ಜಪಿಸಿ ಮಾಡುತ್ತಿಹರಿಂದ ಪರಮೇಶ್ವರ ನು ಜಗತ್ತಿಗೆ ಗುರುವೆಂದು ನಿಶ್ಚಯಿಸಿದೆವು ಮೋಕ್ಷಮಿತಿಚ್ಚಿ ಜನಾರ್ಧನತ್ ನ ದೈವಂ

ಕೇಸವಶ್ಚಕಂ। ನಾಸ್ತಿ ನಾರಾಯಣತ್ಪರಂ। ಯಿತ್ಯಾದಿ ಪ್ರಮಾಣಗಳಿಂದ ಶ್ರೀಮನ್ನಾರಾ ಯಣನೆ ಜಗತ್ತಿಗೆ ಸ್ವಾಮಿಯೆಂದು ನಿಶ್ಚಯಿಸಿದೆವು ಯಿ ಮೂರು ಮೂರ್ತಿಗಳಲ್ಲಿ ಜಗ ತ್ಪತ್ರು ಜಗದ್ಗುರು ಜಗತ್ಸಾಮಿಯೆಂದು ಜ್ಞಾನದ ದ್ರಢವಾಗಿ ನಂಬಿ ಭಜಿಸಿದವರಿಗೆ ಸದ್ಗತಿಯುಂಟು ಯಿ ಪ್ರಕಾರ ನಡೆವಂತಾ ಜನರ .... ವನಿಪ ಗುರು ಮಾತ್ರಪಿತ್ರ ಭಕ್ತಿವುಳ್ಳಂತವರು ಯಿ ಮಾರ್ಗಕ್ಕೆ ವಿರೋಧಿಗಳಾದವರು ನರಕಭಾಜನರಾಗಿ ಪ ವರಿಸಿ ಗುರು ಮಾತ್ರ ಪಿತೃಭಕ್ತಿ ಹೀನರಾಗಿ ಯಂದೆಂದಿಗೂ ಕಡೆಯಾದಂಥಾ ಅಂಧ

ತಮಸ್ಸಿನೊಳಗೆ ಬೀಳುವರು ಯಿಲ್ಲಿ ನೋಡಿದರೂ ಅವರಿಗೆ ಪ್ರಾಯಶ್ಚಿತವಿಲ್ಲವು ...... ಎಂದು ಇಮ್ಮಡಿ ಉಡಿಚಿನಾಯಕನು ಶಾಸನವನ್ನು ಸಾರಿದ್ದಾನೆ. ಅಂದರೆ ಈ ಶಾಸನದಿಂದ ಇಮ್ಮಡಿ ಉಡಿಚಿನಾಯಕನ ಇಡೀ ವ್ಯಕ್ತಿತ್ವವನ್ನೇ ತಿಳಿಯಬಹುದಾಗಿದೆ. ಅವರ ಧರ್ಮಸಹಿಷ್ಣುತೆ ಬ್ರಹ್ಮ, ವಿಷ್ಣು, ಮಹೇಶ್ವರ ತ್ರಿಮೂರ್ತಿಗಳು ಒಬ್ಬರೇ ಎನ್ನುವುದು ಪ್ರಸ್ತುತ ಜಗತ್ತಿನಲ್ಲಿ ಬಹಳ ಮುಖ್ಯವಾಗಿ ಎದ್ದು ಕಾಣುತ್ತದೆ. ಇಂತಹ ಮಾತನ್ನು ಸಾರಿದ ವ್ಯಕ್ತಿಯೇ ಸರ್ವಶ್ರೇಷ್ಠನಾಗಿ ಕಾಣುತ್ತಾನೆ.

ಕ್ರಿ.ಶ. 1662ರ ಹಿರೇಮಾದಿನಾಳ ಶಾಸನದಲ್ಲಿ ನರಭಕ್ಷಕ ಪ್ರಾಣಿಯನ್ನು ಕೊಂದ ವಿಠಲಾಪುರದ ವೀರಪ್ಪನ ಮಗ ಸೋಲಬಾಯನಿಗೆ 12 ಎಕರೆ ಗದ್ದೆಯನ್ನು ಉಡಿಚಿನಾಯಕನು ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಉಡಿಚಿನಾಯಕನು ತಾನು ವೀರನಾಗಿರುವುದರಿಂದ ವೀರತ್ವಕ್ಕೆ ಬೆಲೆ ಕೊಟ್ಟಿದ್ದನು. ವೀರತ್ವದಿಂದ ಹೋರಾಡಿದ ವೀರನನ್ನು ಗೌರವಿಸುತ್ತಿದ್ದನು ಎನ್ನುದಕ್ಕೆ ಈ ಶಾಸನವೇ ಸಾಕ್ಷಿ. ಇತರ ಅರಸರಂತೆ ಉಡಿಚಿನಾಯಕರು ದಾನದಲ್ಲಿ ಎತ್ತಿದ ಕೈ. ಕ್ರಿ.ಶ. 1673ರ ಓಬಳಬಂಡಿ ಶಾಸನದಲ್ಲಿ

ಕೊಕನಕೆ ನಿಜಗುಣ ಪಂಡಿತನಿಗೆ ದಾನ ನೀಡಿದ ವಿವರ ತಿಳಿಯುತ್ತದೆ. ಉಡಿಚಿನಾಯಕನನ್ನು ಪಂಡಿತ–ಪಾಮರರಿಗೆ ಬಹಳ ಗೌರವ ಕೊಡುವ ವ್ಯಕ್ತಿಯಾಗಿದ್ದು ಅವರಿಗೆ ದಾನ–ದತ್ತಿಗಳನ್ನು ನೀಡುತ್ತಿದ್ದನು ಎನ್ನುವದಕ್ಕೆ ಈ ಮೇಲಿನ ಶಾಸನವೇ ಸಾಕ್ಷಿ.

ಇಮ್ಮಡಿ ಉಡಿಚಿನಾಯಕನಿಗೆ ಕನಕಮ್ಮ ಮತ್ತು ಚಿನ್ನಮ್ಮ ಎಂಬ ಇಬ್ಬರು ಪತ್ನಿಯರು ಇದ್ದ ಬಗ್ಗೆ ಶಾಸನದಿಂದ ತಿಳಿದುಬರುತ್ತದೆ. ಇವರು ಸಹ ದಾನದಲ್ಲಿ ಎತ್ತಿದ ಕೈ. ಕ್ರಿ.ಶ. 1666ರ ಬಸ್ರಿಹಾಳ ಶಾಸನದಲ್ಲಿ ಇಮ್ಮಡಿ ಉಡಚಿನಾಯಕನ ಪತ್ನಿ ಕನಕಮ್ಮಳು ಬಾವಿಯನ್ನು ಕಟ್ಟಿಸಿದಂತೆ ತಿಳಿಸುತ್ತದೆ. ಉಡಿಚಿನಾಯಕನ ಮತ್ತೊಬ್ಬ ಪತ್ನಿ ಚಿನ್ನಮ್ಮಳಿಗೆ ಸಂಬಂಧಿಸಿದ ಮೂರು ಶಾಸನಗಳು ಕನಕಗಿರಿಯಲ್ಲಿ ದೊರಕಿವೆ. ಕ್ರಿ.ಶ. 1680ರ ಶಾಸನದಲ್ಲಿ ರಾಣಿ ಚಿನ್ನಮ್ಮ ಬಸವಣ್ಣ ದೇವರ ಗುಡಿಯನ್ನು ಕಟ್ಟಿಸಿದಂತೆ ತಿಳಿಸಿದರೆ. ಕ್ರಿ.ಶ. 1660ರ ಶಾಸನದಲ್ಲಿ ಚಿನ್ನಮ್ಮ ಕನಕರಾಯನ ಕೆರೆಯನ್ನು ಕಟ್ಟಿಸಿದಳೆಂದು ತಿಳಿಸುತ್ತದೆ. ಕ್ರಿ.ಶ. ಅದೇ ರೀತಿಯಾಗಿ 1675ರ ಶಾಸನದಲ್ಲಿ ಚಿನ್ನಮಾಜಿ ಕನಕಗಿರಿನಾಥ ಸ್ವಾಮಿಗೆ ಪೌಳಿಗೆ (ಮೆಟ್ಟಿಲು) ಕಲ್ಲು ಹಾಕಿಸಿದಂತೆ ದಾಖಲಿಸಿದೆ. ಒಟ್ಟಿನಲ್ಲಿ ಇಮ್ಮಡಿ ಉಡಿಚಿನಾಯಕ ಮತ್ತು ಅವರ ಪತ್ನಿಯರಾದ ಕನಕಮ್ಮ ಹಾಗೂ ಚಿನ್ನಮ್ಮ ಎಲ್ಲರೂ ಆಡಳಿದ ಜೊತೆಗೆ ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದು ತಿಳಿದುಬರುತ್ತದೆ. ಈ ಮೂರೂ ಶಾಸನಗಳಲ್ಲಿ ಚಿನ್ನಮ್ಮಳ ಕೇವಲ ಸಾಮಾಜಿಕ ಕಾರ್ಯಗಳಷ್ಟೇ ಅಲ್ಲ, ಅವರ ಧರ್ಮ ಸಹಿಷ್ಣುತೆ ತಿಳಿದುಬರುತ್ತದೆ. ಇಲಿ ಕನಕಮ್ಮಳು ನಾಯಕ ವರ್ಗಕ್ಕೆ ಸೇರಿದ್ದರೂ ಶೈವ ಧರ್ಮದ ಬಸವಣ್ಣ ದೇವಾಲಯವನ್ನು ನಿರ್ಮಿಸಿರುವುದು ಮತ್ತು ವೈಷ್ಣವ ಧರ್ಮದ ಕನಕಗಿರಿನಾಥಸ್ವಾಮಿ ದೇವಾಲಯಕ್ಕೆ ಪೌಳಿಗೆ(ಮೆಟ್ಟಿಲು) ಹಾಕಿಸಿರುವುದರಿಂದ ಅವರ ಧರ್ಮ ಸಂಸ್ಕೃತಿಯನ್ನು ತಿಳಿಯಬಹುದಾಗಿದೆ. ಇವರೂ ಸಹ ತನ್ನ ಪತಿಯಂತೆ ಧರ್ಮ ಸಹಿಷ್ಣುತೆಯಿಂದ ಆಡಳಿತ ನಿರ್ವಹಿಸಿದ್ದಾರೆ. ಅಂದರೆ ಇಲ್ಲಿ ತಾವು ಯಾವುದೇ ಜಾತಿ ವರ್ಗಕ್ಕೆ ಸೇರಿದ್ದರೂ ಇತರ ಎಲ್ಲಾ ಧರ್ಮಗಳನ್ನು ಪ್ರೋತ್ಸಾಹಿಸಿ ಆ ಧರ್ಮಕ್ಕೆ ಆಶ್ರಯ ನೀಡಿರುವುದು ಇಮ್ಮಡಿ ಉಡಿಚಿನಾಯಕ ಕುಟುಂಬದ ಧರ್ಮ ಕಳಕಳಿ ಎದ್ದು ಕಾಣುತ್ತದೆ.

ಪ್ರಮುಖ ನಾಯಕರ ಜೊತೆಗೆ ಇನ್ನು ಸಂಸ್ಥಾನದ ಕೆಲ ನಾಯಕರ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಕ್ರಿ.ಶ 1812ರ ಶಾಸನದಲ್ಲಿ ರಂಗಪ್ಪನಾಯಕನು ದೇವಾಲಯವೊಂದಕ್ಕೆ ಭೂಮಿದಾನ ನೀಡಿದ್ದನ್ನು ತಿಳಿಸುತ್ತದೆ. ಈ ರಂಗಪ್ಪನಾಯಕನು ಹುಲಿಹೈದರ ಸಂಸ್ಥಾನದ ನಾಯಕನಾಗಿದ್ದನು. ಇದೊಂದು ಶಾಸನ ಬಿಟ್ಟರೆ ಉಳಿದಂತೆ ಈತನ ಬಗ್ಗೆ ಯಾವುದೇ ಹೆಚ್ಚಿನ ಐತಿಹಾಸಿಕ ದಾಖಲೆಗಳು ನನಗೆ ಲಭ್ಯವಾಗಿಲ್ಲ. ಕ್ರಿ.ಶ 15ನೇ ಶತಮಾನಕ್ಕೆ ಸೇರಿದ ಚಿಕ್ಕರಾಮಪೂರ ಒಂದು ಶಾಸನದಲ್ಲಿ

ನರಸಣ್ಣನಾಯಕನು ಕಪಿಲೇಶ್ವರ ದೇವರಿಗೆ ಸೇರಿದ 15 ಕೊಳಗ ಗದ್ದೆಯನ್ನು ಮಾನ್ಯವನ್ನು ಮಾಡಿ ಸಮರ್ಪಿಸಿದನೆಂದು ತಿಳಿಸಿದರೆ, ಮತ್ತೊಂದು ಸಾಣಾಪೂರದ ಕಾಲವಿರದ ಶಾಸನದಲ್ಲಿ ನರಸನಾಯಕನ್ನು ಸಿದ್ದ ದೇವರ ಪೂಜೆಗಾಗಿ ಆರು ವರ ದಾನ ಮಾಡಿದನೆಂದು ಉಲ್ಲೇಖಿಸುತ್ತವೆ. ಅಂದರೆ ಇಲ್ಲಿ ಮುಖ್ಯವಾಗಿ ನರಸಣ್ಣನಾಯಕ ಮತ್ತು ನರಸನಾಯಕ ಇಬ್ಬರು ಒಂದೇ ಅಥವಾ ಬೇರೆ ಬೇರೆ ಎಂಬುದು ನನಗೆ ತಿಳಿಯುವುದಿಲ್ಲ ಮತ್ತು ಇಂತಹ ಹೆಸರುಗಳು ಕನಕಗಿರಿ ನಾಯಕರ ಮನೆತನದಲ್ಲಿ ನನಗೆ ದೊರೆತಿರುವುದಿಲ್ಲ. ಕ್ರಿ.ಶ 1531ರ ಆನೆಗುಂದಿಯ ಶಾಸನದಲ್ಲಿ ಆಚ್ಯುತದೇವರಾಯನ ಆಳ್ವಿಕೆಯಲ್ಲಿ ಆನೆಗುಂದಿಯ ಉತ್ತರದ ಬಾಗಿಲ ಬಳಿ ಪ್ರತಿಷ್ಠಾಪಿಸಲಾದ ಬಸವರಾಜ ದೇವರಿಗೆ ಚವರದ ಕೋನಪ್ಪ ನಾಯಕನ ಮಗ ಮಾದ್ಯೆಯಪೆನಗುಂಡೆಯ ನಾಗ್ಯೆಯನ್ನು ನಿತ್ಯ ನೈವೇದ್ಯಕ್ಕಾಗಿ ದಾನ ನೀಡಿ ಅವರಟ್ಟಿಗೆಯನ್ನು ನಿರ್ಮಿಸಿದರೆಂದು ತಿಳಿಸುತ್ತದೆ. ಅದೇ ರೀತಿಯಾಗಿ ಕ್ರಿ.ಶ 1506ರ ಕನ್ನೇರುಮಡು ಗ್ರಾಮದ ಶಾಸನದಲ್ಲಿ ತಿಂತಿಣಿಯ ಗುಜ್ಜಲ ಬೋಮಣನಾಯಕನ ಮಗ ಲಖುಮಣನಾಯಕ ಮತ್ತು ಬೊಮ್ಮನಾಗಿತಿ ಕಲ್ಲುಕೆರೆಯನ್ನು ಕಟ್ಟಿಸಿದರೆಂದು ತಿಳಿಸುತ್ತದೆ. ಈ ಎಲ್ಲಾ ನಾಯಕರ ಕುರಿತು ಇನ್ನಷ್ಟು ಅಧ್ಯಯನ ನಡೆಯಬೇಕಿದೆ. ಕ್ರಿಶ 17ನೇ ಶತಮಾನದ ವೆಂಕಟಗಿರಿ ಶಾಸನದಲ್ಲಿ ಹನುಮಂತ ದೇವರಿಗೆ ನಾಯಕನೊಬ್ಬ ಗದ್ದೆ ದಾನ ನೀಡಿದಂತೆ ತಿಳಿಸುತ್ತದೆ. ಈ ನಾಯಕ ಯಾರು ಎಂಬುದರ ಬಗ್ಗೆ ತಿಳಿದಿಲ್ಲ. ಈ ರೀತಿಯಾಗಿ ಕನಕಗಿರಿ ಮತ್ತು ಸುತ್ತಲಿನ ಪ್ರದೇಶಗಳಲ್ಲಿ ನಾಯಕ ವಂಶಕ್ಕೆ ಸೇರಿದ ಶಾಸನಗಳು, ಅವರ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಚಾರಗಳು ತಿಳಿದುಬರುತ್ತದೆ. ಅವರ ಇತಿಹಾಸದ ಮೇಲೆ ಬೆಳಕು ಚೆಲ್ಲಿ ನಾಡಿನ ಇತಿಹಾಸವನ್ನು ಕಟ್ಟಿಕೊಡುತ್ತವೆ.

### ಆಕರ ಗ್ರಂಥಗಳು :–


1) ಸಂ. ಡಾ. ದೇವರಕೊಂಡಾರಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–2, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ–1999
2) ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ (ಪರೀಷ್ಕೃತ ದ್ವಿತೀಯ ಮುದ್ರಣ), ಮೇಘನಾ ಪ್ರಕಾಶನ, ಕೊಪ್ಪಳ–2020
3) ಡಾ.ಎಂ.ಕೆ.ದುರುಗಪ್ಪ, ಕನಕಗಿರಿ ನಾಯಕರು, ಪವಿತ್ರ ಪಬ್ಲಿಕೇಷನ್ಸ್, ಬೆಂಗಳೂರು–2007


* * * * *

# ಕೊಪ್ಪಳದ ನುಡಿಸೊಗಡು

ಭಾಷೆಯು ಮಾನವನ ದೈನಂದಿನ ವ್ಯವಹಾರಕ್ಕೊಂದು ಸಾಧನ. ಧ್ವನ್ಯಂಗಗಳಿಂದ ಹೊರಬರುವ ನಿರ್ದಿಷ್ಠ ಧ್ವನಿ ಸಂಕೇತಗಳ ವ್ಯವಸ್ಥೆ ಹಾಗೂ ಸಮಾಜದ ವ್ಯವಹಾರ ಸಾಧನವೇ ಭಾಷೆಯಾಗಿದೆ. ಭಾಷೆ ಎನ್ನುವುದು ಒಂದು ಶಬ್ದ ವ್ಯಾಪಾರ ಎಂದರೆ ತಪ್ಪಾಗಲಾರದು. ಭಾಷೆಯು ಕ್ಷಣಾರ್ಧದಲ್ಲಿ ಹುಟ್ಟಿದುದಲ್ಲ. ಮಾನವನ ಸಂಸ್ಕೃತಿ ಬೆಳೆದಂತೆ ಭಾಷೆಯೂ ಬೆಳೆಯುತ್ತಾ ಬಂದಿದೆ. ಹೀಗೆ ಭಾಷೆ ಮತ್ತು ಸಂಸ್ಕೃತಿಗಳು ಮನುಷ್ಯನ ಅವಯವಗಳಂತೆ ಬೆಳೆದು ಬಂದಿವೆ. ಭಾಷೆಯನ್ನು ಒಂದು ಕಟ್ಟಡಕ್ಕೆ ಹೋಲಿಸಬಹುದಾಗಿದೆ. ಕಟ್ಟಡ ಕಟ್ಟಲು ಹೇಗೆ ಒಂದು ವ್ಯವಸ್ಥಿತವಾದ ಯೋಜನಾ ಕ್ರಮವಿರುತ್ತದೆಯೋ ಹಾಗೆಯೇ ಭಾಷೆಯೂ ಒಂದು ನಿರ್ಧಿಷ್ಟ ಅನುಕ್ರಮಣಿಕೆಯನ್ನು ಹೊಂದಿರುತ್ತದೆ. ಇಂತಹ ವಿಶಿಷ್ಟವಾದ ಭಾಷೆಯನ್ನು ಮಾತನಾಡುವ ಕಲೆ ಜಗತ್ತಿನಲ್ಲಿ ಮಾನವನು ಮಾತ್ರ ಮೈಗೂಡಿಸಿಕೊಂಡಿದ್ದಾನೆ. ಈ ಕಾರಣದಿಂದಲೇ ಮನುಷ್ಯನನ್ನು ಪ್ರಾಣಿಗಳಿಂದ ಪ್ರತ್ಯೇಕಿಸಲಾಗಿದೆ. ಅದಕ್ಕೆ ಅವನ ಮೆದುಳಿನಲ್ಲಿರುವ ಬುದ್ಧಿವಂತಿಕೆಯ ಕಾರಣಗಳು ಎನ್ನುವುದು ಬೇರೆ ಸಂಗತಿ. ಆದ್ದರಿಂದಲೇ ಇಂತಹ ಭಾಷೆಯನ್ನು ಮಾನವನು ಮಾತ್ರ ಸೃಷ್ಠಿಸಬಲ್ಲ ಮತ್ತು ಬೆಳಸಿ–ಪೋಷಿಸಬಲ್ಲ ಎಂಬುದು ನಿರ್ವಿವಾದವಾಯಿತು. ಭಾಷೆಯು ಮಾನವನಿಗೆ ದೈವದತ್ತ ಕೊಡುಗೆ ಎಂದು ಋಗ್ವೇದದಲ್ಲಿ ಹೇಳಲಾಗಿದೆ. ಭಾಷೆಯನ್ನು ಮಾನವನು ತನ್ನ ಸ್ವ ಇಚ್ಛಾನುಸಾರ ಇಲ್ಲವೇ ಬದ್ಧತೆ ಇಲ್ಲದೆ ಮಾತನಾಡಿದರೆ ಹಾಸ್ಯಕ್ಕೆ ಅಥವಾ ಅವಮಾನಕ್ಕೆ ಗುರಿಯಾಗುತ್ತಾನೆ. ಭಾಷಾ ಪ್ರಯೋಗವು ಒಂದು ಕಲೆ ಎಂದರೂ ತಪ್ಪಾಗಲಾರದು.

ನುಡಿ ಮನುಷ್ಯ ಸಂಬಂಧಗಳನ್ನು ಗಟ್ಟಿಗೊಳಿಸುತ್ತದೆ. ಒಂದು ವೇಳೆ ಜಗತ್ತಿನಲ್ಲಿ ನುಡಿ ಇರದಿದ್ದರೆ ಹೇಗಿರುತ್ತಿತ್ತು ಎಂಬುದನ್ನು ಊಹಿಸಲೂ ಸಾಧ್ಯವಿಲ್ಲ. ಮನುಷ್ಯ ತನ್ನ ಮನದಾಳದ ಭಾವನೆಗಳನ್ನು ಹಂಚಿಕೊಳ್ಳುವುದಕ್ಕೆ ನುಡಿ ಮುಖ್ಯವಾಗುತ್ತದೆ. ನುಡಿಯು 'ನಾಡಿ'ಯಿಂದ ಬಂದಿರುವುದರಿಂದ ಸಮಗ್ರ ನಾಡಿಗಳ ಆಶಯವೇ ನುಡಿಗಳಾಗಿವೆ. ನುಡಿಯುವ ನುಡಿಗಳು ಸೊಗಸಾಗಿರಬೇಕು. ಮಾತು ಸೊಗಸಾಗಿದ್ದಂತೆ ವ್ಯವಹರಿಸಲು ಹಿತವೆನಿಸುತ್ತದೆ. ಇಡೀ ಮಾನವ ಸಮುದಾಯ ಬಳಸುವ ಮಾತುಗಳು ಒಂದೇ ತೆರನಾಗಿ ಇರುವುದಿಲ್ಲ ಮತ್ತು ಆಗಿರಲು ಸಾಧ್ಯವೂ ಇಲ್ಲ. ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತಕ್ಕೆ ವ್ಯತ್ಯಾಸಗಳನ್ನು ಕಾಣುತ್ತೇವೆ. ಇದನ್ನು 'ಪ್ರಾಂತಬೇಧ' (ಪ್ರಬೇಧ) ಎಂದು ಕರೆಯುತ್ತಾರೆ. ಒಂದು ಭಾಷಾ ಶೈಲಿಯು ಒಂದು ಪ್ರಾಂತಕ್ಕೆ ಏನೇ ಸೊಗಸಾಗಿ ಕಂಡರೂ ಅದು ಮತ್ತೊಂದು ಪ್ರಾಂತಕ್ಕೆ ಆ ಭಾಷೆ ವಿಶಿಷ್ಟ ಎನಿಸುತ್ತದೆ. ಒಂದು

ಅಂದಾಜಿನ ಪ್ರಕಾರ ಪ್ರತಿ 25 ಕಿ.ಮೀ. ಗೆ ಭಾಷಾ ವ್ಯತ್ಯಾಸಗಳನ್ನು ಕಾಣಬಹುದು. ಅದೇನೆ ಇದ್ದರೂ ಒಂದು ಪ್ರದೇಶದ ನುಡಿ–ಸೊಗಡು ಆ ಪ್ರದೇಶದ ಸಂಸ್ಕೃತಿಯನ್ನು ಅನಾವರಣ ಮಾಡುತ್ತದೆ ಎಂಬುದನ್ನು ಒಪ್ಪಲೇಬೇಕು. ಇದಕ್ಕೆ ಕೊಪ್ಪಳದ 'ನುಡಿಸೊಗಡು' ಹೊರತಾಗಿಲ್ಲ.

ಪ್ರಾಚೀನ ಕಾಲದಲ್ಲಿ ಕನ್ನಡನಾಡು "ಕಾವೇರಿಯಿಂದ ಮಾ ಗೋದಾವರಿವರವಿರ್ದ ನಾಡದಾ ಕನ್ನಡದೊಳ್" ಎಂದು ವರ್ಣಿಸಿರುವುದನ್ನು ಗಮನಿಸಿದರೆ ಇಂದಿನ ದಕ್ಷಿಣ ಭಾರತವೇ ಕನ್ನಡನಾಡಾಗಿತ್ತು ಎನ್ನಬಹುದು. ಈ ವ್ಯಾಪ್ತಿಯನ್ನು ಹಿರಿಯ ಸಂಶೋಧಕರು ಕಾವೇರಿಯಿಂದ ನರ್ಮದಾ ನದಿಯವರೆಗೂ ವಿಸ್ತರಿಸಿರುವುದನ್ನು ಗಮನಿಸಿದರೆ; ಉತ್ತರ ಭಾರತದವರೆಗೂ ಕನ್ನಡ ನಾಡಿನ ವ್ಯಾಪ್ತಿ ಬಿಚ್ಚಿಕೊಳ್ಳುತ್ತದೆ. ಈ ಅಖಂಡ ಕನ್ನಡ ನಾಡೊಳಗೆ ತಿರುಳ್ಗನ್ನಡ ನಾಡೂ ಒಂದಾಗಿತ್ತು. ಪುಲಿಗೆರೆ (ಲಕ್ಷ್ಮೇಶ್ವರ), ಕಿಸುವೊಳಲು (ಪಟ್ಟದಕಲ್ಲು), ವಕ್ಕುಂದ (ಬೆಳಗಾಂವ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಗ್ರಾಮ) ಇವುಗಳ ನಡುವಿನ ನಾಡೇ ತಿರುಳ್ಗನ್ನಡ ನಾಡು ಎಂದು ಇತಿಹಾಸದಿಂದ ತಿಳಿದುಬರುತ್ತದೆ. ಇಲ್ಲಿನ ಜನ 'ಸಾಧುಂಗೆ ಸಾಧು ಮಾಧುರ್ಯಂಗೆ ಮಾಧುರ್ಯಂ' ಆಗಿದ್ದರು; ಸುಭಟಗಲ್, ಸುಪ್ರಭುಗಳ್, ಸುಕವಿಗಳ್ ಆಗಿರುವುದಲ್ಲದೆ 'ಕುರಿತೋದದಯೇ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಆಗಿದ್ದರು ಎನ್ನುವುದಕ್ಕೆ ಇಲ್ಲಿನ ಉಕ್ತಿಗಳೇ ಸಾಕ್ಷಿ. ಪ್ರಾಚೀನ ಕಾಲದಲ್ಲಿ ಇಂತಹ ನಾಡೊಳಗೆ 'ಕೊಪಣಾಚಲ'ವೂ ಒಂದು ಪ್ರಸಿದ್ಧ ಪ್ರದೇಶವಾಗಿ ಅನೇಕ ವಿಭಾಗ, ಗ್ರಾಮಗಳನ್ನು ತನ್ನ ಗರ್ಭದೊಳಗೆ ಇಟ್ಟುಕೊಂಡು ಮೆರೆದಿರುವುದು ಒಂದು ಇತಿಹಾಸ. ಈ ಪ್ರದೇಶದ ಭಾಷಾ ವೈಶಿಷ್ಟತೆಯೂ ಒಂದು ವಿಶೇಷ ಎನ್ನಬಹುದು.

ಕೊಪ್ಪಳ ಪ್ರದೇಶದ ನುಡಿ ಸೊಗಡನ್ನು ಕುರಿತು ವಿವರಿಸಬೇಕೆಂದರೆ; ಅದು ಇತರ ಪ್ರದೇಶಗಳಿಗಿಂತಲೂ ಬಹಳ ವಿಶಿಷ್ಟವಾಗಿತ್ತು ಎಂದು ಹೇಳಬಹುದು. ಇಲ್ಲಿನ ಭಾಷೆಯನ್ನು ಅಧ್ಯಯನ ಮಾಡಿದಾಗ ಅನೇಕ ವೈಶಿಷ್ಟ್ಯತೆಗಳು ಕಂಡುಬರುತ್ತವೆ. ವಿಶಿಷ್ಟ ಶಬ್ದಪ್ರಯೋಗ, ವಾಕ್ಯ ರಚನೆ, ಪಲ್ಲಟಗಳು ಇಂತಹ ಅನೇಕ ವೈಶಿಷ್ಟತೆಗಳು ಇಲ್ಲಿನ ಭಾಷೆಯ ಸೊಗಡನ್ನು ಅನಾವರಣ ಮಾಡುತ್ತವೆ. ಅವುಗಳಲ್ಲಿ ಮಹತ್ವದ ಕೆಲ ಸಂಗತಿಗಳನ್ನು ಮಾತ್ರ ಇಲ್ಲಿ ನೋಡಲಾಗಿದೆ.

**ಮಹಾಪ್ರಾಣಗಳ ಬಳಕೆಯಿಲ್ಲ:–** ಜಿಲ್ಲೆಯಲ್ಲಿ ಮಾತನಾಡುವ ಭಾಷೆಯಲ್ಲಿ ಬಹಳ ಪ್ರಮುಖವಾಗಿ ಮಹಾಪ್ರಾಣಗಳು ಕಂಡುಬರುವುದಿಲ್ಲ. 'ಗಟ್ಟಿ', 'ಕತೆ', 'ಗಂಟೆ', 'ಪಲ', 'ಅಗಾತ' ಎಂಬ ಹತ್ತಾರು ಅಚ್ಚುಗನ್ನಡ ಶಬ್ಧಗಳು ಬಳಕೆಯಾಗುತ್ತಿವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಮಹಾಪ್ರಾಣಗಳು ಸಂಸ್ಕೃತ ಭಾಷೆಯಿಂದ ಬಂದ ಅಕ್ಷರಗಳಾಗಿರುವುದು. ಹೀಗಾಗಿಯೇ ಈ ಭಾಗದಲ್ಲಿ ಶುದ್ಧಗನ್ನಡ ಭಾಷೆ

ಬಳಕೆಯಿರುವುದು ಬಹಳ ವಿಶೇಷ ಎಂದು ಹೇಳಬಹುದು. ಅಂದರೆ ಈ ಭಾಗದ ಜನರ ಭಾಷೆಯಲ್ಲಿ ಅಚ್ಚುಗನ್ನಡ ಶಬ್ದಗಳ ಪ್ರಯೋಗ ಹೆಚ್ಚಾಗಿ ಕಂಡುಬರುತ್ತದೆ.

**ಆಡು ನುಡಿಗಳ ಬಳಕೆ:–** ಇಲ್ಲಿ ಶಿಷ್ಟ ಅಥವಾ ಆಡಳಿತ ಬಾಷೆ ಬಳಕೆಯಾಗುವುದಿಲ್ಲ. ಬಂದ್ರು, ಹೋದ್ರು, ಬರ್‍ತಾನ, ಹೇಳ್ತಾನ, ಕೇಳ್ತಾನ, ನೋಡ್ತಾನ ಎಂಬ ಹಲವಾರು ಶಬ್ಧಗಳ ಪ್ರಯೋಗಗಳು ಕಂಡು ಬರುತ್ತವೆ. ಇಂತಹ ಜನಪದ ಸೊಗಡಿನ ಶಬ್ಧಗಳ ಬಳಕೆಯೇ ಹೆಚ್ಚು. ಈ ಪ್ರಯೋಗಗಳು ಕೇಳುಗರಿಗೆ ಹಿತವೆನಿಸುತ್ತವೆ. ಈ ಶಬ್ದಗಳು ಕರಳು ಬಳ್ಳಿಗೆ ಕೈ ಹಾಕಿ ಸಂಬಂಧವನ್ನು ಬೆಸೆಯುವಲ್ಲಿ ಸಹಕಾರಿಯಾಗುತ್ತವೆ. ಈ ನುಡಿಗಳು ಹೆಚ್ಚು ಹೆಚ್ಚು ಆಡಿದಷ್ಟೂ ಸವಿಯನ್ನು ಹೆಚ್ಚಿಸುತ್ತಾ ಹೋಗುತ್ತವೆ. ಇವುಗಳಲ್ಲಿ ಯಾವುದೇ ಮೇಲುಸೋಗು ಕಂಡುಬರುವುದಿಲ್ಲ.

**ಪಲ್ಲಟಗಳು:–** ಬದಲಾವಣೆ ಎನ್ನುವುದು ಮನುಷ್ಯನ ಸಹಜ ಗುಣಗಳಲ್ಲಿ ಒಂದು. ಅದರಂತೆ ಭಾಷೆ ಬಳಕೆಯಲ್ಲಿಯೂ ಕೆಲ ಅಲ್ಪ–ಸ್ವಲ್ಪ ಬದಲಾವಣೆಗಳನ್ನು ಮಾಡಿ ಬಳಸುತ್ತಾನೆ. ಅಂತಹ ಪ್ರಯೋಗಗಳು ಜಿಲ್ಲೆಯಲ್ಲಿ ಕಂಡುಬರುತ್ತವೆ. ಜಿಲ್ಲೆಯಲ್ಲಿ ಮುಖ್ಯವಾಗಿ ಮೂರು ರೀತಿಯಲ್ಲಿ ಪಲ್ಲಟಗಳು ಕಂಡುಬರುತ್ತವೆ. ಅಕ್ಷರ ಪಲ್ಲಟ, ಶಬ್ಧ ಪಲ್ಲಟ ಮತ್ತು ಅರ್ಥ ಪಲ್ಲಟ ಎಂಬ ಮೂರು ರೀತಿಯಲ್ಲಿ ಬಳಕೆಯಾಗುತ್ತವೆ. ಅವುಗಳನ್ನು ಈ ರೀತಿಯಾಗಿ ವಿವರಿಸುತ್ತಾ ಹೋಗಬಹುದು.

**ಅಕ್ಷರ ಪಲ್ಲಟ:–** ಅಕ್ಷರ ಪಲ್ಲಟಗಳು ಜಿಲ್ಲೆಯಲ್ಲಿ ಹೆಚ್ಚು ಹೆಚ್ಚು ಕಂಡು ಬರುತ್ತವೆ. ಕಾಗದ>ಕಾದಗ ('ಗ' ಮತ್ತು 'ಕ' ಕಾರಗಳು ಪರಸ್ಪರ ಪಲ್ಲಟಗಳು), ನಿಲುಕು>ನಿಕುಲು ('ಲ' ಮತ್ತು 'ಕ' ಕಾರಗಳು ಪಲ್ಲಟಗೊಳ್ಳುತ್ತವೆ) ಉಪಟಳ>ಉಪಳಾಟ (ಕಿರಿಕಿರಿ) ('ಳ' ಮತ್ತು 'ಟ' ಕಾರಗಳು ಪಲ್ಲಟಗೊಂಡಿವೆ). ಎಲುಬು>ಎಬುಲು ('ಲ' ಮತ್ತು 'ಬ' ಕಾರಗಳು ಪಲ್ಲಟಗೊಂಡಿವೆ) ಇಂತಹ ಪಲ್ಲಟಗೊಂಡ ಅನೇಕ ಇಂತಹ ಶಬ್ದಗಳು ಈ ಪ್ರದೇಶದ ಜನರ ಭಾಷೆಯಲ್ಲಿ ದೊರೆಯುತ್ತವೆ. ಆದರೆ ಅಕ್ಷರಗಳು ಪಲ್ಲಟಗೊಂಡರೂ ಅರ್ಥ ಕೆಡದಿರುವುದು ಅವುಗಳ ವಿಶೇಷ ಎನ್ನಬಹುದು.

**ಶಬ್ಧ ಪಲ್ಲಟ:–** ಕೇವಲ ಅಕ್ಷರ ಪಲ್ಲಟಗಳಷ್ಟೇ ಅಲ್ಲ; ಕೆಲ ಸಂದರ್ಭಗಳಲ್ಲಿ ಶಬ್ಧಗಳ ಪಲ್ಲಟಗಳೂ ಕಂಡುಬರುತ್ತಿವೆ. ಸಾಮಾನ್ಯವಾಗಿ **'ರಾಮನು ಶಾಲೆಗೆ ಹೋದನು'** ಎಂಬ ಕರ್ತೃ, ಕರ್ಮ, ಕ್ರಿಯಾ ಪದಗಳ ಅನುಕ್ರಮಣಿಕೆಯನ್ನು ಬಳಸುತ್ತಾರೆ. ಆದರೆ ಜಿಲ್ಲೆಯಲ್ಲಿ ಈ ರೀತಿಯ ಬಳಕೆಗೆ ಯಾವುದೇ ರೀತಿಯ ನಿರ್ಬಂಧಗಳಿಲ್ಲ. ಶಾಲೆಗೆ ರಾಮನು ಹೋದನು ಎಂಬ ಪಲ್ಲಟಗೊಂಡ ವಾಕ್ಯ ಬಳಕೆಯಾಗುತ್ತಿದೆ. ಆದರೂ ಅವುಗಳ ಅರ್ಥಕ್ಕೆ ಯಾವುದೇ ಭಂಗ ಬರುವುದಿಲ್ಲ.

**ಅರ್ಥ ಪಲ್ಲಟ:–** ಇಲ್ಲಿ ಕೆಲ ಶಬ್ಧಗಳ ಅರ್ಥಗಳನ್ನು ಪಲ್ಲಟ ಮಾಡಿಕೊಂಡು ಬಳಸಲಾಗುತ್ತದೆ. ಇಲ್ಲಿ ಬಳಕೆಯಾಗುವ ಕೆಲ ಶಬ್ಧಗಳು ಬೇರೆ ಬೇರೆ ಪ್ರಾಂತಗಳಲ್ಲಿ

ಬೇರೆ ಅರ್ಥಗಳನ್ನು ಕೊಡುತ್ತದೆ. ಅದೇ ರೀತಿಯಾಗಿ ಬೇರೆ ಪ್ರಾಂತಗಳಲ್ಲಿ ಬಳಕೆಯಾಗುವ ಶಬ್ಧಗಳು ಇಲ್ಲಿ ಬೇರೆ ಅರ್ಥವನ್ನು ಕೊಡುತ್ತವೆ. ಇಲ್ಲಿನ 'ತೊಳೆ' ಎನ್ನುವ ಶಬ್ಧಕ್ಕೆ ಬೇರೆ ಪ್ರಾಂತದಲ್ಲಿ 'ಬೆಳಗು' ಎನ್ನುತ್ತಾರೆ. ಆದರೆ 'ಬೆಳಗು' ಎನ್ನುವ ಶಬ್ಧಕ್ಕೆ ಇಲ್ಲಿ ಮುಂಜಾವು, ಸ್ವಚ್ಚಗೊಳಿಸು ಇಲ್ಲವೇ ಆರತಿ ಬೆಳಗು ಎಂಬ ಅರ್ಥಕ್ಕೆ ಸಂವಾದಿಯಾಗಿ ಬಳಸುತ್ತಾರೆ. 'ನಿಧಾನ' ಎಂಬ ಶಬ್ಧಕ್ಕೆ ಬೇರೆ ಪ್ರಾಂತದಲ್ಲಿ 'ಅಳ್ಳು' ಎಂದು ಬಳಸಿದರೆ; ಇಲ್ಲಿ 'ಅಳ್ಳು' ಎಂಬ ಶಬ್ಧಕ್ಕೆ ಮಂಡಕ್ಕಿ (ಮಂಡಾಳು, ಮೆಕ್ಕೆಜೋಳದಿಂದ ಉರಿದ ಅಳ್ಳು) ಎಂದು ಬಳಸುತ್ತಾರೆ. ಬೇರೆ ಪ್ರಾಂತದಲ್ಲಿನ 'ಹೊಂಟೈತಿ' ಎನ್ನುವ ಶಬ್ಧವನ್ನು 'ಬರುತ್ತಿದೆ' ಎಂಬ ಅರ್ಥಕ್ಕೆ ಬಳಸಿದರೆ ಇಲ್ಲಿ 'ಹೋಗುತ್ತಿದೆ' ಎಂಬ ಅರ್ಥವನ್ನು ಬಳಸುತ್ತಾರೆ. ಅದೇ ರೀತಿಯಾಗಿ 'ಬೆದರು' ಎನ್ನುವ ಶಬ್ಧವನ್ನು ಹೆದರಿಕೊಳ್ಳು ಎಂಬ ಅರ್ಥಕ್ಕೆ ಬೇರೆ ಪ್ರಾಂತದಲ್ಲಿ ಬಳಸಿದರೆ; ಇಲ್ಲಿ 'ಬೆದರು' ಎನ್ನುವ ಶಬ್ಧವನ್ನು ಬಯ್ಯುವಾಗ ಅಶ್ಲೀಲ ಶಬ್ಧವಾಗಿ ಬಳಸುತ್ತಾರೆ. ಹೀಗೆ ಹಲವಾರು ಶಬ್ಧಗಳ ಅರ್ಥಗಳನ್ನು ಬೇರೆ ಮಾಡಿಕೊಂಡು ಬಳಸುತ್ತಿರುವುದು ಇಲ್ಲಿನ ವಿಶೇಷವಾಗಿದೆ.

**ಅಕ್ಷರಲೋಪ:–** ಜಿಲ್ಲೆಯ ಭಾಷೆ ಬಳಕೆಯಲ್ಲಿ ಅನೇಕ ಶಬ್ಧಗಳಲ್ಲಿ ಅಕ್ಷರಗಳನ್ನು ಲೋಪಮಾಡಿ ಮಾತನಾಡುವುದು ಕಂಡು ಬರುತ್ತದೆ. ಉದಾ:– ಕರಳು>ಕಳ್ಳು, ಬೆರಳು>ಬೆಳ್ಳು (ಬಳ್ಳು), ಮರಳು>ಮಳ್ಳು, ಬಂದಿತು>ಬಂತು, ಹೋಯಿತು>ಹೋತು, ಬಂದನು>ಬಂದ, ಬೇವಿನಗಿಡ>ಬೇನೆಗಿಡ, ಮಾವಿನಗಿಡ>ಮಾನೆಗಿಡ ಇತ್ಯಾದಿ ಇಂತಹ ಹತ್ತಾರು ಶಬ್ಧಗಳಲ್ಲಿ ಅಕ್ಷರಗಳ ಲೋಪ ಕಂಡುಬರುತ್ತವೆ. ಇಲ್ಲಿ ಅಕ್ಷರಗಳ ಲೋಪ ಮಾಡಿ ಬಳಸಿದರೂ ಅರ್ಥ ಯಥಾವತ್ತಾಗಿ ಬರುವುದು ಆ ಶಬ್ಧಗಳ ವಿಶೇಷತೆ ಎನ್ನಬಹುದು.

**ಅಕ್ಷರಗಳ ಬದಲಾವಣೆ:–** ಜಿಲ್ಲೆಯಲ್ಲಿ ಬಳಕೆಯಾಗುವ ಶಬ್ಧಗಳಲ್ಲಿ ಅಕ್ಷರಗಳ ಲೋಪಗಳಷ್ಟೆ ಅಲ್ಲ; ಕೆಲ ಅಕ್ಷರಗಳನ್ನು ಬದಲಾವಣೆ ಮಾಡಿ ಬಳಸುತ್ತಾರೆ. ಚಳಿ>ಸಳಿ, ಮೊಣಕೈ>ಮೊಳಕೈ, ಚಳ್ಳು>ಸೆಳ್ಳು (ಬಾರಿಗೆ), ಮೈತೊಳೆ>ಮೈದೊಳೆ, ಆಸೆ>ಆಶೆ, ವಿಸ್ತಾರ>ಬಿತ್ತರ ಇಂತಹ ಇನ್ನೂ ಅನೇಕ ಶಬ್ಧಗಳಲ್ಲಿ ಅಕ್ಷರಗಳನ್ನು ಬದಲಾವಣೆ ಮಾಡಿಕೊಂಡು ಬಳಸುತ್ತಾರೆ.

**ಲಿಂಗ ಬಳಕೆ ಇಲ್ಲ:–** ಭಾಷೆಯಲ್ಲಿ ಲಿಂಗಗಳ ಬಳಕೆ ಬಹಳ ಮುಖ್ಯವಾಗಿ ಬೇಕಾಗುತ್ತದೆ. ಲಿಂಗಗಳ ಬಳಕೆಯಿಲ್ಲದೆ ಮಾತನಾಡಿದರೆ ಆಭಾಸವಾಗುತ್ತದೆ. ಆದರೆ ಜಿಲ್ಲೆಯಲ್ಲಿ ಕೆಲ ಭಾಗಗಳಲ್ಲಿ ಲಿಂಗಗಳ ಬಳಕೆಯಿರದ ವಾಕ್ಯಗಳ ಪ್ರಯೋಗಗಳು ಕಂಡುಬರುತ್ತಿವೆ. ಅಜ್ಜಿ ಬಂತು, ಅಜ್ಜಿ ಹೋತು, ಅಪ್ಪ ಬಂತು, ಅಮ್ಮ ಬಂತು, ತಾತ ಬಂತು ಎಂಬ ನಪುಂಸಕ ವಾಕ್ಯಗಳನ್ನು ಬಳಸುತ್ತಾರೆ. ಇಲ್ಲಿ ವ್ಯಕ್ತಿಗಳಿಗೆ ಅಗೌರವ

ಸೂಚಕವಾಗಿ ಬಳಸಲಾಗುತ್ತದೆ ಎಂದಲ್ಲ. ಅದು ಇಲ್ಲಿನ ಭಾಷೆಯ ಸೊಗಡೇ ಈ ರೀತಿಯಾಗಿದೆ ಎಂದು ತಿಳಿಯಬೇಕಾಗುತ್ತದೆ.

**ವಿಶಿಷ್ಟ ಪದಗಳ ಬಳಕೆ:–** ಇಲ್ಲಿ ಕೆಲ ವಿಶಿಷ್ಟವಾದ ಶಬ್ದಗಳನ್ನು ಬಳಸುತ್ತಾರೆ. ಆದರೆ ಈ ಶಬ್ದಗಳು ಬೇರೆಕಡೆ ಕಂಡು ಬರುವುದು ಬಹಳ ಅಪರೂಪ ಎಂದು ಹೇಳಬಹುದು. **'**ದ್ಯಾಸ**'** ಎಂಬ ಶಬ್ಧಕ್ಕೆ ನೆನಪು ಎಂಬ ಅರ್ಥದಲ್ಲಿ ಬಳಸುತ್ತಾರೆ. **'**ದ್ಯಾಸ**'** ಎಂಬ ಶಬ್ಧವು **'**ಧ್ಯಾನ**'** ಎಂಬ ಪದಕ್ಕೆ ಹತ್ತಿರವಿರುವುದರಿಂದ ಒಂದು ವಿಷಯ ಅಥವಾ ವ್ಯಕ್ತಿಯ ಬಗ್ಗೆ ಸದಾ ಧ್ಯಾನದಲ್ಲಿ (ನೆನಪಲ್ಲಿ) ಇರುವುದು. **'**ಧ್ಯಾನ**'** ಎಂಬ ಶಬ್ಧಕ್ಕಿರುವ ಬಹುದೊಡ್ಡ ಆರ್ಥವನ್ನು ಇಲ್ಲಿ ಮನಗಾಣಬೇಕಾಗುತ್ತದೆ. ರಕ್ತ ಸಂಬಂಧದ ಸೂಚಕವನ್ನು ಕುರಿತು ಮಾತನಾಡುವಾಗ **'ಕಳ್ಳು–ಬಳ್ಳಿ'** ಎಂಬ ಶಬ್ಧವನ್ನು ಬಳಸುತ್ತಾರೆ. ಕರಳು ಅಥವಾ ಬಳ್ಳಿಯ ಒಂದು ಭಾಗ ಹಿಡಿದುಕೊಂಡರೆ ಅದರ ಇಡಿ ಭಾಗವೇ ಅಂಟಿಕೊಂಡಿದ್ದು ತಿಳಿಯುತ್ತದೆ. ಅದರಂತೆ ರಕ್ತಸಂಬಂಧವೂ ಒಂದಕ್ಕೊಂದರಂತೆ ಅಂಟಿಕೊಂಡಿರುತ್ತದೆ. ಅದಕ್ಕಾಗಿಯೇ ಇಂತಹ ಅರ್ಥಪೂರ್ಣವಾದ ಶಬ್ಧವನ್ನು ಬಳಸುತ್ತಿದ್ದಾರೆ. ಒಂದು ಕ್ಲಿಷ್ಟ ಮತ್ತು ಸೂಕ್ಷ್ಮ ವಿಚಾರ ಹೇಳುವಾಗ **'ಸೊನ್ನಿ ಸೂಕ್ಷ್ಮಿ'** ಎಂಬ ಪದ ಬಳಸುತ್ತಾರೆ. ಇಲ್ಲಿ ಬಹಳ ಜಾಣ್ಮೆಯಿಂದ ಈ ಪದ ಬಳಸಿರುವುದು ಕಂಡು ಬರುತ್ತದೆ **"0"** (ಸೊನ್ನೆ) ಎಂದರೆ ಏನೂ ಇಲ್ಲದಂತೆ ಬಹಳ ಜಾಣ್ಮೆಯಿಂದ ಕೆಲಸ ನಿರ್ವಹಿಸಬೇಕೆಂಬುದು ಇದರ ತಾತ್ಪರ್ಯವಾಗಿದೆ. ಇಂತಹ ಅನೇಕ ವಿಶಿಷ್ಟ ಪದಗಳು ಜಿಲ್ಲೆಯಲ್ಲಿ ಬಳಕೆಯಲ್ಲಿವೆ. ಇಂತಹ ವಿಶಿಷ್ಟ ಶಬ್ಧಗಳ ಬಳಕೆ ಬೇರೆ ಪ್ರಾಂತಗಳಲ್ಲಿ ಕಾಣಲು ಸಾಧ್ಯವಿಲ್ಲ. ಅವುಗಳ ಜೊತೆಗೆ ಸಮಮಾಡು>ಸಾಪು(ಪ) ಕೆಲಸ>ದಗದ, ಪ್ರಜ್ಞೆ>ಕಬುರು ಇಂತಹ ಅನೇಕ ಶಬ್ದಗಳನ್ನು ಸಾಮಾನ್ಯವಾಗಿ ಬಳಸಲಾಗುತ್ತದೆ.

**ಸಾಮ್ಯತೆ ಶಬ್ಧಗಳು:–** ಬಳಕೆಯಲ್ಲಿ ಕೆಲ ಶಬ್ಧಗಳ ಸಾಮ್ಯತೆ ಕಂಡುಬರುತ್ತದೆ. ಶಬ್ಧಗಳಲ್ಲಿ ಸಾಮ್ಯತೆ ಇದ್ದರೂ ಸಹ ಅವುಗಳಿಂದ ಬರುವ ಅರ್ಥವು ಬೇರೆ ಬೇರೆಯಾಗಿರುತ್ತದೆ. ಉದಾ:– ಗಳಿಗೆ>ಸಮಯ, ಗುಳೆವು>ಸಂಸಾರ, ಗಳೆವು>ಎತ್ತುಗಳಿಂದ ಮಾಡುವ ಕೃಷಿ ಚಟುವಟಿಕೆ (ಉಳುಮೆ) ಇಂತಹ ಶಬ್ಧಗಳು ಅಲ್ಪಸ್ವಲ್ಪ ಬದಲಾವಣೆಯಿಂದ ಕೂಡಿವೆ. ಆದರೆ ಅವುಗಳ ಅರ್ಥ ಬಹಳ ಭಿನ್ನವಾಗಿವೆ. ಇಂತಹ ಅನೇಕ ಶಬ್ಧಗಳು ಜಿಲ್ಲೆಯಲ್ಲಿ ಬಳಕೆಯಲ್ಲಿವೆ.

**'ಹ' ಕಾರದ ಬದಲು 'ಅ' ಇಲ್ಲವೇ 'ಆ' ಕಾರ ಬಳಕೆ:–** ಕೊಪ್ಪಳ ಪ್ರದೇಶದಲ್ಲಿ 'ಹ' ಕಾರ ಬದಲಾಗಿ 'ಅ' ಅಥವಾ 'ಆ' ಕಾರ ಸಾಮಾನ್ಯವಾಗಿ ಬಳಸಲಾಗುತ್ತದೆ. ಹಾಡು>ಆಡು, ಹಾಲು>ಆಲು, ಹಣ್ಣು>ಅಣ್ಣು, ಹತ್ತಿರ>ಅತ್ರ ಮುಂತಾದ ಶಬ್ದಗಳ ಪ್ರಯೋಗ ಕಂಡುಬರುತ್ತದೆ.

**ಅಂಗ ಪ್ರತ್ಯಯಗಳ ಬಳಕೆ:–** ಈ ಪ್ರದೇಶದ ಬಹಳ ವಿಶಿಷ್ಟವಾದ ಭಾಷೆ ಬಳಕೆಯಲ್ಲಿ **"**ಅಂಗ**"** ಪ್ರತ್ಯಯವನ್ನು ಬಳಸಲಾಗುತ್ತಿದೆ. ಉದಾಹರಣೆಯಾಗಿ ಹೋಗಂಗೆ, ಬಾರಂಗೆ, ನಿಂದ್ರಂಗೆ, ಕುಂದ್ರಂಗೆ, ಕೇಳಂಗೆ, ಹೇಳಂಗೆ ಮುಂತಾದ ಪದ ಪ್ರಯೋಗಗಳು ಕಂಡುಬರುತ್ತವೆ. ಇಂತಹ ಅಂಗ ಪ್ರತ್ಯಯಗಳ ಶಬ್ಧಗಳು ಬೇರೆ ಪ್ರದೇಶದಲ್ಲಿ ಕಂಡುಬರುವುದಿಲ್ಲ.

**ಬೈಗುಳ ಶಬ್ಧಗಳು:–** ಸೊಗಸಾಗಿ ಮಾತನಾಡುವುದಷ್ಟೆ ಅಲ್ಲ ಬಹಳ ಚೆನ್ನಾಗಿ ಬೈಯುವುದೂ ಒಂದು ಕಲೆ. ಈ ಬೈಯುವ ಕಲೆ ಎಲ್ಲರಿಗೂ ತಿಳಿದಿರುವುದಿಲ್ಲ. ಅದರಲ್ಲಿ ಕೆಲವರು ಮಾತ್ರ ಕೆಲವು ಅರ್ಥ ಪೂರ್ಣವಾದ ಬೈಗುಳಗಳನ್ನು ಬಳಸಿ ಸಮಧಾನ ಪಟ್ಟುಕೊಳ್ಳುತ್ತಾರೆ. ಅಂತಹ ಅರ್ಥಪೂರ್ಣ ಬೈಗುಳಗಳು ಜಿಲ್ಲೆಯಲ್ಲಿ ಬಹಳ ವಿಶೇಷ ಎಂಬಂತೆ ಬಳಸುತ್ತಾರೆ. ಉದಾ:– **'**ಕೆಟ್ಟಬ್ಯಾನಿ ಬರ್ಲಿ**'** ಎಂಬ ಬೈಯುವ ಶಬ್ದ ಬಳಸುತ್ತಾರೆ. ಅಂದರೆ ಹೊಟ್ಟೆ ನೋವು ಅಥವಾ ಇನ್ನಾವುದೋ ನೋವುಗಳು ಬರಲಿ ಎಂದು. ಹಿಂದೆ ನೋವುಗಳು ಬಂದಾಗ ವ್ಯಕ್ತಿಗಳು ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡ ಉದಾಹರಣೆಗಳಿಗೆ ಕಡಿಮೆಯಿಲ್ಲ. ಅದರಂತೆ ಇವನೂ ಸಹ ಕೆಟ್ಟಬ್ಯಾನಿ ಬಂದು ಸಾಯಲಿ ಎಂದು ಶಪಿಸುತ್ತಾರೆ. **'**ಕರಿನಾಗರ ಹಾವು ಕಡಿಲಿ**'** ಎಂದು ಬೈಯುತ್ತಾರೆ. ಈ ಕರಿನಾಗರ ಬಹಳ ವಿಷಕಾರಿಯಾದ ಹಾವು ಆಗಿರುವುದರಿಂದ ಇಂತಹ ಹಾವೇ ಕಡಿಯಲಿ ಎಂಬುದು ಅವರ ಶಾಪವಾಗಿದೆ. ಇಲ್ಲಿ ಸಣ್ಣ–ಪುಟ್ಟ ಹಾವುಗಳು ಮನುಷ್ಯನಿಗೆ ಕಡಿದರೂ ಏನೇ ಆಗದಿರುವ ಉದಾಹರಣೆಗಳು ನಮ್ಮ ಮುಂದೆ ಕಂಡುಬರುತ್ತವೆ. ಆದ್ದರಿಂದಲೇ ಈ ನುಡಿಗಳನ್ನು ಶಾಪವಾಗಿ ಬಳಸುತ್ತಾರೆ. ಇಂತಹ ಬೈಗುಳಗಳ ಜೊತೆಗೆ ಹಾಳಾಗಿ ಹೋಗಲಿ, ಮನೆ ಮುಚ್ಚಲಿ, ಕೈ–ಕಾಲು ಮುರಿಲಿ ಎಂಬ ಶಾಪಾಶಯಗಳನ್ನು ಹಾಕುತ್ತಾರೆ. ಒಟ್ಟಾರೆ ಶಾಪಾಶಯದ ಆಶಯವೇ ಆ ವ್ಯಕ್ತಿಯ ನಾಶ ಎಂಬುದಾಗಿದೆ.

ಈ ರೀತಿಯಾಗಿ ಕೊಪಣಾಚಲದಲ್ಲಿ ಬಹಳ ವಿಶಿಷ್ಟವಾಗಿ ಭಾಷೆ ಬಳಕೆಯಾಗುತ್ತಿದೆ. ಈ ಭಾಷೆಯು ಇತರ ಪ್ರಾಂತಗಳಿಗೆ ಹೋಲಿಸಿದಾಗ ಬಹಳ ವಿಶಿಷ್ಟತೆ ಎನಿಸುತ್ತದೆ. ಒಟ್ಟಾರೆಯಾಗಿ ಒಂದು ಪ್ರದೇಶದ ಭಾಷೆ ಆ ಭಾಗದ ಸಂಸ್ಕೃತಿಯನ್ನು ಅನಾವರಣ ಮಾಡುತ್ತದೆ ಎಂಬುದರಲ್ಲಿ ಅನುಮಾನವಿಲ್ಲ. ಅದರಂತೆ ಕೊಪ್ಪಳ ಜಿಲ್ಲೆಯ ಭಾಷೆಯೂ ಸಹ ತನ್ನ ನೆಲದ ಸಂಸ್ಕೃತಿಯ ಸೊಗಡನ್ನು ಅನಾವರಣ ಮಾಡುತ್ತಿದೆ ಎಂದು ಹೇಳಬಹುದು.

**ಆಕರ ಗ್ರಂಥಗಳು :-**

1) ಡಾ. ಕೆ. ಕೆಂಪೆಗೌಡ, ಸಾಮಾನ್ಯ ಭಾಷಾ ವಿಜ್ಞಾನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-1996
2) ಡಾ.ಎಂ.ಚಿದಾನಂದಮೂರ್ತಿ, ಭಾಷಾ ವಿಜ್ಞಾನ ಮತ್ತು ಛಂದಸ್ಸು, ಸ್ವಪ್ನಾ ಬುಕ್ ಹೌಸ್, ಬೆಂಗಳೂರು-2002
3) ಡಾ. ಸಂಗಮೇಶ ಸವದತ್ತಿಮಠ, ಕನ್ನಡ ಭಾಷಾ ವ್ಯಾಸಂಗ, (6ನೇ ಮುದ್ರಣ) ರೂಪದರ್ಶಿ ಪ್ರಕಾಶನ, ಕಲ್ಬುರ್ಗಿ-1998
4) ರಾ.ಯ. ಧಾರವಾಡಕರ , ಕನ್ನಡ ಭಾಷಾಶಾಸ್ತ್ರ (8ನೇ ಮುದ್ರಣ), ಗೀತಾ ಬುಕ್ ಹೌಸ್, ಮೈಸೂರು-1998

* * * * *

# ಕೊಪ್ಪಳ ಪರಿಸರದ ಕನ್ನಡ ಭಾಷೆಯ ಮೇಲೆ

# ಅನ್ಯ ಭಾಷೆಗಳ ಪ್ರಭಾವ

ಪ್ರಪಂಚದಲ್ಲಿ ಸರಿ ಸುಮಾರು ಐದರಿಂದ ಏಳುಸಾವಿರ ಭಾಷೆಗಳು ಇರಬಹುದೆಂದು ಅಂದಾಜಿಸಲಾಗಿದೆ. ಆದರೆ ಅದಕ್ಕೆ ಯಾವುದೇ ದಾಖಲೆಗಳಿಲ್ಲ ಎಂದು ಭಾಷಾಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಅದರಂತೆ ಭಾರತದಲ್ಲಿಯೂ ಸಹ ಸಾವಿರಾರು ಭಾಷೆಗಳಿವೆ. ನಮ್ಮ ಭಾರತೀಯ ಸಂವಿಧಾನವು ಕೇವಲ 22 ಭಾಷೆಗಳಿಗೆ ಮಾತ್ರ ಆಡಳಿತಾತ್ಮಕ ಉದ್ದೇಶದಿಂದ ಅನುಮತಿ ಕೊಟ್ಟಿದ್ದರೂ 6543 ಭಾಷೆಗಳು ಮತ್ತು ಒಂದು ಸಾವಿರಕ್ಕೂ ಅಧಿಕ ಉಪಭಾಷೆಗಳಿವೆ ಎಂದು ಭಾಷಾಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಅವುಗಳಲ್ಲಿ ಬಹುತೇಕ ಲಿಪಿರಹಿತ ಭಾಷೆಗಳಾಗಿವೆ. ಕೆಲ ಭಾಷೆಗಳು ಕೋಟಿಗಟ್ಟಲೆ ಜನರಾಡುವ ಭಾಷೆಗಳಿದ್ದರೆ, ಇನ್ನು ಕೆಲ ಭಾಷೆಗಳಂತೂ ಕೆಲವೇ ಕೆಲವು ಕುಟುಂಬಗಳಾಡುವ ಭಾಷೆಗಳೂ ಭಾರತದಲ್ಲಿವೆಯೆಂದು ಭಾಷಾ ತಜ್ಞರ ಅಭಿಪ್ರಾಯವಾಗಿದೆ. ಅವು ಯಾವುದೇ ಭಾಷೆಗಳಿರಬಹುದು ಅವುಗಳಿಗೆ ಸಾವಿರಾರು ವರ್ಷಗಳ ಇತಿಹಾಸವಿರುವುದಂತೂ ನಿಜ. ಆದರೆ ಸರಿಯಾದ ರೀತಿಯಲ್ಲಿ ಅವುಗಳ ಅಧ್ಯಯನ ಮಾಡುವಲ್ಲಿ ನಾವು ಸೋತಿದ್ದೇವೆ ಎನ್ನುವುದೂ ಸಹ ಅಷ್ಟೇ ನಿಜ. ಆದರೂ ಪ್ರಪಂಚದ ಯಾವುದೇ ಭಾಷೆಗಳಿರಬಹುದು ಅವುಗಳಿಗೆ ತನ್ನದೇ ಆದ ಪರಂಪರೆ ಇದೆ, ಚರಿತ್ರೆ ಇದೆ, ಸಂಸ್ಕೃತಿ ಇದೆ. ಅದಕ್ಕೆ ತನ್ನದೇ ಆದ ಮಹತ್ವ ಇರುವುದನ್ನು ನಾವು ಒಪ್ಪಲೇಬೇಕು. ಚಿಕ್ಕ ಚಿಕ್ಕ ಭಾಷೆಗಳಿದ್ದರೂ ಅವುಗಳಿಗಿರುವ ಮಹತ್ವ ಮಾತ್ರ ಕಡಿಮೆ ಇಲ್ಲ ಎನ್ನಬಹುದು.

ಕರ್ನಾಟಕದಲ್ಲಿ 72 ಭಾಷೆಗಳು ಮತ್ತು 50 ಬುಡಕಟ್ಟು ಭಾಷೆಗಳಿವೆಯೆಂದು ಅಂದಾಜಿಸಲಾಗಿದೆ. ಕನ್ನಡ ಭಾಷೆಯನ್ನು ಬಿಟ್ಟರೆ ಉಳಿದ ಭಾಷೆಗಳ ಬಳಕೆ ಕಡಿಮೆ ಎನ್ನಬಹುದು. ಯಾವುದೇ ಭಾಷೆಗಳನ್ನು ಮಾತನಾಡುವವರು ಮೇಲು–ಕೀಳೆನ್ನದೆ ಸೌಹಾರ್ದಯುತವಾಗಿ ಬಾಳುತ್ತಿದ್ದಾರೆ. ಇದಕ್ಕೆ ಕೊಪ್ಪಳ ಪ್ರದೇಶವೂ ಹೊರತಾಗಿಲ್ಲ. ಕೊಪ್ಪಳದಲ್ಲಿಯೂ ಸಹ ಸುಮಾರು 10–15 ಭಾಷಿಕರಿದ್ದಾರೆ. ನಾಡಭಾಷೆ ಕನ್ನಡದ ಜೊತೆಗೆ ಸಂಸ್ಕೃತ, ಉರ್ದು, ತಮಿಳು, ತೆಲುಗು, ರಾಜಸ್ಥಾನಿ, ಗುಜರಾತಿ, ಮರಾಠಿ, ಕೊಂಕಣಿ, ಸಾವಾಜಿ ಪಟೇಗಾರ, ಲಮಾಣಿ ಹೀಗೆ ಮುಂತಾದ ಭಾಷೆಗಳಲ್ಲದೇ ಇನ್ನೂ ಅನೇಕ ಭಾಷಿಕರಿದ್ದಾರೆ. ಅವರು ಉದ್ಯೋಗ ಮತ್ತು ವ್ಯಾಪಾರಕ್ಕಾಗಿ ಆಂಧ್ರ, ತಮಿಳನಾಡು, ಮಹಾರಾಷ್ಟ್ರ, ಗೋವಾ ಮತ್ತು ಉತ್ತರ ಭಾರತದಿಂದ ಅನೇಕರು ಇಲ್ಲಿ ಬಂದು ನೆಲೆಸಿದ್ದಾರೆ. ಅವರು ತಮ್ಮ ತಮ್ಮ ಉದ್ಯೋಗ, ವ್ಯಾಪಾರ ಮಾಡುತ್ತಾ ತಮ್ಮ ಭಾಷೆಗಳನ್ನು ಬಳಸುತ್ತಿದ್ದಾರೆ.

ಹೊರರಾಜ್ಯದವರು ಇಲ್ಲಿ ನೆಲೆಸಿ ವೃತ್ತಿ ಮಾಡುತ್ತಾ ಇಲ್ಲಿನ ಜನರೊಂದಿಗೆ ವ್ಯವಹರಿಸುತ್ತಿರುವುದರಿಂದ ಇಲ್ಲಿನ ಜನರೊಂದಿಗೆ ಎಷ್ಟೇ ಬೆರೆತು ಅನ್ಯೋನ್ಯವಾಗಿ ಬಾಳುತ್ತಿದ್ದರೂ ಈ ನಾಡಿನ ಕನ್ನಡ ಭಾಷೆಯ ಮೇಲೆ ಅವರ ಭಾಷೆಗಳು ಪ್ರಭಾವ ಬೀರಿದೆ ಎನ್ನುವುದು ಮಾತ್ರ ಸತ್ಯ.

ಒಂದು ಪ್ರದೇಶದಲ್ಲಿ ಇನ್ನೊಂದು ಪ್ರದೇಶದ ಜನರು ಬಂದು ಇಲ್ಲಿ ನೆಲೆಸಿದಾಗ ಆ ಪ್ರದೇಶದ ಮೇಲೆ ಅವರ ಸಂಸ್ಕೃತಿ–ಸಂಪ್ರದಾಯ–ಆಚರಣೆಗಳ ಪ್ರಭಾವ ಬೀರುತ್ತವೆ ಎನ್ನುವುದರಲ್ಲಿ ಅನುಮಾನವಿಲ್ಲ. ಅವುಗಳ ಜೊತೆಗೆ ಭಾಷೆಯ ಮೇಲೆಯೂ ಸಹ ಪ್ರಭಾವ ಬೀರಿ, ಮಾತನಾಡುವ ಭಾಷೆ ಸಂಕರ ತಳಿ ಆಗುವ ಸಾಧ್ಯತೆಯೂ ಹೆಚ್ಚು. ಕೆಲವೊಂದು ಸಂದರ್ಭದಲ್ಲಿ ಆ ಭಾಷೆಯ ಪ್ರಭಾವದಿಂದ ಇಲ್ಲಿನ ಭಾಷೆ ನಲುಗಿ ಹೋದಂತಹ ಪ್ರಸಂಗಗಳೂ ಈ ದೇಶದಲ್ಲಿ ನಡೆದು ಹೋಗಿವೆ. ಆದರೆ ಕೊಪ್ಪಳ ಪ್ರದೇಶದಲ್ಲಿ ಅಂತಹ ವಾತಾವರಣ ಸೃಷ್ಟಿಯಾಗಿಲ್ಲವೆಂದಿದ್ದರೂ ಇಲ್ಲಿನ ಕನ್ನಡ ಭಾಷೆಗೆ ಅನ್ಯ ಭಾಷೆಗಳ ಪ್ರಭಾವ ಬೀರಿರುವುದಂತೂ ಸತ್ಯದ ಸಂಗತಿ. ಇಲ್ಲಿನ ಕನ್ನಡ ಬಾಷೆಯ ಬೆಳವಣಿಗೆಗೆ ಅಡ್ಡಿಯನ್ನುಂಟು ಮಾಡುತ್ತಿವೆ ಎನ್ನಬಹುದು. ಮುಖ್ಯವಾಗಿ ಕೊಪ್ಪಳ ಪ್ರದೇಶದ ಕನ್ನಡದ ಮೇಲೆ ಪ್ರಭಾವ ಬೀರಿದ ಪ್ರಮುಖವಾದ ಕೆಲ ಭಾಷೆಗಳನ್ನು ಇಲ್ಲಿ ಸಾಂದರ್ಭಿಕವಾಗಿ ಚರ್ಚಿಸಲಾಗಿದೆ.

**ಸಂಸ್ಕೃತ:**– ಈ ಹೈದ್ರಾಬಾದ–ಕರ್ನಾಟಕ ಪ್ರದೇಶದಲ್ಲಿ ಅನೇಕ ರಾಜ ಮನೆತನಗಳು ಆಳ್ವಿಕೆ ನಡೆಸಿವೆ. ಕ್ರಿ.ಪೂ ಸುಮಾರು 3ನೇ ಶತಮಾನದಿಂದ 18ನೇ ಶತಮಾನದವರೆಗೆ ವಿವಿಧ ಮನೆತನಗಳು ಮತ್ತು ಸ್ಥಳೀಯ ಅರಸರೂ ಸಹ ಆಳ್ವಿಕೆ ನಡೆಸಿದ ಬಗ್ಗೆ ಇಲ್ಲಿನ ಚರಿತ್ರೆಯಿಂದ ತಿಳಿದುಬರುತ್ತದೆ. ಸುಮಾರು 16ನೇ ಶತಮಾನದ ವರೆಗೆ ಹೇಳಿಕೊಳ್ಳುವಂತಹ ಯಾವುದೇ ಪ್ರಭಾವಗಳು ಈ ಪ್ರದೇಶದ ಭಾಷೆಯ ಮೇಲೆ ಆಗಿರುವುದು ಕಂಡುಬರುವುದಿಲ್ಲ. ಅಲ್ಲಲ್ಲಿ ಸಂಸ್ಕೃತ ಭಾಷೆ ಬಳಕೆ ಇದ್ದರೂ ಅದು ರಾಜಮನೆತನಗಳಲ್ಲಿ ಪಂಡಿತರಿಂದ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಲು ಉಪಯೋಗಿಸುತ್ತಿದ್ದರಿಂದ ಅದು ಜನಸಾಮಾನ್ಯರಾಡುವ ಭಾಷೆಯ ಮೇಲೆ ಅಂತಹ ಯಾವುದೇ ಪರಿಣಾಮ ಬೀರಿರುವುದಿಲ್ಲ. ಆದರೂ ಕೆಲ ಸಂಸ್ಕೃತ ಶಬ್ದಗಳು ಕೊಪ್ಪಳ ಪರಿಸರದಲ್ಲಿ ಇಂದಿಗೂ ಬಳಕೆಯಲ್ಲಿವೆ. ಪೃಥ್ವಿ, ನದಿ, ಶ್ರೀ, ಮಾತಾ–ಪಿತೃ, ಪುತ್ರ, ಪುರಾಣ, ಗೃಹ, ಅಧಿಕಾರ, ವಿಶ್ವವಿದ್ಯಾಲಯ, ಲಗ್ನ, ಮೋಕ್ಷ, ಸ್ವರ್ಗ–ನರಕ, ಋಷಿ–ಮುನಿ, ಮತ–ಧರ್ಮ, ಪ್ರಕರಣ ಹೀಗೆ ಮುಂತಾದ ಶಬ್ದಗಳನ್ನು ಕನ್ನಡೀಕರಣಗೊಳಿಸಿ ಇಲ್ಲಿ ಮಾತನಾಡುತ್ತಿದ್ದಾರೆ. ಆ ಶಬ್ದಗಳು ಕನ್ನಡದವುಗಳೇ ಎನ್ನುವಷ್ಟು ಬಳಸಲಾಗುತ್ತಿದೆ. ಆದರೂ ಅವು ಅನ್ಯ ಭಾಷೆಯ ಪದಗಳು ಎನ್ನುವುದು ಮಾತ್ರ ಸುಳ್ಳಲ್ಲ. ಆ ಶಬ್ದಗಳನ್ನು ದಿನನಿತ್ಯ ಮಾತಾಡುವ ಮತ್ತು ಬರೆಯುವ ಸಂದರ್ಭಗಳಲ್ಲಿ

ಬಳಕೆಯಾಗುತ್ತಿವೆ. ಅವು ಕನ್ನಡದ ಮೇಲೆ ಉಂಟುಮಾಡಬಹುದಾದ ಪ್ರಭಾವಗಳ ಅರಿವಿಲ್ಲದಂತೆ ನಾವು ಬಳಸುತ್ತಿದ್ದೇವೆ.

**ಉರ್ದು:**–ಕ್ರಿ.ಶ 1565ರಲ್ಲಿ ತಾಳಿಕೋಟೆ ಯುದ್ಧದ ನಂತರ ವಿಜಯನಗರ ಸಾಮ್ರಾಜ್ಯ ಪತನವಾಯಿತು. ನಂತರ ಬಿಜಾಪುರ ಸುಲ್ತಾನರ ನೇರ ಆಡಳಿತಕ್ಕೆ ಈ ಪ್ರದೇಶ ಒಳಪಟ್ಟಿತು. ಕ್ರಿ.ಶ ಸುಮಾರು 16ನೇ ಶತಮಾನದಲ್ಲಿ ದೆಹಲಿ ಸುಲ್ತಾನ ಔರಂಗಜೇಬನು ಬಿಜಾಪುರ ಆದಿಲ್‌ಷಾಗಳನ್ನು ಸೋಲಿಸಿ ಇಲ್ಲಿನ ಪ್ರದೇಶವನ್ನು ವಶಪಡಿಸಿಕೊಂಡು ಈ ಪ್ರಾಂತಗಳನ್ನು ಹೈದರಾಬಾದ ಪ್ರಾಂತಕ್ಕೆ ಸೇರಿಸಿ ನಿಜಾಮರ ತೆಕ್ಕೆಗೆ ಒಪ್ಪಿಸಿದನು. ಔರಂಗಜೇಬನ ಮರಣದ ನಂತರ ಹೈದರಾಬಾದ ನಿಜಾಮರು ಈ ಪ್ರಾಂತ್ಯದಲ್ಲಿ ಸ್ವತಂತ್ರವಾಗಿ ಆಡಳಿತ ನಡೆಸಲು ಮುಂದಾರು. ಭಾರತ ದೇಶಕ್ಕೆ 1947ರಲ್ಲಿ ಸ್ವಾತಂತ್ರ ದೊರೆತರೂ ನಿಜಾಮರು ಹೈದರಾಬಾದ ಪ್ರಾಂತವನ್ನು ಭಾರತ ದೇಶದ ಸಾರ್ವಭೌಮದೊಳಗೆ ಸೇರಿಸದೇ, ಸ್ವತಂತ್ರವಾಗಿ ಆಳುವ ಉದ್ಧಟತನವನ್ನು ಪ್ರದರ್ಶಿಸಿದರು. ಆಗ ಮತ್ತೊಂದು ಹೋರಾಟದ ನಂತರ 1948ರಲ್ಲಿ ಈ ಭಾಗ ವಿಮೋಚನೆಗೊಂಡಿರುವುದು ಚರಿತ್ರೆಯಿದೆ. ಕ್ರಿ.ಶ 15ನೇ ಶತಮಾನದಿಂದ ಕೊಪ್ಪಳ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಬಿಜಾಪುರ ಸುಲ್ತಾನರು, ದೆಹಲಿ ಸುಲ್ತಾನರು ಮತ್ತು ಹೈದರಾಬಾದಿನ ನಿಜಾಮರು ಮುಸ್ಲಿಂ ದೊರೆಗಳಾಗಿದ್ದರು. ಅವರ ಮಾತೃಭಾಷೆ ಉರ್ದು ಆಗಿತ್ತು. ಹೀಗಾಗಿ ಆಡಳಿತದ ಭಾಷೆಯನ್ನು ಉರ್ದು ಭಾಷೆಯನ್ನಾಗಿ ಮಾಡಿಕೊಂಡಿದ್ದರು. ಅದಕ್ಕಾಗಿ ಅವರ ಆಡಳಿತದ ಭಾಷೆ ಉರ್ದುವನ್ನೇ ಕಲಿಯಬೇಕೆಂದು ಇಲ್ಲಿನ ಜನರ ಮೇಲೆ ಹೇರಿಕೆ ಮಾಡುತ್ತಿದ್ದರು. ಬಲವಂತವಾಗಿ ಜನರು ಉರ್ದು ಕಲಿಯಬೇಕೆಂಬ ದಬ್ಬಾಳಿಕೆಗಳೂ ಸಹ ಅಲ್ಲಲ್ಲಿ ನಡೆದ ಬಗ್ಗೆ ಉದಾಹರಣೆಗಳು ಚರಿತ್ರೆಯಲ್ಲಿ ದಾಖಲಾಗಿವೆ. ಕನ್ನಡ ಶಾಲೆಗಳನ್ನು ತೆರೆಯಲು ಅನುಮತಿ ಕೊಡುತ್ತಿರಲಿಲ್ಲ. ಕದ್ದು–ಮುಚ್ಚಿ ಕನ್ನಡ ಶಾಲೆಗಳನ್ನು ನಡೆಸಬೇಕಾದ ಅನಿವಾರ್ಯತೆ ಆಗಿನ ಕಾಲದಲ್ಲಿ ಎದುರಾಗಿತ್ತು. ಕನ್ನಡ ಶಿಕ್ಷಕರೂ ಸಹ ಉರ್ದು ಭಾಷೆಯನ್ನು ಕಲಿತು ಬೋಧಿಸಬೇಕಾದಂತ ಪರಿಸ್ಥಿತಿ ನಿರ್ಮಾಣವಾಗಿತ್ತು. ಹೊರಗಡೆ ಉರ್ದು ಶಾಲೆಯ ನಾಮಫಲಕಗಳನ್ನಾಕಿ ಒಳಗಡೆ ಕನ್ನಡ ಕಲಿಸುತ್ತಿದ್ದರೆಂದು ಚರಿತ್ರೆಯಿಂದ ತಿಳಿದುಬರುತ್ತದೆ. 1948 ಸೆಪ್ಟಂಬರ್ 17ರಂದು ಈ ಪ್ರದೇಶ ನಿಜಾಮರಿಂದ ವಿಮೋಚನೆಗೊಂಡಿತು. ಅವರ ಆಡಳಿತ ಅಂತ್ಯಗೊಂಡು ಸುಮಾರು ಎಪ್ಪತ್ತು ವರ್ಷಗಳೇ ಕಳೆದು ಹೋಗಿವೆ. ಆದರೆ ಇಂದಿಗೂ ಸಹ ನಮ್ಮ ಕನ್ನಡ ಭಾಷೆಯ ಮೇಲೆ ಅದರ ಪ್ರಭಾವದಿಂದ ಅನೇಕ ಅಕ್ಷರಗಳು, ಶಬ್ದಗಳು, ವಾಕ್ಯಗಳನ್ನು ಕನ್ನಡದಲ್ಲಿ ನಮಗೆ ಅರಿವಿಲ್ಲದಂತೆ ಬಳಸುತ್ತಿದ್ದೇವೆ. ಆದರೆ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಉರ್ದು ಭಾಷೆಯು ಸ್ವತಂತ್ರವಾಗಿ ಹುಟ್ಟಿದ ಭಾಷೆಯಲ್ಲ. ಮೂಲ ಅರಬ್ ರಾಷ್ಟ್ರಗಳ ಅರೇಬಿಕ್ ಭಾಷೆಯಿಂದ ಜನ್ಮತಾಳಿದ್ದರೂ ಫರ್ಶಿಯಾ ಮತ್ತು ಭಾರತದ

ಹಿಂದಿ ಭಾಷೆಗಳ ಅಕ್ಷರಳಿಂದ ಜನ್ಮ ಪಡೆದ ಭಾಷೆಯಾಗಿದೆ. ಇಂದು ಭಾರತದ ಸ್ವತಂತ್ರ ಭಾಷೆಯಂತೆ ಉರ್ದು ಬಳಕೆಯಾಗುತ್ತಿದ್ದರೂ ಇತರ ದೇಶಗಳಲ್ಲಿ ಬಳಸುವ ಭಾಷೆಗಳಿಗಿಂತ ಇದು ಭಿನ್ನವಾಗಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿ ಎಂದರೆ ಈ ಉರ್ದು ಭಾಷೆಯು ಮೂಲ ಅರೇಬಿಕ್, ಫರ್ಶಿಯನ್ ಭಾಷೆಗಳಿಂದ ಉಗಮಗೊಂಡಿರುವುದರಿಂದ ಆ ಭಾಷೆಗಳ ಅನೇಕ ಶಬ್ದಗಳು ಭಾರತದ ಸ್ಥಳೀಯ ಭಾಷೆಗಳಲ್ಲಿ ಹಾಸುಹೊಕ್ಕಾಗಿ ಬಿಟ್ಟಿವೆ. ಆದರೆ ಆ ಶಬ್ದಗಳು ಉರ್ದು ಭಾಷೆಯಲ್ಲಿ ಯಥೇಚ್ಛವಾಗಿ ಬಳಕೆಯಾಗುತ್ತಿರುವುದರಿಂದ ಅವುಗಳನ್ನು ಉರ್ದು ಭಾಷೆಯ ಶಬ್ದಗಳೆಂದು ಪರಿಭಾವಿಸಲಾಗಿದೆ. ಅವು ವಾಸ್ತವದಲ್ಲಿ ಅರೇಬಿಕ್ ಮತ್ತು ಫರ್ಶಿಯಾ ಭಾಷೆಗಳ ಶಬ್ದಗಳಾಗಿವೆ.

**ಅರೇಬಿಕ್ ಮತ್ತು ಫರ್ಶಿಯನ್:**–ಕೊಪ್ಪಳ ಪ್ರದೇಶದಲ್ಲಿ ಅರೇಬಿಕ್ ಮತ್ತು ಪರ್ಶಿಯನ್ ಭಾಷೆಗಳ ಅನೇಕ ಶಬ್ದಗಳು ಬಳಕೆಯಲ್ಲಿವೆ. ಅವು ಕನ್ನಡ ಶಬ್ದಗಳೇ ಎನ್ನುವಂತೆ ಬಳಕೆಗೊಳ್ಳುತ್ತಿವೆ. ಆ ಶಬ್ದಗಳನ್ನು ನಾವು ದಿನನಿತ್ಯ ಮಾತಿನ ಎಲ್ಲಾ ಸಂದರ್ಭಗಳಲ್ಲಿ ಬಳಸುತ್ತೇವೆ. ಅರೇಬಿಕ್ ಭಾಷೆಯ ಶಬ್ದಗಳಾದ ಮಾಲಕ, ಮಂಜೂರು, ರಿಯಾಯತಿ, ಕೋಮು, ಜರೂರಿ, ರುಜು, ಕಾಗದ, ಹವ್ಯಾಸ, ತರಬೇತಿ, ಸಲೀಸು, ಅಂಬಾರಿ, ಇಲಾಖೆ, ವಕೀಲ, ಪಾಳಿ, ಇನಾಮು, ಅಮಾನತ್ತು ಮುಂತಾದವುಳನ್ನು ಬಳಸುತ್ತೇವೆ. ಅದರಂತೆ ಫರ್ಶಿಯನ್ ಭಾಷೆಯ ಬಹಾದ್ದೂರ್, ಬೇನಾಮಿ, ಭರವಸೆ, ರೊಕ್ಕ, ಖರ್ಚು, ಖಜಾನೆ, ಕುಸ್ತಿ, ದಸ್ತಗಿರಿ, ಟಪಾಲು, ಡಕಾಯಿತಿ, ತರಕಾರಿ, ನಮೂನೆ, ಉಸ್ತುವಾರಿ, ಇಸ್ವಿ, ಲುಂಗಿ, ಸುಮಾರು, ಸುಸ್ತು, ದುಬಾರಿ, ಶಾಮೀನು, ದೋಸ್ತಾ, ಸಹಿ ಹೀಗೆ ಅನೇಕ ಶಬ್ದಗಳು ಈ ಪ್ರದೇಶದಲ್ಲಿ ಬಳಕೆಯಲ್ಲಿವೆ. ಈ ಶಬ್ದಗಳು ಉರ್ದು ಭಾಷೆಯಿಂದ ಬಂದವುಗಳೆಂದು ಭಾವಿಸಲಾಗಿದೆ. ಆದರೆ ವಾಸ್ತವದಲ್ಲಿ ಅವು ಅರೇಬಿಕ್ ಮತ್ತು ಫರ್ಶಿಯನ್ ಭಾಷೆಗಳ ಶಬ್ದಗಳಾಗಿವೆ. ಅವುಗಳನ್ನು ನಾವು ಕನ್ನಡೀಕರಣಗೊಳಸಿ ವಾಕ್ಯ ರಚಿಸಿಕೊಂಡು ಬಳಸುತ್ತೇವೆ.

**ತಮಿಳು:**–1953ರ ಸುಮಾರಿನಲ್ಲಿ ಕೊಪ್ಪಳ ತಾಲ್ಲೂಕಿನ ಮುನಿರಾಬಾದನಲ್ಲಿ ತುಂಗಭದ್ರ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ಕಟ್ಟಲಾಯಿತು. ಈ ಅಣೆಕಟ್ಟಿನ ಕಟ್ಟಡದ ಬಹುತೇಕ ಕೆಲಸ–ಕಾರ್ಯಗಳನ್ನು ತಮಿಳುನಾಡಿನ ಮದ್ರಾಸ್ ಇಂಜಿನಿಯರುಗಳಿಗೆ ವಹಿಸಲಾಗಿತ್ತು. ಮದ್ರಾಸ್ ಇಂಜಿಯರುಗಳು ಕಟ್ಟಡ ಕೆಲಸಕ್ಕೆ ತಮ್ಮ ರಾಜ್ಯದ ಕಾರ್ಮಿಕರನ್ನೇ ಹೆಚ್ಚಾಗಿ ಕರೆತಂದಿದ್ದರು. ಅವರ ಮಾತೃ ಭಾಷೆ ತಮಿಳು. ತಮಿಳಿಗರು ತಮ್ಮ ಭಾಷೆಯನ್ನು ಅತಿಯಾಗಿ ಪ್ರೀತಿಸುವವರು. ಅವರು ತಮ್ಮ ಮಾತೃ ಭಾಷೆ ತಮಿಳನ್ನು ಬಿಟ್ಟು ಅನ್ಯ ಭಾಷೆ ಮಾತನಾಡರು. ಹೀಗಾಗಿ ಪ್ರಾರಂಭದಲ್ಲಿ ಮುನಿರಾಬಾದ ಗ್ರಾಮದಲ್ಲಿ ಉಳಿದ ಭಾಷಿಗರಿಗಿಂತ ತಮಿಳಿಗರೇ ಹೆಚ್ಚಾಗಿದ್ದರು. ಅವರು ನಿತ್ಯ ತಮ್ಮ ತಮಿಳು ಭಾಷೆಯನ್ನು

ಬಳಸುತ್ತಿದ್ದರು. ತಮಿಳು ಮತ್ತು ಕನ್ನಡ ಭಾಷೆ ಎರಡೂ ಮೂಲ ದಕ್ಷಿಣದ ದ್ರಾವಿಡ ಭಾಷೆಯಿಂದ ಪ್ರತ್ಯೇಕಗೊಂಡ ಭಾಷೆಗಳು ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಇವೆರಡರಲ್ಲಿ ಅನೇಕ ಸಾಮ್ಯತೆಗಳಿದ್ದರೂ ಅವೆರಡು ಪ್ರತ್ಯೇಕ ಭಾಷೆಗಳೇ. ಕನ್ನಡ ಭಾಷೆಯ ಮೇಲೆ ತಮಿಳು ಅದರಂತೆ ತಮಿಳು ಭಾಷೆಯ ಮೇಲೆ ಕನ್ನಡ ಹೀಗೆ ಒಂದರಮೇಲೆ ಮತ್ತೊಂದು ಭಾಷೆಯ ಪ್ರಭಾವ ಬೀರಿರಬಹುದು. ಆದರೆ ಕೊಪ್ಪಳ ಪ್ರದೇಶದ ಕನ್ನಡ ಭಾಷೆಯ ಮೇಲೆ ತಮಿಳು ಭಾಷೆಯು ಹೆಚ್ಚು ಪ್ರಭಾವ ಬೀರಿಲ್ಲವೆಂದರೂ ಪರಿಣಾಮ ಮಾತ್ರ ಇದ್ದೇ ಇದೆ. ವಿಶೇಷವಾಗಿ ಮುನಿರಾಬಾದ ಮತ್ತು ಸುತ್ತಲಿನ ಗ್ರಾಮಗಳಾದ ನಿಂಗಾಪುರ, ಹೊಸಬಂಡಿಹರ್ಲಾಪುರ, ಶಿವಪುರಗಳಲ್ಲಿ ತಮಿಳು ಭಾಷಿಕರು ವಾಸವಾಗಿದ್ದಾರೆ. ಮುನಿರಾಬಾದ ಗ್ರಾಮದಲ್ಲಿ ಅವರಿಗಾಗಿ ಒಂದು ಏರಿಯವನ್ನೇ ನಿರ್ಮಿಸಿಕೊಂಡಿದ್ದಾರೆ. ಅವರು ಇಲ್ಲಿಯೇ ನೆಲೆಸಿ ಇಂದು ಕನ್ನಡಿಗರೊಂದಿಗೆ ಬೆರೆತು ರಕ್ತಸಂಬಂಧವನ್ನೂ ಬೆಳೆಸಿದ್ದಾರೆ. ಅದರ ಜೊತೆಗೆ ಇಲ್ಲಿನ ಉದ್ಯೋಗ, ಕೃಷಿ, ರಾಜಕೀಯ ಕ್ಷೇತ್ರಗಳಲ್ಲಿ ಪಾಲು ಪಡೆದಿದ್ದಾರೆ. ಅವು ಕನ್ನಡಿಗರಿಗೆ ದೊರೆಯಬೇಕಾಗಿದ್ದ ಪಾಲುಗಳು ಎನ್ನುವುದು ಮಾತ್ರ ಅಷ್ಟೇ ಸತ್ಯ. ತಮಿಳಿಗರು ತಮ್ಮ ತಮ್ಮ ಮಧ್ಯ ತಮಿಳು ಭಾಷೆಯನ್ನಾಡುತ್ತಾರೆ. ಅವರ ಜೊತೆಯಲ್ಲಿ ಸಂಪರ್ಕ ಸಾಧಿಸುವ ಕನ್ನಡಿಗರೂ ಕೂಡ ಸಹ ಅವರದ್ದೇ ಆದ ತಮಿಳು ಭಾಷೆ ಇಲ್ಲವೇ ತಮಿಳು ಮಿಶ್ರಿತ ಕನ್ನಡ ಭಾಷೆಯ ಮಾತನಾಡುತ್ತಾರೆ. ಇದು ಒಂದು ರೀತಿಯಲ್ಲಿ ಸಂಕರ ತಳಿ ಎಂದಂತಾಗುತ್ತದೆ. ಹೀಗಾಗಿ ತಮಿಳು ಭಾಷೆ ಮುನಿರಾಬಾದ ಪರಿಸರದಲ್ಲಿ ಪ್ರಭಾವ ಬೀರಿ ಕನ್ನಡ ಭಾಷೆಗೆ ಧಕ್ಕೆಯನ್ನುಂಟುಮಾಡುತ್ತಿದೆ ಎನ್ನುವುದು ಮಾತ್ರ ಸತ್ಯ.

**ತೆಲುಗು:**–ಮುನಿರಾಬಾದಿನಲ್ಲಿ ತುಂಗಭದ್ರ ಅಣೆಕಟ್ಟು ಕಟ್ಟಿದ ನಂತರ ಹೊಸಪೇಟೆ, ಕಂಪ್ಲಿ ಕೊಪ್ಪಳ, ಗಂಗಾವತಿ, ಸಿಂಧನೂರು, ಮಾನ್ವಿ ಮುಂತಾದ ಭಾಗಗಳು ನೀರಾವರಿ ಪ್ರದೇಶಗಳಾದವು. ಅಲ್ಲಿಯವರೆಗೆ ಒಣ ಪ್ರದೇಶವಿದ್ದ ಭೂಮಿ ಸದಾ ನೀರಿನಿಂದ ಹಚ್ಚಹಸಿರಿನಂತೆ ಕಂಗೊಳಿಸಿತು. ಈ ಪ್ರದೇಶ ಮೊದಲೇ ಹಿಂದುಳಿದ ಭಾಗವಾಗಿತ್ತು. ಇಲ್ಲಿನ ಜನರಲ್ಲಿ ಹೇಳಿಕೊಳ್ಳುವಷ್ಟು ಹಣದ ಸೌಕರ್ಯ ಇಲ್ಲದಿದ್ದರಿಂದ ನೀರಿನ ಮೂಲ ಹರಿದರೂ ಉಪಯೋಗಿಸಿಕೊಳ್ಳಲು ಅಷ್ಟು ಸಮರ್ಥವಾಗಲಿಲ್ಲ. ಇಂತಹ ಸಂದರ್ಭದಲ್ಲಿ ವಿಶೇಷವಾಗಿ ಆಂಧ್ರಪ್ರದೇಶದ ರಾಜ್ಯದಿಂದ ಕೆಲ ಹಣವಂತ ವ್ಯಕ್ತಿಗಳು ಈ ಭಾಗಕ್ಕೆ ಆಗಮಿಸಿದರು. ಇಲ್ಲಿನ ನೀರಿನ ಮೂಲ ಸೌಲಭ್ಯಗಳನ್ನು ಉಪಯೋಗಿಸುವ ಕಲೆ ಅರಿತುಕೊಂಡರು. ಇಲ್ಲಿನ ಫಲವತ್ತಾದ ಭೂಮಿಯನ್ನು ರೈತರಿಂದ ಖರೀದಿಸಿದರು. ಫಲವತ್ತಾದ ಭೂಮಿಯಲ್ಲಿ ಕೃಷಿಗೈಯುತ್ತಾ ಅವರು ಸಮೃದ್ಧವಾಗುತ್ತಾ ಹೋದರು. ಆದರೆ ಮರಳಿ ಆಂಧ್ರಕ್ಕೆ ಹೋಗದೇ ಇಲ್ಲಿಯೇ ನೆಲೆಸಿ ಜೀವನ ಪ್ರಾರಂಭಿಸಿದರು. ಅವರ ಮಾತೃ ಭಾಷೆ ತೆಲುಗು. ಈ ತೆಲುಗು ಭಾಷೆಯೂ ಸಹ ತಮಿಳು, ಕನ್ನಡದಂತೆ

ದ್ರಾವಿಡ ಭಾಷೆಯ ಮೂಲದಿಂದ ಜನಿಸಿದ ಭಾಷೆ. ತಮಿಳು ಮತ್ತು ಮಲೆಯಾಳಂ ಭಾಷೆಗಳೆರಡೂ ಲಿಪಿ ಮತ್ತು ಮಾತನಾಡುವ ಶೈಲಿಯಲ್ಲಿ ಸಾಮ್ಯತೆ ಇರುವಂತೆ ಕನ್ನಡ ಮತ್ತು ತೆಲುಗು ಭಾಷೆಗಳೆರಡಕ್ಕೂ ಲಿಪಿ ಮತ್ತು ಮಾತಿನಲ್ಲಿ ಬಹಳ ಸಾಮ್ಯತೆಯಿದೆ. ತೆಲುಗು ಭಾಷಿಕರು ಆರಂಭದಲ್ಲಿ ಇಲ್ಲಿನ ಜನರೊಂದಿಗೆ ತಮ್ಮ ಭಾಷೆಯಲ್ಲಿಯೇ ಸಂಪರ್ಕ ಸಾಧಿಸಲು ಪ್ರಯತ್ನಿಸಿದರು. ಇಷ್ಟು ವರ್ಷಗಳಾದರೂ ಇಂದಿಗೂ ಸಹ ಎಷ್ಟೋ ಜನ ತೆಲುಗು ಭಾಷಿಕರು ಕನ್ನಡ ಕಲಿಯದೇ ತಮ್ಮ ಮಾತೃ ಭಾಷೆಯಲ್ಲಿ ಮಾತನಾಡುತ್ತಿದ್ದಾರೆ. ಇಲ್ಲಿನ ಜನರೂ ಸಹ ಅವರ ತೆಲುಗು ಭಾಷೆಯನ್ನೇ ಕಲಿತು ಅವರ ಜೊತೆಯಲ್ಲಿ ಸಂಪರ್ಕ ಸಾಧಿಸಲು ಪ್ರಯತ್ನಿಸಿದರು. ಇದು ಕನ್ನಡ ಭಾಷೆಗೆ ಹಿನ್ನಡೆಯಲ್ಲದೆ ಮತ್ತೇನೂ ಅನ್ನಲಾಗದು.

**ರಾಜಸ್ಥಾನಿ:**–ಇವರು ಉತ್ತರ ಭಾರತದ ರಾಜಸ್ಥಾನದಿಂದ ವಿವಿಧ ಬಗೆಯ ವ್ಯಾಪಾರಕ್ಕಾಗಿ ಕರ್ನಾಟಕಕ್ಕೆ ಬಂದು ನೆಲೆಸಿದವರು. ಆರಂಭದಲ್ಲಿ ಫ್ಯಾನ್ಸಿ ಅಂಗಡಿಗಳನ್ನು ಪ್ರಾರಂಭಿಸಿದರೂ ನಂತರ ಅನೇಕ ತರಹದ ಅಂಗಡಿಗಳನ್ನು ತೆರೆದು ಆ ಮೂಲಕ ವ್ಯಾಪಾರ ಶುರುಮಾಡಿದರು. ಒಬ್ಬರಿಂದ ಒಬ್ಬರಂತೆ ಹೀಗೆ ರಾಜಸ್ಥಾನದಿಂದ ಅನೇಕರು ವ್ಯಾಪಾರಕ್ಕಾಗಿ ಕರ್ನಾಟಕಕ್ಕೆ ಆಗಮಿಸಿದರು. ಕನ್ನಡಿಗರು ಇವರನ್ನು 'ಮಾರವಾಡಿ'ಗಳೆಂದು ಕರೆದರು. ಇಂದು ಕೊಪ್ಪಳ ಜಿಲ್ಲೆಯ ಬಹುತೇಕ ನಗರ ಮತ್ತು ಸಣ್ಣ–ಸಣ್ಣ ಪಟ್ಟಣಗಳಲ್ಲಿಯೂ ಸಹ ಇವರು ವ್ಯಾಪಾರದ ಅಂಗಡಿಗಳನ್ನು ತೆರೆದಿದ್ದಾರೆ. ಪಾನಿಪೂರಿಯಂತಹ ಸಣ್ಣ ಫುಟ್‌ಪಾತ್ ಅಂಗಡಿಯಿಂದ ಹಿಡಿದು ದೊಡ್ಡ–ದೊಡ್ಡ ಮಹಲುಗಳನ್ನು ತೆರೆದು ವ್ಯಾಪಾರ ಮಾಡುತ್ತಿರುವ ಮಾರವಾಡಿಗಳಿದ್ದಾರೆ. ಇವರು ಸುಮಾರು 30–40 ವರ್ಷಗಳಿಂದಲೂ ಇಲ್ಲಿ ವಿವಿಧ ಬಗೆಯ ವ್ಯಾಪಾರಗಳನ್ನು ಮಾಡುತ್ತಾ ಬದುಕುತ್ತಿದ್ದರೂ ಅದರಲ್ಲಿ ಬಹುತೇಕರಿಗೆ ಕನ್ನಡ ಭಾಷೆ ಬರುವುದಿಲ್ಲ. ಇದು ವಿಪರ್ಯಾಸವೇ ಸರಿ. ಹೀಗಾಗಿ ಕನ್ನಡಿಗರೇ ಅವರ ಭಾಷೆಯನ್ನು ಕಲಿತು ಅವರ ಜೊತೆಯಲ್ಲಿ ವ್ಯವಹಾರದ ಸಂಪರ್ಕ ಸಾಧಿಸಬೇಕಾದ ಅನಿವಾರ್ಯತೆ ಎದುರಾಗಿದೆ. ರಾಜಸ್ಥಾನಿಗಳು ಅರ್ಧಂಬರ್ಧ ಕನ್ನಡ ಮಾತನಾಡಿದರೆ ಇನ್ನು ಕನ್ನಡಿಗರೂ ಸಹ ಅರ್ಧಂಬರ್ಧ ರಾಜಸ್ಥಾನಿ ಭಾಷೆಯನ್ನು ಮಾತನಾಡಿ ವ್ಯಾಪಾರ ಮಾಡುವಂತಹ ಪರಿಸ್ಥಿತಿ ಕೊಪ್ಪಳದಲ್ಲಿ ನಿತ್ಯ ಕಾಣುವ ಪ್ರಸಂಗವಾಗಿದೆ. ಇದು ಕನ್ನಡ ಭಾಷೆಯ ಬೆಳವಣಿಗೆಗೆ ಅಡ್ಡಿಯನ್ನುಂಟುಮಾಡುತ್ತಿದೆ ಎಂಬುದು ಕನ್ನಡ ಭಾಷಾಭಿಮಾನಿಗಳ ಆಕ್ರೋಶವಾಗಿದೆ.

**ಗುಜರಾತಿ:**–ಇವರು ಉತ್ತರ ಭಾರತದ ಗುಜರಾತ ರಾಜ್ಯದಿಂದ ಬಂದರು. ಇವರು ಸಹ ರಾಜಸ್ಥಾನಿಗಳಂತೆ ವಿವಿಧ ವ್ಯಾಪಾರಕ್ಕಾಗಿ ಬಂದು ಕರ್ನಾಟಕದ ಬೇರೆ–ಬೇರೆ ಭಾಗಗಳಲ್ಲಿರುವಂತೆ ಕೊಪ್ಪಳ ಜಿಲ್ಲೆಯಲ್ಲಿಯೂ ವಾಸವಾಗಿರುವ ಮಾರುವಾಡಿಗಳು. ವಿವಿಧ ಬಗೆಯ ವ್ಯಾಪಾರ ಮಾಡುತ್ತಾ ಜಿಲ್ಲೆಯ ಅನೇಕ ಕಡೆಗಳಲ್ಲಿ ವಾಸವಾಗಿದ್ದಾರೆ.

ಇವರಲ್ಲಿ ಬಹುತೇಕರಿಗೆ ಕನ್ನಡ ಭಾಷೆ ಬರುವುದಿಲ್ಲ. ತಮ್ಮ ಮಕ್ಕಳಿಗೂ ಇಂಗ್ಲೀಷ್, ಹಿಂದಿ ಭಾಷೆಗಳನ್ನು ಕಲಿಸುತ್ತಾ ಕನ್ನಡವನ್ನು ಕಡೆಗಣಿಸುತ್ತಿದ್ದಾರೆಂದರೂ ತಪ್ಪಲ್ಲ. ಅನಿವಾರ್ಯವಾಗಿ ಕನ್ನಡಿಗರೇ ಅವರ ಭಾಷೆಯನ್ನು ಕಲಿತು ವ್ಯವಹಾರ ಮಾಡಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಹೀಗಾಗಿ ಇವರಿಂದಲೂ ಸಹ ಈ ಪರಿಸರದಲ್ಲಿ ಕನ್ನಡ ಕಡೆಗಣನೆಗೆ ಒಳಗಾಗಿದೆ.

**ಮರಾಠಿ:**–ಕರ್ನಾಟಕದ ಪಕ್ಕದ ರಾಜ್ಯ ಮಹಾರಾಷ್ಟ್ರದ ಮಾತೃ ಭಾಷೆ ಮರಾಠಿ. ಸುಮಾರು 16ನೇ ಶತಮಾನದ ನಂತರ ಮರಾಠರು ಅನೇಕ ದಾಳಿಗಳು ನಡೆಸಿದ ಬಗ್ಗೆ ಚರಿತ್ರೆಯಿಂದ ತಿಳಿದುಬರುತ್ತದೆ. ಮರಾಠ ದೊರೆ ಶಿವಾಜಿಯ ಆಡಳಿತದ ಕಾಲದಲ್ಲಿಯೂ ಸಹ ಕರ್ನಾಟಕದ ಮೇಲೆ ದಾಳಿಗಳು ನಡೆದಿವೆ. ಅವನು ತನ್ನ ರಾಜ್ಯವನ್ನು ಕರ್ನಾಟಕದಲ್ಲಿಯೂ ವಿಸ್ತರಿಸಿಕೊಂಡಿದ್ದ ಬಗ್ಗೆ ತಿಳಿದುಬರುತ್ತದೆ. ಮರಾಠ ಶಿವಾಜಿಯು ಕೊಪ್ಪಳದ ಪ್ರದೇಶದ ಮೇಲೆಯೂ ದಾಳಿ ಮಾಡಿದ್ದಾನೆ. ಹೀಗೆ ದಾಳಿಯ ನಂತರ ಕೊಪ್ಪಳ ಕೋಟೆ, ಬಹಾದ್ದೂರಬಂಡಿ ಕೋಟೆ ಮತ್ತು ಇರಕಲ್‌ಗಡ ಕೋಟೆಗಳನ್ನು ವಶಪಡಿಸಿಕೊಂಡನೆಂದು ಚರಿತ್ರೆಯಿಂದ ತಿಳಿದುಬರುತ್ತದೆ. ಅವನ ಆಡಳಿತದ ನಂತರ ಮತ್ತು ಅದಕ್ಕಿಂತ ಮೊದಲು ಅನೇಕ ಮರಾಠಿಗರು ವಿವಿಧ ಕಾರಣಗಳಿಗಾಗಿ ಕೊಪ್ಪಳ ಪ್ರದೇಶದಲ್ಲಿ ಬಂದು ನೆಲೆಸಿದ್ದಾರೆ. ಆದರೆ ಇವರು ರಾಜಸ್ಥಾನಿ ಮತ್ತು ಗುಜರಾತಿಗಳ ಮಾರುವಾಡಿಗಳಂತಲ್ಲವೆಂದರೂ ಅವರ ಮರಾಠಿ ಭಾಷೆಯ ಪ್ರಭಾವ ಕೊಪ್ಪಳ ಕನ್ನಡ ಭಾಷೆಯ ಮೇಲೆ ಆಗಿದೆ. ಅವರ ಮರಾಠಿಯ ಅನೇಕ ಶಬ್ದಗಳು ನಮ್ಮ ಕನ್ನಡ ಭಾಷೆಯಲ್ಲಿ ಸೇರಿಕೊಂಡಿವೆ. ಸೂಟಿ, ಚಾಡಿ, ಧಡಧಡಿ, ಜರಾ, ಗಾಡಿ, ಜಲ್ದಿ, ಪಾನಿ, ಗಡಬಡ, ರಗಡ, ದೌಡ, ಖರೆ ಮುಂತಾದ ಶಬ್ದಗಳನ್ನು ದಿನನಿತ್ಯ ಬಳಸುತ್ತಿದ್ದೇವೆ.

**ಇಂಗ್ಲೀಷ್:**–ಇಂದು ಇಂಗ್ಲೀಷ್ ಭಾಷೆ ಕಲಿಯದ ಮತ್ತು ಬಳಸದ ದೇಶಗಳನ್ನು ಹುಡುಕಬೇಕಿದೆ. ಅಂತಹ ರೀತಿಯಲ್ಲಿ ಇಂಗ್ಲೀಷ್ ಪ್ರಭಾವ ಬೀರಿದೆ. ಜಗತ್ತೇ ಇಂಗ್ಲೀಷ್‌ಮಯ ಆದಂತೆ ಕಾಣುತ್ತಿದೆ. ಇಡೀ ಪ್ರಪಂಚದ ತುಂಬೆಲ್ಲಾ ಇಂಗ್ಲೀಷ್ ಬಳಕೆಯಾಗುತ್ತಿದೆ. ಇಂಗ್ಲೀಷ್ ಕಲಿತರೆ ಅಥವಾ ಮಾತಾಡಿದರೆ ಪ್ರಬುದ್ಧರೆಂದು ಗೌರವ ಕೊಡುವ ಪರಿಸ್ಥಿತಿ ನಿಮಾರ್ಣವಾಗಿದೆ. ಇಂಗ್ಲೀಷ್ ಓದಬೇಕು, ಬರೆಯಬೇಕು, ಮಾತನಾಡಬೇಕು ಎಂಬ ಭ್ರಮಾ ಲೋಕದಲ್ಲಿ ಜನ ಬದುಕುವ ಸ್ಥಿತಿ ಎದುರಾಗಿದೆ. ಈ ಸ್ಥಿತಿ ಕೊಪ್ಪಳ ಪ್ರದೇಶಕ್ಕೇನೂ ಹೊರತಿಲ್ಲ. ಇಲ್ಲಿಯೂ ಅದೇ ಮಾದರಿಯಲ್ಲಿ ಬದುಕುತ್ತಿದ್ದೇವೆ. ಹೀಗಾಗಿ ಕೊಪ್ಪಳ ಜಿಲ್ಲೆಯಲ್ಲಿ ಇಂಗ್ಲೀಷ್ ಭಾಷೆಯ ಅನೇಕ ಅಲ್ಲ ನೂರಾರು, ಸಾವಿರಾರು ಶಬ್ದಗಳನ್ನು ಬಳಸುತ್ತೇವೆ. ಫೋನ್, ಮೋಬೈಲ್, ಸ್ಕೂಲ್, ಬಸ್, ಕೋರ್ಟ್, ವಾಚ್, ಟಿ, ಪೆನ್‌ಷನ್, ರೋಡ್, ಬೋರ್ಡ್, ಹೋಟೇಲ್, ರೂಂ, ಲೈಟ್, ನಂಬರ್, ಟಿಕೆಟ್, ಡ್ರೆಸ್, ಬ್ಯಾಂಕ್, ಡಾಕ್ಟರ್, ಟಿವಿ, ರೇಡಿಯೋ, ಪಾಸ್, ಫೇಲ್, ಶರ್ಟ್, ಪೋಲಿಸ್,

ಆಫೀಸ್, ಕಲರ್ ಹೀಗೆ ಅನೇಕ ಇಂಗ್ಲೀಷ್ ಶಬ್ದಗಳ ಮೂಲಕ ಕನ್ನಡ ವಾಕ್ಯ ರಚಿಸುತ್ತೇವೆ. ಒಂದು ಹತ್ತು ನಿಮಿಷದ ಮಾತಿನಲ್ಲಿ ಅದರಲ್ಲಿ ಬಳಸಿದ ಇಂಗ್ಲೀಷ್ ಪದಗಳಲ್ಲ ಕನ್ನಡ ಪದಗಳೆಷ್ಟು ಎಂದು ಲೆಕ್ಕ ಹಾಕಬೇಕಾಗಿದೆ.

ಹೀಗೆ ಕೊಪ್ಪಳ ಪ್ರದೇಶದ ಕನ್ನಡ ಭಾಷೆಯ ಮೇಲೆ ಪ್ರಭಾವ ಬೀರಿದ ಭಾಷೆಗಳನ್ನು ನಾವು ಕಾಣಬಹುದಾಗಿದೆ. ಈ ಮೇಲಿನ ಪ್ರಮುಖ ಭಾಷೆಗಳಲ್ಲದೇ ಕೊಂಕಣಿ, ಸಾವಜಿ ಪಟೇಗಾರ, ಲಮಾಣಿ ಭಾಷೆಗಳೂ ಸಹ ತನ್ನ ಪ್ರಭಾವ ಬೀರಿವೆ. ಇವು ಕೆಲವೇ ಕೆಲವು ಕುಟುಂಬಗಳು ಮಾತನಾಡುವ ಭಾಷೆಗಳಾಗಿದ್ದರೂ ಸಹ ಅಲ್ಪ-ಸ್ವಲ್ಪ ಪ್ರಭಾವ ಬೀರಿರುವುದು ಮಾತ್ರ ಸತ್ಯ. ಕೊಪ್ಪಳ ಪ್ರದೇಶದ ಅನೇಕರು ಅವರ ಭಾಷೆ ಕಲಿತು ಅವರೊಂದಿಗೆ ಸಂಪರ್ಕ ಸಾಧಿಸುತ್ತಿದ್ದಾರೆ. ಆದರೆ ಅದು ನಮ್ಮ ತಾಯಿ ಭಾಷೆ ಕನ್ನಡದ ಮೇಲೆ ಪರಿಣಾಮ ಬೀರುತ್ತಿದೆ ಎನ್ನುವುದು ಮಾತ್ರ ಗಮನಕ್ಕೆ ಬಾರದಿರುವುದು ವಿಷಾದದ ಸಂಗತಿ.

**ಆಕರ ಗ್ರಂಥಗಳು :-**


1) ಡಾ. ಕೆ. ಕೆಂಪೆಗೌಡ, ಸಾಮಾನ್ಯ ಭಾಷಾ ವಿಜ್ಞಾನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-1996
2) ಡಾ.ಎಂ.ಚಿದಾನಂದಮೂರ್ತಿ, ಭಾಷಾ ವಿಜ್ಞಾನ ಮತ್ತು ಛಂದಸ್ಸು, ಸ್ವಪ್ನಾ ಬುಕ್ ಹೌಸ್, ಬೆಂಗಳೂರು-2002
3) ಡಾ. ಸಂಗಮೇಶ ಸವದತ್ತಿಮಠ, ಕನ್ನಡ ಭಾಷಾ ವ್ಯಾಸಂಗ, (6ನೇ ಮುದ್ರಣ) ರೂಪದರ್ಶಿ ಪ್ರಕಾಶನ, ಕಲ್ಬುರ್ಗಿ-1998
4) ರಾ.ಯ. ಧಾರವಾಡಕರ , ಕನ್ನಡ ಭಾಷಾ ಶಾಸ್ತ್ರ (8ನೇ ಮುದ್ರಣ), ಗೀತಾ ಬುಕ್ ಹೌಸ್, ಮೈಸೂರು-1998


* * * * *

# ಕೊಪ್ಪಳ ತಾಲೂಕಿನ ವಿಮೋಚನಾ ಹೋರಾಟಗಾರರು

ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ಕೊಪ್ಪಳ ಬಹಳ ಮಹತ್ವ ಪಡೆದ ಪ್ರದೇಶವಾಗಿದೆ. ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳಲ್ಲಿ ಈ ಭಾಗದ ಪ್ರದೇಶಗಳ ಉಲ್ಲೇಖವಿರುವುದರಿಂದ ಈ ಭಾಗದ ಚರಿತ್ರೆ ಬಹು ದೂರದಿಂದ ಪ್ರಾರಂಭಗೊಂಡಿದ್ದು ಎಂದೆನಿಸುವುದು ಸಹಜ. ಇಂದ್ರಕೀಲ ಪರ್ವತ, ಕಿಷ್ಕಿಂದ, ಅಂಜನಾದ್ರಿ ಪರ್ವತ ಮುಂತಾದವುಗಳು ಇಲ್ಲಿನ ಪ್ರಾಚೀನ ಚರಿತ್ರೆಯನ್ನು ಸಾಕ್ಷಿಕರಿಸುತ್ತವೆ. ಅಶೋಕನ ಶಾಸನಗಳು ಈ ಭಾಗದಲ್ಲಿ ದೊರಕಿರುವುದರಿಂದ ಜಗತ್ತಿಗೆ ಧರ್ಮವನ್ನು ಬೋಧಿಸಿದ ನಾಡು ಇದು ಎಂದರೆ ತಪ್ಪಗಲಾರದು. ಈ ಭಾಗವನ್ನು ತಿರುಳ್ಗನ್ನಡ ನಾಡು ಎಂದು ಕರೆದಿರುವುದರಿಂದ ಈ ಭಾಗಕ್ಕೆ ಬಹಳ ವಿಶೇಷವಿದೆ. ಮಹಾಕವಿ ರನ್ನನು ಕೊಪ್ಪಳವನ್ನು ಕೊಪಣಾಚಲ ಹೆಸರಿನಿಂದ ತನ್ನ ಆದಿಪುರಾಣದಲ್ಲಿ ಉಲ್ಲೇಖಿಸಿದ್ದಾನೆ. ಪ್ರಾಚೀನ ಕಾಲದಲ್ಲಿ ಇದು ಜೈನ ಧರ್ಮದ ಕಾಶಿಯಾಗಿತ್ತು. ಇಲ್ಲಿ ಸುಮಾರು 772 ಬಸದಿಗಳಿದ್ದವೆಂದು ಪ್ರತೀತಿ ಇದೆ. ನಾಡಿನ ಅನೇಕ ಭಾಗಗಳಿಂದ ಈ ಭಾಗಕ್ಕೆ ಬಂದು ಧರ್ಮಾನುಸಾರ ಸಲ್ಲೇಖವ್ರತವನ್ನು ಆಚರಿಸುತ್ತಿದ್ದರು.

ಪ್ರಾಚೀನ ಕಾಲದಲ್ಲಿ ಈ ನೆಲದಲ್ಲಿ ಬೌದ್ಧ, ಜೈನ, ವೈಷ್ಣವ, ಶೈವ–ವೀರಶೈವ, ಇಸ್ಲಾಂ ಧರ್ಮಗಳು ಆಗಿ ಹೋಗಿವೆ. ಇಲ್ಲಿ ಅಗ್ರಹಾರ, ಘಟಿಕಾಲಯಗಳಿಂದ ಈ ಭಾಗ ತುಂಬಿಕೊಂಡಿತ್ತು ಎಂಬುದು ಇತಿಹಾಸದಿಂದ ತಿಳಿದುಬರುತ್ತದೆ. ಇಂತಹ ವಿಶೇಷವಾದ ಈ ಪ್ರದೇಶ ಅನೇಕ ಏಳು–ಬೀಳುಗಳನ್ನು ಕಂಡಿದೆ. ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ಬಹಳ ಮಹತ್ವ ಪಡೆದ ಈ ಭಾಗದಲ್ಲೂ ಅನೇಕ ಜನಪರ ಹೋರಾಟಗಳು ನಡೆದಿವೆ. ಬದುಕು ರೂಪಿಸಿಕೊಳ್ಳಲು ಹೋರಾಟಗಳು ಅನಿವಾರ್ಯವಾಗಿತ್ತು. ಬದುಕು ಎಷ್ಟು ಮುಖ್ಯವಾಗಿತ್ತೋ ಹೋರಾಟವೂ ಸಹ ಅಷ್ಟೇ ಸತ್ಯವಾಗಿತ್ತು.

ದೇಶದಲ್ಲಿ ಸ್ವಾತಂತ್ರ್ಯ, ಗಣರಾಜ್ಯ, ಏಕೀಕರಣ, ರೈತ ಚಳುವಳಿಗಳು ಮುಂತಾದ ಅನೇಕ ಹೋರಾಟಗಳನ್ನು ಈ ದೇಶ ಕಂಡಿದೆ. ಆದರೆ ಈ ಭಾಗದಲ್ಲಿ ಅಷ್ಟು ಹೋರಾಟಗಳು ಇಲ್ಲಿ ನಡೆದಿರುವುದಿಲ್ಲ. ಅಂತಹ ಹೋರಾಟಗಳ ಅವಶ್ಯಕತೆಯೂ ಇಲ್ಲಿ ಇರಲಿಲ್ಲ ಎನ್ನಬಹುದು. ಆದರೆ ಈ ಭಾಗದಲ್ಲಿ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ, ನಂತರದಲ್ಲಿ ವಿಮೋಚನೆಗಾಗಿ ಹೈದರಬಾದ ನಿಜಾಮರ ವಿರುದ್ಧ ಬಹುದೊಡ್ಡ ಹೋರಾಟಗಳೇ ನಡೆದಿವೆ. ಇತ್ತೀಚೆಗೆ ಸಂವಿಧಾನ 371ನೇ ಕಲಂ ಜಾರಿಗಾಗಿ ಹೋರಾಟ ಮತ್ತು ಕೆಲ ಸಣ್ಣ ಪುಟ್ಟ ರೈತ ಚಳುವಳಿಗಳು ಬಹಳ ಪರಿಣಾಮಕಾರಿಯಾಗಿ ನಡೆದು ಯಶಸ್ಸು ಕಂಡಿವೆ. ಅವುಗಳಲ್ಲಿ ಸ್ವಾತಂತ್ರ್ಯ ಮತ್ತು ವಿಮೋಚನಾ ಹೋರಾಟಗಳು

ಬಹಳ ಮಹತ್ವಪೂರ್ಣ ಪಡೆದ ಚಳುವಳಿಗಳು ಎಂದರೆ ತಪ್ಪಾಗಲಾರದು. ಸ್ವಾತಂತ್ರ್ಯಕ್ಕಾಗಿ ಹೋರಾಟ ಮತ್ತು ವಿಮೋಚನಾ ಚಳುವಳಿಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ವಿಮೋಚನಾ ಚಳುವಳಿಯು ಸ್ವಾತಂತ್ರ್ಯದ ನಂತರ ಮುಂದುವರೆದ ಎರಡನೇ ಹಂತದ ಹೋರಾಟ ಎನ್ನಬಹುದು. ಒಟ್ಟಿನಲ್ಲಿ ಈ ಎರಡೂ ಹೋರಾಟಗಳು ಬಿಡುಗಡೆಗಾಗಿ ನಡೆದ ಬಹುದೊಡ್ಡ ಹೋರಾಟಗಳು. ಸ್ವಾತಂತ್ರ್ಯ, ವಿಮೋಚನೆ, ಬಿಡುಗಡೆ, ಮುಕ್ತಿ ಇತ್ಯಾದಿ ಪರ್ಯಾಯ ಪದಗಳನ್ನು ಒಂದೇ ಅರ್ಥದಲ್ಲಿ ಪರಿಭಾವಿಸುವುದರಿಂದ ಸ್ವಾತಂತ್ರ್ಯ ಹೋರಾಟ ಮತ್ತು ವಿಮೋಚನಾ ಚಳುವಳಿಗಳು ಒಂದೇ ಅರ್ಥದಿಂದ ನೋಡುವುದು ಒಳಿತು. ಒಟ್ಟಿನಲ್ಲಿ ಆ ಹೋರಾಟಗಳು ಈ ಭಾಗವನ್ನು ಮುಕ್ತಿಗೊಳಿಸುವುದಕ್ಕಾಗಿ ಬಹಳ ಪರಿಣಾಮಕಾರಿಯಾದ ಹೋರಾಟಗಳಾಗಿವೆ.

ಭಾರತ ದೇಶ 1947ರ ಆಗಷ್ಟ್–15ರಂದು ಬ್ರಿಟಿಷರ ಮುಷ್ಠಿಯಿಂದ ಮುಕ್ತಿ ಪಡೆದು ತ್ರಿವರ್ಣ ಧ್ವಜ ಹಾರಿಸಿದರೂ; ಹೈದರಾಬಾದ–ಕರ್ನಾಟಕ ಪ್ರಾಂತ ಮಾತ್ರ ನಿಜಾಮರ ದಾಸ್ಯದಿಂದ ಬಿಡುಗಡೆಗೊಳ್ಳಲಿಲ್ಲ. ಅದಕ್ಕೆ ಕಾರಣ ಈ ಹೈದರಾಬಾದ–ಕರ್ನಾಟಕ ಪ್ರಾಂತವನ್ನು ತನ್ನ ಕಪಿ ಮುಷ್ಠಿಯಲ್ಲಿ ಹಿಡಿದುಕೊಂಡಿದ್ದ ಹೈದರಾಬಾದ ನಿಜಾಮರು ಸ್ವಾತಂತ್ರ್ಯ ಕೊಡಲು ಒಪ್ಪದಿರುವುದು. ಈ ಪ್ರಾಂತ್ಯವನ್ನು ನಾವೇ ಸ್ವತಂತ್ರವಾಗಿ ಆಳುತ್ತೇವೆ, ಇಲ್ಲವೆ ಇದನ್ನು ಪಾಕಿಸ್ತಾನಕ್ಕೆ ಸೇರಿಸುತ್ತೇವೆ. ಇದನ್ನು ಭಾರತ ರಾಷ್ಟ್ರದೊಳಗೆ ಸೇರಿಸಲು ಬಿಡುವುದಿಲ್ಲ ಎಂಬ ಕಾರಣಕ್ಕಾಗಿ ಈ ಪ್ರಾಂತದಲ್ಲಿ ಬಹುದೊಡ್ಡ ಸಮಸ್ಯೆಯಾಗಿ ಉದ್ಭವವಾಯಿತು.

ಭಾರತ ದೇಶವು ಹಲವು ಹೋರಾಟಗಳನ್ನು ಕಂಡಿದೆ. ಸ್ವಾತಂತ್ರ್ಯ ಚಳುವಳಿಗಳಂತಹ ಪ್ರಮುಖ ಹೋರಾಟಗಳ ಜೊತೆಗೆ, ಗಣರಾಜ್ಯ, ಏಕೀಕರಣ, ಗಡಿ ಸಂರಕ್ಷಣೆ, ರೈತ ಚಳುವಳಿ ಮುಂತಾದ ಹೋರಾಟಗಳು ಈ ದೇಶದಲ್ಲಿ ಆಗಿ ಹೋಗಿವೆ. ದೇಶದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿದರೆ; ಉಳಿದ ಬಹುತೇಕ ಹೋರಾಟಗಳು ದೇಶದ ಒಳಗಡೆಯೇ ನಡೆದ ಆಂತರಿಕ ಚಳುವಳಿಗಳಾಗಿವೆ. ದೇಶದಲ್ಲಿ ನಡೆದ ಯಾವುದೇ ಹೋರಾಟಗಳಿರಬಹುದು, ಅವು ಸುಲಭವಾಗಿ ಮುಕ್ತಾಯವಾದವುಗಳಲ್ಲ. ಅವು ತಾರಕಕ್ಕೆ ಮುಟ್ಟಿ ಸಾವು–ನೋವಿನೊಂದಿಗೆ ಅಂತ್ಯವಾದವುಗಳಾಗಿವೆ. ಈ ಹೋರಾಟಗಳಲ್ಲಿ ಅನೇಕ ಮಹನೀಯರು ತಮ್ಮ ಪ್ರಾಣದ ಹಂಗನ್ನು ತೊರೆದು ಹೋರಾಟ ಮಾಡಿದ್ದಾರೆ. ತನು ಮತ್ತು ಮನಪೂರ್ವಕವಾಗಿ ಸಮರ್ಪಣಾ ಮನೋಭಾವದಿಂದ ಹೋರಾಡಿ ತಮ್ಮ ಪ್ರಾಣಾರ್ಪಣೆ ಮಾಡಿ ಈ ದೇಶಕ್ಕೆ ಮುಕ್ತಿ ಕೊಡಿಸಿದ್ದಾರೆ. ಅವರ ಹೋರಾಟದ ಪ್ರತಿಫಲದಿಂದಲೇ ಇಂದು ನಾವು ಸ್ವಾತಂತ್ರ್ಯದಿಂದ ಬದುಕುತ್ತಿದ್ದೇವೆ. ದೇಶದ ನಾನಾ ಭಾಗಗಳಲ್ಲಿ ಸ್ವಾತಂತ್ರ್ಯಕ್ಕಾಗಿ

ಅನೇಕ ರೀತಿಯಲ್ಲಿ ಚಳುವಳಿಗಳನ್ನು ನಡೆಸಿದರು. ಇದಕ್ಕೆ ಹೈದರಾಬಾದ-ಕರ್ನಾಟಕ ಪ್ರಾಂತವೇನೂ ಹೊರತಾಗಿರಲಿಲ್ಲ. ದೇಶದ ಇತರ ಭಾಗಗಳಂತೆ ಈ ಪ್ರಾಂತಗಳಲ್ಲಿಯೂ ಸಹ ಅನೇಕ ಮಹನೀಯರು ಸ್ವಾತಂತ್ರ್ಯ ಮತ್ತು ವಿಮೋಚನಾ ಚಳುವಳಿಗಳಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದು ಬಹು ದೊಡ್ಡ ಇತಿಹಾಸವೇ ಇದೆ.

ಹೈದರಾಬಾದ-ಕರ್ನಾಟಕ ಪ್ರಾಂತವೂ ಸಹ ದೇಶದಂತೆ ಅನೇಕ ಹೋರಾಟಗಳನ್ನು ಮಾಡಿದೆ. ದೇಶದ ಸ್ವಾತಂತ್ರ್ಯಕ್ಕಾಗಿ ಬ್ರಿಟೀಷರ ವಿರುದ್ಧ ಹೋರಾಟವನ್ನು ಇಲ್ಲಿನ ಜನತೆ ಮಾಡಿದ್ದಾರೆ. ಅದರ ಪ್ರತಿಫಲವಾಗಿ ದೇಶ ಬ್ರಿಟಿಷರ ದಾಸ್ಯದಿಂದ ಮುಕ್ತಿ ಪಡೆಯಿತು. ಆದರೆ ಈ ಹೈದರಾಬಾದ-ಕರ್ನಾಟಕ ಪ್ರಾಂತ ಮಾತ್ರ ದಾಸ್ಯದಿಂದ ವಿಮೋಚನೆಗೊಳ್ಳಲಿಲ್ಲ. ಈ ಪ್ರಾಂತವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿದ್ದ ನವಾಬ್ ಮಿರ್ ಉಸ್ಮಾನ್ ಅಲಿಖಾನ್ ಬಹಾದ್ದೂರು (ಆಡಳಿತದ ಕಾಲ 1911-1948) ವಿರುದ್ಧ ಈ ಪ್ರಾಂತದ ಜನತೆ ಮತ್ತೊಂದು ಹೋರಾಟವನ್ನು ಮಾಡಬೇಕಾಯಿತು. ಹೀಗಾಗಿ ಈ ಹೈದರಾಬಾದ-ಕರ್ನಾಟಕ ಪ್ರಾಂತವು ಪ್ರಮುಖವಾಗಿ ಎರಡು ಚಳುವಳಿಗಳನ್ನು ಮಾಡಬೇಕಾಯಿತು. ಹೈದರಾಬಾದ-ಕರ್ನಾಟಕದ ಅನೇಕ ಭಾಗಗಳಲ್ಲಿ ನಡೆದ ಈ ಎರಡೂ ಚಳುವಳಿಗಳಲ್ಲಿ ಅನೇಕ ಹೋರಾಟಗಾರರು ಭಾಗವಹಿದ್ದಾರೆ. ಈ ಹೋರಾಟಗಳಲ್ಲಿ ಅನೇಕರು ಸ್ವಯಂ ಪ್ರೇರೆಪಿತರಾಗಿ ಹೋರಾಟ ಮಾಡಿದ್ದಾರೆ. ವಿಶೇಷವಾಗಿ ಈ ಹೈದರಾಬಾದ ಕರ್ನಾಟಕ ಭಾಗದಲ್ಲಿ ಹೋರಾಟಗಾರರೂ ಸ್ವಾತಂತ್ರ್ಯ ಮತ್ತು ವಿಮೋಚನಾ ಎರಡೂ ಚಳುವಳಿಗಳಲ್ಲಿ ಭಾಗವಹಿಸಿದ್ದಾರೆ. ಏಕೆಂದರೆ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕರೆ ಈ ಭಾಗದಲ್ಲಿ ಅದು ದೊರೆಯದಿದ್ದರಿಂದ ಅನಿವಾರ್ಯವಾಗಿ ಈ ಭಾಗವನ್ನು ಹಿಡಿತದಲ್ಲಿಟ್ಟುಕೊಂಡಿದ್ದ ನಿಜಾಮರ ವಿರುದ್ಧ ಮತ್ತೆ ಹೋರಾಟವನ್ನು ಈ ಭಾಗದ ವಿಮೋಚನೆಗಾಗಿ ಮುಂದುವರೆಸಬೇಕಾಯಿತು. ಹೀಗಾಗಿ ಇಲ್ಲಿ ಹೋರಾಟಗಾರರನ್ನು ಸ್ವಾತಂತ್ರ್ಯ ಹೋರಾಟಗಾರರು ಮತ್ತು ವಿಮೋಚನಾ ಹೋರಾಟಗಾರರೂ ಎಂದು ಪ್ರತ್ಯೇಕಿಸುವುದು ಕಷ್ಟಸಾಧ್ಯ. ಈಗಾಗಲೇ ವಿವರಿಸಿದಂತೆ ವಿಮೋಚನೆ ಸ್ವಾತಂತ್ರ್ಯದ ಮುಂದುವರೆದ ಹೋರಾಟ ಎನ್ನಬಹುದು. ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ಕೆಲ ಹೋರಾಟಗಾರರು ಸ್ವಾತಂತ್ರ್ಯ ಪೂರ್ವದಲ್ಲಿ ಮರಣ ಹೊಂದಿದರೆ, ಕೆಲವರು ಸ್ವಾತಂತ್ರ್ಯ ನಂತರದಲ್ಲಿ ಮರಣ ಹೊಂದಿದ್ದಾರೆ. ಇನ್ನೂ ಕೆಲವು ಹೋರಾಟಗಾರರು ಕೇವಲ ಹೈದರಾಬಾದ-ಕರ್ನಾಟಕ ಪ್ರಾಂತದ ವಿಮೋಚನೆಗಾಗಿ ಮಾತ್ರ ಹೋರಾಟ ಮಾಡಿದ್ದಾರೆ. ಹಾಗಾಗಿ ಅವರೆಲ್ಲರನ್ನೂ ನಾನಿಲ್ಲಿ ಒಂದೇ ರೀತಿಯಲ್ಲಿ ನೋಡುವ ಪ್ರಯತ್ನವನ್ನು ಮಾಡಿದ್ದೇನೆ.

1857ರಲ್ಲಿ ಮುಂಡರಗಿ ಭೀಮರಾಯನು ಬ್ರಿಟಿಷರ ವಿರುದ್ಧ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಿದ್ಧನಾದನು. ಬ್ರಿಟಿಷರ ದುರಾಡಳಿತ ವಿರುದ್ಧ ತನ್ನ ಸಮಾನ

ಮನಸ್ಕರೊಂದಿಗೆ ಒಟ್ಟುಗೂಡಿ ದಂಗೆ ಎದ್ದನು. ಮುಂಡರಗಿ ಭೀಮರಾಯನು ಬಳ್ಳಾರಿಯಲ್ಲಿ ಮಾಮಲೆಗಾರನಾಗಿ ಸೇವೆ ಸಲ್ಲಿಸುತ್ತಿದ್ದ. ಕೆಲ ಅಧಿಕಾರಿಗಳು ಇವನ ವಿರುದ್ಧ ಆರೋಪ ಹೊರಿಸಿ ಶಿಕ್ಷಗೆ ಗುರಿಪಡಿಸಿದರಿಂದ ತನ್ನ ನೌಕರಿಗೆ ರಾಜೀನಾಮೆ ನೀಡಿ ಸ್ವತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಟಕ್ಕೆ ಇಳಿದರು. ಇವರ ಗೆಳೆಯರಾದ ಹೆಮ್ಮಗಿ ಕೆಂಚನಗೌಡ, ಡಂಬಳದ ದೇಸಾಯಿ, ಗೋವಿನಕೊಪ್ಪದ ದೇಸಾಯಿ ಮುಂತಾದವರು ಗುಪ್ತವಾಗಿ ರೂಪಿಸುತ್ತಿದ್ದ ಹೋರಾಟದ ತಂತ್ರಗಳನ್ನು ಧಾರವಾಡದ ಕಲೆಕ್ಟರ್ ತಿಳಿದುಕೊಂಡನು. ಭೀಮರಾಯನನ್ನು ಬಂಧಿಸಬೇಕೆಂಬ ಕಲೆಕ್ಟರ್ ತಂತ್ರವನ್ನು ತಿಳಿದು ಮುಂಡರಗಿ ಭೀಮರಾಯ ಭೂಗತನಾದನು. ನಂತರದ ಹೋರಾಟದಲ್ಲಿ ಮುಂಡರಗಿ ಭೀಮರಾಯರ ತಂಡದ ಸೈನ್ಯವು ಗದಗ, ಕೊಪ್ಪಳ ಮತ್ತು ಕುಮ್ಮಟದುರ್ಗದಲ್ಲಿ ಬೀಡುಬಿಟ್ಟಿತು. ಈ ಸುದ್ದಿಯಿಂದ ಎಚ್ಚೆತ್ತುಕೊಂಡ ಬ್ರಿಟಿಷರು ಸೇನಾಪಡೆಯನ್ನು ಕರೆಸಿಕೊಂಡು ಕೊಪ್ಪಳ ಕೋಟೆಗೆ ಸುತ್ತುವರೆಯಿತು. ಬ್ರಿಟಿಷ್ ಮೇಜರ್ ಹ್ಯೂಜನು ಭೀಮರಾಯನಿಗೆ ಶರಣಾಗುವಂತೆ ತಿಳಿಸಿದನು. ಅದನ್ನು ದಿಕ್ಕರಿಸಿ ಹೋರಾಟ ಮಾಡುತ್ತಾ ಶ್ರೀ ಮುಂಡರಗಿ ಭೀಮರಾಯರು ಮತ್ತು ಹೆಮ್ಮಗಿ ಕೆಂಚನಗೌಡ್ರ ವೀರಮರಣವನ್ನಪ್ಪಿದರು.

ಹೈದರಾಬಾದ–ಕರ್ನಾಟಕದಲ್ಲಿ ಭೀಮರಾಯನು ಮಾಡಿದ ಹೋರಾಟದಿಂದ ಎಚ್ಚೆತ್ತುಕೊಂಡ ನಿಜಾಮರು ಮುಂದಿನ ಹೋರಾಟಗಳಿಗೆ ಕಡಿವಾಣ ಹಾಕಿ ಹೋರಾಟಗಾರರನ್ನು ಗುಂಡಿಕ್ಕಿ ಕೊಲ್ಲುವಂತೆ ಆದೇಶ ಹೊರಡಿಸಿದರು. ಇದು ಬ್ರಿಟಿಷ ಪ್ರಭುತ್ವಕ್ಕೆ ಖುಷಿ ಕೊಟ್ಟಿತು. ಬ್ರಿಟನ್ ರಾಣಿ 1859ರ ಒಪ್ಪಂದದಂತೆ ಕಂಪನಿ ಸರಕಾರವು ನಿಜಾಮರಗೆ ದೋ–ಅಬ್ ಪ್ರದೇಶವನ್ನು (ಹೈದರಾಬಾದ–ಕರ್ನಾಟಕ ಪ್ರಾಂತದ) ಇನಾಮು ರೂಪದಲ್ಲಿ ನೀಡಿದರು. ಅಲ್ಲಿಂದ ನಿಜಾಮರ ಆಡಳಿತ ಜೊತೆಗೆ ದಬ್ಬಾಳಿಕೆಗಳೂ ತಾರಕಕ್ಕೆ ಮುಟ್ಟಿದವು. ಈ ಭಾಗದಲ್ಲಿ ಬ್ರಿಟಿಷರ ಆಡಳಿತದ ದಬ್ಬಾಳಿಕೆಗಿಂತ ಇಲ್ಲಿನ ನಿಜಾಮ ಮನೆತನ ಮತ್ತವರ ಅನುಯಾಯಿಗಳಿಂದ ಘನ ಘೋರವಾದ ದಬ್ಬಾಳಿಕೆಗಳು ನಡೆದವು. ಭಾಷಾ ದಬ್ಬಾಳಿಕೆ, ಧಾರ್ಮಿಕ ದಬ್ಬಾಳಿಕೆಗಳನ್ನು ಇಲ್ಲಿನ ಜನ ಸಹಿಸಲಾರದಷ್ಟು ಹಿಂಸೆಗಳು ನಡೆದವು. ಕೊಲೆ–ಸುಲಿಗೆ, ಸ್ತ್ರೀಯರ ಮಾನ ಅಪಹರಣದಂತಹ ಸಹಿಸಲಾರದ ಘಟನಾವಳಿಗಳಿಂದ ಈ ಭಾಗದ ಜನರು ತತ್ತರಿಸಿ ಹೋಗಿದ್ದರು. ರಜಾಕಾರರ–ಪಠಾಣರ ಹಾಗೂ ನಿಜಾಮ ಪೊಲೀಸರ ದೊಂಬಿ, ಲೂಟಿ, ಕೊಲೆ, ಮಹಿಳೆಯರ ಮಾನಹರಣ, ಮುಗ್ಧ ಪ್ರಜೆಗಳ ಮೇಲಿನ ದರ್ಪ ದೌರ್ಜನ್ಯಗಳು ನಡೆದವು. ನಿಜಾಮ ಸರಕಾರವು ರೈತನು ಬೆಳೆದ ಬೆಳೆಗೆ ಹೊಲಕ್ಕೆ ಇಂತಿಷ್ಟು ಎಂದು ಯಾವುದೇ ವೈಜ್ಞಾನಿಕ ಕ್ರಮವಿಲ್ಲದೆ ಲೇವಿ ವಸೂಲಿ ಮಾಡುತ್ತಿದ್ದರು. ಎಷ್ಟೋ ಸಂದರ್ಭಗಳಲ್ಲಿ ಬೆಳೆದ ಎಲ್ಲಾ ಬೆಳೆಯನ್ನೂ ನಿಜಾಮರ ಸರಕಾರಕ್ಕೆ

ಒಪ್ಪಿಸಬೇಕಾದ ಸಂದರ್ಭಗಳು ಬರುತ್ತಿದ್ದವು. ಇದರಿಂದ ರೈತರಿಗೆ ತುಂಬಾ ತೊಂದರೆಯಾಗುತ್ತಿತ್ತು. ಊಳಿಗಮಾನ್ಯ ಸಂಸ್ಕೃತಿಯನ್ನು ದಟ್ಟವಾಗಿ ಮೈಗೂಡಿಸಿಕೊಂಡ ಈ ಸಂಸ್ಥಾನಿಕರು ಸರ್ವಾಧಿಕಾರಿಗಳಂತೆ ಆಡಳಿತ ನಡೆಸುತ್ತಿದ್ದರು. ಪ್ರಜೆಗಳ ಶ್ರಮದ ಮೇಲೆ ಅವರು ಭೋಗದ ಜೀವನ ನಡೆಸುತ್ತಿದ್ದರು.

ಒಂದು ರೀತಿಯಲ್ಲಿ ಹೈದರಾಬಾದ ಸಂಸ್ಥಾನದಲ್ಲಿ ನಡೆಯುತ್ತಿದ್ದ ಆಡಳಿತ ವ್ಯವಸ್ಥೆಯನ್ನು **"ದ್ವಿ ಸರಕಾರ ಪದ್ಧತಿ"** ಇತ್ತೆಂದು ಹೇಳಬಹುದು. ನೇರವಾಗಿ ನಿಜಾಮರ ಆಡಳಿತ ಒಂದು ಕಡೆಯಾದರೆ, ನಿಜಾಮರ ಮೂಲಕ ಪರೋಕ್ಷವಾಗಿ ಆಂಗ್ಲರ ಆಡಳಿತ ಇನ್ನೊಂದು ಕಡೆ. ಇವೆರಡರ ದಬ್ಬಾಳಿಕೆಗಳ ನಡುವೆ ಈ ಭಾಗದ ಜನತೆಗೆ ಬದುಕುವುದೇ ಕಷ್ಟಕರವಾಗಿತ್ತು. ಈ ಭಾಗದಲ್ಲಿ ಕನ್ನಡ, ತೆಲುಗು ಭಾಷೆ ಮಾತನಾಡುವವರ ಸಂಖ್ಯೆ ಹೆಚ್ಚಾಗಿದ್ದರೂ ಕಡಿಮೆ ಜನಸಂಖ್ಯೆಯಲ್ಲಿ ಮಾತನಾಡುವ ಉರ್ದು ಭಾಷೆಯನ್ನು ಸಂಸ್ಥಾನದ ಆಡಳಿತ ಭಾಷೆಯನ್ನಾಗಿ ನಿಜಾಮ ಸರಕಾರ ಘೋಷಿಸಿತ್ತು. ಎಲ್ಲಾ ದಬ್ಬಾಳಿಕೆಗಳಿಂದ ಈ ಭಾಗದ ಜನರು ಬದುಕುವುದೇ ಕಷ್ಟವಾಯಿತು.

ಕಾಂಗ್ರೇಸ್ಸು ಹೈದರಾಬಾದ ಪ್ರದೇಶದ ಮೊಗಲಾಯಿ ಸರಹದ್ದಿನ ಊರುಗಳಲ್ಲಿ ವಿಮೋಚನಾ ಶಿಬಿರಗಳನ್ನು ತೆರೆದು ಹೋರಾಟ ಮಾಡಲು ಪ್ರಾರಂಭಿಸಿದರು. ದುಧನಿ, ಸೊಲ್ಲಾಪೂರ, ಸಿಂಧಗಿ, ಕಕ್ಕಳಮೇಲಿ, ಕೇಸರ ಜವಳಗಾ, ಹುಟಗಿ, ಮೈಂದರ್ಗಿ, ವಾಗ್ದರಿ, ಗೌಡಗಾಂವ, ಮದನ ಹಿಪ್ಪರಗಿ, ಮುಂಡರಗಿ, ಗಜೇಂದ್ರಗಡ, ಇಟಗಿ, ಮಂತ್ರಾಲಯ, ಆದವಾನಿ, ಸಾಲೋಟಗಿ, ಗುಡ್ಡದ ಮಲ್ಲಾಪುರ, ಹೆಸರೂರು, ಬರದೂರು, ಹಳ್ಳಿಕೇರಿ, ಸೂಡಿ, ತಿಮ್ಮಾಪೂರ, ನರೇಗಲ್, ನಿಡಗುಂದಿ, ಕೊಪ್ಪ, ತಂಬ್ರಳ್ಳಿ, ಹಂಪಸಾಗರ, ಬಾಚಿಕೊಂಡನಹಳ್ಳಿ, ಇಲಕಲ್ ಹೀಗೆ ಹತ್ತಾರು ಊರುಗಳಲ್ಲಿ ಶಿಬಿರಗಳನ್ನು ತೆರೆದು ಈ ಒಂದೊಂದು ಶಿಬಿರಗಳಿಗೆ ಒಬ್ಬೊಬ್ಬ ನುರಿತ ಹಿರಿಯರನ್ನು ಶಿಬಿರಾಧಿಕಾರಿಗಳನ್ನಾಗಿ ನೇಮಿಸುತ್ತಿದ್ದರು. ಆ ಮೂಲಕ ವ್ಯವಸ್ಥಿತವಾಗಿ ಹೋರಾಟ ಮಾಡಲಾಗುತ್ತಿತ್ತು. ಈ ಶಿಬಿರಗಳಲ್ಲಿ ಹೋರಾಟದ ತರಬೇತಿಯನ್ನು ನೀಡಲಾಗುತ್ತಿತ್ತು. ಈ ಶಿಬಿರಗಳ ಪೈಕಿ ಕೊಪ್ಪಳ ಭಾಗಕ್ಕೆ ಹತ್ತಿರದ ಮುಂಡರಗಿ ಮತ್ತು ಗಜೇಂದ್ರಗಡ ಶಿಬಿರಗಳಲ್ಲಿ ಕೊಪ್ಪಳದ ಅನೇಕ ಹೋರಾಟಗಾರರು ಭಾಗವಹಿಸುತ್ತಿದ್ದರು. ಅಲ್ಲಿ ತರಬೇತಿಯನ್ನು ಪಡೆದು ಹೋರಾಟಕ್ಕೆ ಧುಮುಕುತ್ತಿದ್ದರು.

ಹೈದರಾಬಾದ ಕರ್ನಾಟಕದ ಭಾಗದಲ್ಲಿ ಅನೇಕ ಹೋರಾಟಗಾರರು ತನು–ಮನದಿಂದ ಹೋರಾಟ ಮಾಡಿದ್ದಾರೆ. ಅದರಂತೆ ಕೊಪ್ಪಳ ಜಿಲ್ಲೆಯಲ್ಲಿ ಅನೇಕ ಹಿರಿಯರು ಸ್ವಾತಂತ್ರ್ಯ ಮತ್ತು ವಿಮೋಚನೆಗಾಗಿ ಹೋರಾಟ ಮಾಡಿದ್ದಾರೆ. ಮುಂಡರಗಿ ಭೀಮರಾಯ, ಶಿವಮೂರ್ತಿಸ್ವಾಮಿ ಅಳವಂಡಿ, ಸ್ವಾಮಿ ರಮಾನಂದ ತೀರ್ಥ,

ವೀರಭದ್ರಪ್ಪ ಶಿರೂರು, ಲಕ್ಷ್ಮಣಚಾರ್ಯ ಅಗ್ನಿಹೋತ್ರಿ, ಪುಂಡಲೀಕಪ್ಪ ಜ್ಞಾನಮೋತೆ, ಸೋಮಪ್ಪ ಡಂಬಳ, ಶೋಯೇಬುಲ್ಲಾಖಾನ ಮುಂತಾದ ಹಿರಿಯರು ಜಿಲ್ಲೆಯಲ್ಲಿ ಬಿಡುಗಡೆಗಾಗಿ ಹೋರಾಟ ಮಾಡಿದ್ದಾರೆ. ಅದರಂತೆ ಕೊಪ್ಪಳ ತಾಲೂಕಿನಲ್ಲಿ ನಡೆದ ಹೋರಾಟದ ಹೋರಾಟಗಾರರನ್ನು ನೋಡಿದಾಗ ಅನೇಕ ಮಹನೀಯರು ನಮಗೆ ದೊರೆಯುತ್ತಾರೆ. ನಾನು ವಿವಿಧ ಮೂಲಗಳಿಂದ ಸಂಗ್ರಹಿಸಿದ ಹೋರಾಟಗಾರರ ಪಟ್ಟಿಯನ್ನು ಈ ರೀತಿಯಾಗಿ ನೋಡಬಹುದು. ಚನ್ನಬಸನಗೌಡ ತಂದೆ ಬಸನಗೌಡ ಅಲ್ಲಿಪುರ ಕವಲೂರು, ಬಂಡಾಚಾರ್ಯ ತಂದೆ ವೆಂಕಟರಮಣಚಾರ್ಯ ಪುರೋಹಿತ ಕೊಪ್ಪಳ, ವೀರಭದ್ರಪ್ಪ ತಂದೆ ಶಿವಪ್ಪ ಮತ್ತೂರ ಬೆಟಗೇರಿ, ಆನಾಳಪ್ಪ ತಂದೆ ವೆಂಕಟರಡ್ಡಿ ಹೊಳೆಯನ್ನವರ ಕಾತರಕಿ–ಗುಡ್ಲಾನೂರು, ರಾಮಕೃಷ್ಣಭಟ್ ತಂದೆ ಭೀಮಭಟ್ ಗುಡಿ ಕೊಪ್ಪಳ, ರಾಮಚಂದ್ರಗೌಡ ತಂದೆ ಗುರುನಾಥಗೌಡ ಹಟಗಾರಪೇಟೆ ಕೊಪ್ಪಳ, ನಾರಯಣಮೂರ್ತಿ ತಂದೆ ಬಿಷ್ಟಪ್ಪ ಕೊಪ್ಪಳ, ಲಕ್ಷ್ಮಣಭಟ್ ತಂದೆ ಭೀಮಭಟ್ ಗುಡಿ ಕೊಪ್ಪಳ, ಸಿದ್ದಲಿಂಗಪ್ಪ ತಂದೆ ಅಡಿವೆಪ್ಪ ಶೆಟ್ಟರ ಅಳವಂಡಿ, ಯಲ್ಲಪ್ಪ ತಂದೆ ಬಸಪ್ಪ ಮಾದಿನೂರು ಹಿರೇಸಿಂಧೋಗಿ, ಜಯಾಚಾರ್ಯಾ ತಂದೆ ರಾಮಾಚಾರ್ಯಾ ನರಗುಂದ ಕೊಪ್ಪಳ, ವಿರುಪಾಕ್ಷಪ್ಪ ತಂದೆ ಸೊಲಬಪ್ಪ ಕಿನ್ನಾಳ, ತುಳಜರಾವ್ ತಂದೆ ಭೀಮರಾವ್ ಮುರಡಿ, ಎಂ.ವಿರುಪಾಕ್ಷಪ್ಪ ತಂದೆ ಶಿವಪ್ಪ ವಕೀಲರು ಕೊಪ್ಪಳ, ಸಿದ್ದಪ್ಪ ತಂದೆ ಲಿಂಗಪ್ಪ ಮುರಲಿ ಹಟಗಾರಪೇಟೆ ಕೊಪ್ಪಳ, ಕೃಷ್ಣರಾವ್ ತಂದೆ ಕೃಷ್ಣರಾವ್ ದೇಸಾಯಿ ಕೊಪ್ಪಳ, ಗಂಗಾಧರಯ್ಯ ತಂದೆ ಶಿವಪ್ಪ ಹಿರೇಮಠ ಕೊಪ್ಪಳ, ಶರಣಯ್ಯ ತಂದೆ ಬಸಲಿಂಗಯ್ಯ ನಂದಾಲಿ ಅಳವಂಡಿ, ಜೆ.ಪಿ ಹಾದಿಮನಿ ಕಿನ್ನಾಳ, ಅನಂತಚಾರ್ಯಾ ತಂದೆ ವೆಂಕೋಬಾಚಾರ್ಯಾ ಕೊಪ್ಪಳ, ಕೃಷ್ಣಪ್ಪ ತಂದೆ ಕಂದಪ್ಪ ದರ್ಜಿ ಕೊಪ್ಪಳ, ದೇವಪ್ಪ ತಂದೆ ಶಿವಲಿಂಗಪ್ಪ ಡಂಬಳ ಕೊಪ್ಪಳ, ಶಿವಪ್ಪ ತಂದೆ ಮರಿವೀರಪ್ಪ ಬಂಗಾರ ಕೊಪ್ಪಳ, ನಾಗಪ್ಪ ತಂದೆ ಅಡಿವೆಪ್ಪ ಬಾಗಲಿ ಕೊಪ್ಪಳ, ರಾಮಾರಾವ್ ತಂದೆ ಕೃಷ್ಣರಾವ್ ಕುಲಕರ್ಣಿ ಕೊಪ್ಪಳ, ಯಮನಪ್ಪ ತಂದೆ ನಿಂಗಪ್ಪ ಮುರಲಿ ಕೊಪ್ಪಳ, ಜೀವಪ್ಪ ತಂದೆ ವೆಂಕಪ್ಪ ಟೀಕಾರಿ ಅಳವಂಡಿ, ಪಂಚಪ್ಪ ತಂದೆ ಗುಡದಿರಪ್ಪ ಶೆಟ್ಟರ ಅಳವಂಡಿ, ಪರಮೇಶ್ವರಪ್ಪ ತಂದೆ ಹುನಕೇರಪ್ಪ ಕೆಂಗಟಿ ಅಳವಂಡಿ, ಶಿವಲಿಂಗಪ್ಪ ತಂದೆ ಗಿಡ್ಡಪ್ಪ ಸಾಲಿಮನಿ ಅಳವಂಡಿ, ಮಲ್ಲಪ್ಪ ತಂದೆ ಪುಂಡಪ್ಪ ಮುರಡಿ ಅಳವಂಡಿ, ರಾಮರಡ್ಡೆಪ್ಪ ತಂದೆ ಹನುಮರಡ್ಡೆಪ್ಪ ಕಲ್ಗುಡಿ ಅಳವಂಡಿ, ಶ್ರೀಮತಿ ನರಸವ್ವ ಗಂಡ ವೆಂಕಪ್ಪ ತಿಗರಿ ಅಳವಂಡಿ, ವೆಂಕೋಬಾಚಾರಿ ತಂದೆ ಹನುಮಂತಚಾರಿ ಜೋಷಿ ಮುನಿರಾಬಾದ, ಮುದಕಪ್ಪ ತಂದೆ ವೆಂಕೋಬಪ್ಪ ಟೀಕಾರಿ ಅಳವಂಡಿ, ಶಿವಪ್ಪ ತಂದೆ ವೀರಪ್ಪ ದ್ಯಾಂಪೂರ ಕವಲೂರು, ಶ್ರೀಮತಿ ಸುಮಂಗಲಮ್ಮ ಗಂಡ ಗಿರಿಯಪ್ಪ ನಾಗರಾಳ ಅಳವಂಡಿ, ಪಕೀರಡ್ಡೆಪ್ಪ ತಂದೆ ಭೀಮರಡ್ಡೆಪ್ಪ ಅಳವಂಡಿ,

ಶ್ರೀಮತಿ ಶಾಂತಬಾಯಿ ಗಂಡ ಅನಂತಭಟ್ ಕವಲೂರು, ಶ್ರೀಮತಿ ರುಕ್ಮೀಣಿಭಾಯಿ ಗಂಡ ಲಕ್ಷ್ಮಣಚಾರ್ಯ, ಮಾನಪ್ಪ ತಂದೆ ಹವಣೆಪ್ಪ ಕಮ್ಮಾರ ಕವಲೂರು, ವೀರಪ್ಪ ತಂದೆ ವೀರಭದ್ರಪ್ಪ ಕುರುಗೋಡ ಅಳವಂಡಿ, ಶ್ರೀಮತಿ ಲಕ್ಷ್ಮೀಭಾಯಿ ಗಂಡ ನರಸಿಂಹಚಾರ್ಯ ಅಡವಿ ಮಾದಿನೂರು, ಶರಣಯ್ಯ ಹಾಲಕುಂದಿಮಠ ಕವಲೂರು, ಕೃಷ್ಣಾಚಾರ್ಯ ಅಡವಿ, ಹನುಮಂತಚಾರ್ಯ ಅಡವಿ ಮಾದಿನೂರು, ನರಸಿಂಹಚಾರ್ಯ ತಂದೆ ಶ್ರೀನಿವಾಸಚಾರ್ಯ ಪೂಜಾರಿ ಮಾದಿನೂರು, ಬಸಪ್ಪ ತಂದೆ ಬಸಪ್ಪ ಮಾದಿನೂರು ಹಿರೇಸಿಂಧೋಗಿ, ಶಿವಪ್ಪ ಎಂ. ಬಂಗಾರಶೆಟ್ಟರ ತಂದೆ ಮರಿಯಪ್ಪ ಕೊಪ್ಪಳ, ಶ್ರೀಮತಿ ಬಸಮ್ಮ ಗಂಡ ರಾಮರಾವ್ ಅಳವಂಡಿ, ಸೋಮಪ್ಪ ಡಂಬಳ, ಶಂಕ್ರಪ್ಪ ಬಂಗಾರಶೆಟ್ಟರ, ಸಂಗಣ್ಣ ಅಗಡಿ, ಪಂಚಾಕ್ಷರಯ್ಯ ಹಿರೇಮಠ, ಕರಿಸಿದ್ದಸ್ವಾಮಿ ಅಳವಂಡಿ, ಕೊಟ್ರಬಸಯ್ಯ ಮೈನಳ್ಳಿ, ಡಿ.ಆರ್ ವಿಠಲ್‌ರಾವ್, ಎಚ್ ಕೊಟ್ರಪ್ಪ ಹಂಜಿ, (ಕೃಪೆ : ವಿಮೋಚನೆ ; ಕೊಪ್ಪಳ ಜಿಲ್ಲೆಯ ಹೈದರಬಾದ್ ವಿಮೋಚನೆ ಹೋರಾಟದ ಕಥೆ) ಮುಂತಾದ ವಿಮೋಚನಾ ಹೋರಾಟಗಾರರನ್ನು ಗುರುತಿಸಬಹುದು.

ಅದೆ ರೀತಿಯಲ್ಲಿ ಮಹಾಲಿಂಗಸ್ವಾಮಿ ಕೊಪ್ಪಳ, ಹನುಮಂತ್ರಾವ್ ಕೊಪ್ಪಳ, ಸುಭದ್ರಬಾಯಿ ಕೊಪ್ಪಳ, ಪದ್ಮಾವತಿಬಾಯಿ ಕೊಪ್ಪಳ, ಪಿ.ಲಿಂಗಯ್ಯ ಮುನಿರಾಬಾದ, ವೀರಪ್ಪ ಬಣಗಾರ ಅಳವಂಡಿ, ಪರಮೇಶ್ವರಪ್ಪ ತಂದೆ ಹನುಮರಡ್ಡೆಪ್ಪ ಕಲ್ಲುಗಿಡಿ ಅಳವಂಡಿ, ಹನುಮಂತಗೌಡ ಕವಲೂರು, ಗಂಗಮ್ಮ ಅಳವಂಡಿ, ಶಿವಮ್ಮ ಅಳವಂಡಿ, ವೆಂಕಟರಾವ್ ತಂದೆ ಶ್ರೀನಿವಾಸರಾವ್ ಕಸಬೆ ಕೊಪ್ಪಳ, ಸಿದ್ಲಿಂಗಮ್ಮ ಗಂಡ ಪಟದಯ್ಯಸ್ವಾಮಿ ಕೊಪ್ಪಳ, ಭೀಮನಗೌಡ ತಂದೆ ಶಿವನಗೌಡ ಪಾಟೀಲ್ ಬನ್ನಿಕೊಪ್ಪ, ಎಲ್.ಬಿ.ಗುಡಿ ಕೊಪ್ಪಳ, ಶ್ರೀಮತಿ ಕಮಲಮ್ಮ ಗಂಡ ಲಿಂಗನಗೌಡ ಹಿರೇಗೌಡರ ಕಾತರಕಿ, ಬಸನಗೌಡ ತಂದೆ ಫಕೀರಗೌಡ ಹೊಸಗಣವರ ಹಿರೇಸಿಂಧೋಗಿ, ಪತ್ರಯ್ಯ ನರೆಗಲ್‌ಮಠ ಕೊಪ್ಪಳ, ಶ್ರೀಮತಿ ಫಕೀರಮ್ಮ ಗಂಡ ಮುದುಕಪ್ಪ ತಿಗರಿ ಅಳವಂಡಿ, ಹುಸೇನಬೀ ಗಂಡ ಹಬೀಬಖಾನ್ ಪಠಾಣ ಕೊಪ್ಪಳ, ಸಿದ್ದಪ್ಪ ತಂದೆ ಮಲಕಜಪ್ಪ ಹಡಪದ ಅಳವಂಡಿ, ನಾರಾಯಣಾಚಾರ್ಯ ತಂದೆ ಶ್ರೀನಿವಾಸಾಚಾರ್ಯ ಮಾದಿನೂರು, ಮುರ್ತುಜಾಸಾಬ ಬದಾಮಿ, ರತ್ನಬಾಯಿ ಗಂಡ ವೆಂಕೋಬರಾವ್, ಅನ್ನಪೂರ್ಣಮ್ಮ ಘಟ್ಟಿರಡ್ಡಿಹಾಳ, ಲಕ್ಷ್ಮಣರಾವ್ ತಂದೆ ವೆಂಕಟರಾವ್ ಲೇಬಗೇರಿ, ಶರಣಬಸವರಾಜ ತಂದೆ ವೀರಬಸಪ್ಪ ಬಿಸರಳ್ಳಿ, ನಾಗಪ್ಪ ತಂದೆ ತಿಮ್ಮಪ್ಪ ಬ್ಯಾಳಿ (ಕೃಪೆ : ಕೊಪ್ಪಳ ಜಿಲ್ಲಾ ಖಜಾನೆ ಕಾರ್ಯಾಲಯದಲ್ಲಿ ಪೆನಷನ್ ಪಡೆಯುವವರು ಮತ್ತು ಹೋರಾಟಗಾರರು ಮರಣ ಹೊಂದಿದ್ದರಿಂದ ಅವರ ಪತ್ನಿಯರು ಪೆನ್‌ಷನ್ಸ್ ಪಡೆಯುತ್ತಿದ್ದರಿಂದ ಹೋರಾಟಗಾರರ ಹೆಸರುಗಳ ಉಲ್ಲೇಖವಿದೆ) ಮುಂತಾದವರು ಕೊಪ್ಪಳ ತಾಲೂಕಿನಲ್ಲಿ ಬಿಡುಗಡೆಗಾಗಿ ಹೋರಾಟ ಮಾಡಿದ ಮಹನೀಯರಾಗಿದ್ದಾರೆ.

ಹೀಗೆ ಸುಮಾರು 84ಕ್ಕೂ ಅಧಿಕ ಜನ ಹೋರಾಟಗಾರರೂ ಕೊಪ್ಪಳ ತಾಲೂಕಿನಲ್ಲಿ ಬಿಡುಗಡೆಗಾಗಿ ಹೋರಾಟ ಮಾಡಿದ್ದಾರೆ. 'ಅವರು ಈ ಪ್ರಾಂತ್ಯದಲ್ಲಿ ನಡೆಯುವ ದೌರ್ಜನ್ಯಗಳಿಂದ ನೊಂದ ಜನರ ಬಾಳಲ್ಲಿ ಬೆಳಕು ಕೊಟ್ಟ ಪುಣ್ಯಾತ್ಮರು. ಕೊಪ್ಪಳ ತಾಲೂಕಿನಲ್ಲಿ ಬಿಡುಗಡೆಗಾಗಿ ಹೋರಾಟ ಮಾಡಿದ ಮಹನೀಯರ ಹೋರಾಟದ ಬದುಕು-ಬವಣೆಗಳನ್ನು ಬರೆಯಲು ಪುಟಗಳೇ ಸಾಲದಾಗುತ್ತವೆ. ಅವರೆಲ್ಲರ ಪರಿಚಯಗಳನ್ನು ಇಲ್ಲಿ ಮಾಡಲು ಸಾಧ್ಯವಿಲ್ಲ. ಕೆಲ ಹೋರಾಟಗಾರರನ್ನು ಇಲ್ಲಿ ಪರಿಚಯಿಸುವ ಪ್ರಯತ್ನ ಮಾಡಲಾಗಿದೆ. ತಾಲೂಕಿನಲ್ಲಿ ವಿಮೋಚನೆಗಾಗಿ ಹೋರಾಟ ಮಾಡಿದ ಎಲ್ಲಾ ಹೋರಾಟಗಾರರೂ ಪ್ರಮುಖರೇ ಎಂದು ಭಾವಿಸಬೇಕು. ಹೋರಾಟಗಾರರಲ್ಲಿ ಅವರು ಪ್ರಮುಖರು ಇವರು ಅಪ್ರಮುಖರು ಎಂದು ಭಾವಿಸುವುದು ತಪ್ಪು. ಆದರೂ ನನಗೆ ವಿವಿಧ ಮೂಲಗಳಿಂದ ಮಾಹಿತಿ ದೊರೆತ ಕೆಲ ಹೋರಾಟಗಾರರ ಅಲ್ಪ-ಸ್ವಲ್ಪ ಪರಿಚಯವನ್ನು ಇಲ್ಲಿ ಮಾಡಿದ್ದೇನೆ.

**ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿ :-** ಶ್ರೀ ಶಿವಮೂರ್ತಿಸ್ವಾಮಿಯವರು ಕೊಪ್ಪಳ ತಾಲೂಕಿನ ಅಳವಂಡಿ ಗ್ರಾಮದವರು. ಅಳವಂಡಿ ಗ್ರಾಮದ ಶ್ರೀ ಸಿದ್ಧೇಶ್ವರ ಮಠದ ವಂಶಸ್ಥರು. ಬಿ.ಎಸ್ಸಿ ಅಧ್ಯಯನ ಮಾಡುತ್ತಿರುವಾಗಲೇ ಮಹಾತ್ಮಾಗಾಂಧಿ ಮತ್ತು ಸ್ವಾಮಿ ರಮಾನಂದತೀರ್ಥರ ಮುಂತಾದ ರಾಷ್ಟ್ರ ನಾಯಕರ ಪ್ರಭಾವಕ್ಕೆ ಒಳಗಾದರು. ಕಾಲೇಜು ತೊರೆದು ಕಾಂಗ್ರೆಸ್ ಸೇರಿದರು. ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರು ಮುಂಡರಗಿ ಶಿಬಿರದ ಶಿಬಿರಾಧಿಪತಿಗಳಾಗಿದ್ದರು. ಶ್ರೀ ಬೆಟಗೇರಿ ವಿರುಪಾಕ್ಷಪ್ಪ, ಶ್ರೀ ಡಿ.ಆರ್ ವಿಠಲ್‌ರಾವ್, ಶ್ರೀ ಪ್ರಭುರಾಜ ಪಾಟೀಲ್, ಶ್ರೀ ಸೋಮಪ್ಪ ಡಂಬಳ, ಶ್ರೀ ಎಂ.ವಿರುಪಾಕ್ಷಪ್ಪ ಮುಂತಾದವರು ಶ್ರೀ ಶಿವಮೂರ್ತಿಸ್ವಾಮಿಗಳಿಗೆ ಬೆಂಬಲವಾಗಿ ನಿಂತರು. ರಜಾಕಾರರ ಮತ್ತು ಪೋಲೀಸರ ಕೊಲೆ, ಲೂಟಿ, ಮಹಿಳೆಯರ ಮೇಲಿನ ದೌರ್ಜನ್ಯ, ಮುಗ್ಧ ಪ್ರಜೆಗಳ ಮೇಲಿನ ದರ್ಪದ ಹಾವಳಿಗಳನ್ನು ತಡೆಯುವುದಕ್ಕಾಗಿ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರು ಅನೇಕ ರೀತಿಯ ಹೋರಾಟಗಳನ್ನು ರೂಪಿಸಿದರು. ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರು ತಮ್ಮ ತಾಯಿಯ ಬಂಗಾರದ ಬಳೆಗಳನ್ನು ಮಾರಿ ತಮ್ಮ ಶ್ರೀ ಸಿದ್ಧೇಶ್ವರ ಮಠದಲ್ಲಿ ಖಾದಿ ಕೇಂದ್ರವನ್ನು ಆರಂಭಿಸಿದರು. ಇದರಿಂದ ರೊಚ್ಚಿಗೆದ್ದ ರಜಾಕಾರರು ಇವರ ಮಠವನ್ನೇ ಲೂಟಿ ಮಾಡಿ ತಮ್ಮ ಮಿಲಿಟರಿ ಕ್ಯಾಂಪ್ ಮಾಡಿಕೊಂಡರು. ಅಲ್ಲದೆ ಅಳವಂಡಿಯ ಜನರಿಗೆ ಚಿತ್ರಹಿಂಸೆ ನೀಡಿದರು. ಈ ಎಲ್ಲಾ ಹಿಂಸೆಗಳಿಂದ ರೋಸಿಹೋಗಿದ್ದ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರು ರಜಾಕಾರರ ವಿರುದ್ದ ಹೈದರಬಾದ-ಕರ್ನಾಟಕ ವಿಮೋಚನೆಗಾಗಿ ಹೋರಾಟ ಮಾಡಿದ ಮಹನೀಯರಲ್ಲಿ ಒಬ್ಬ ಪ್ರಮುಖರು.

**ಶ್ರೀ ಸೋಮಪ್ಪ ಡಂಬಳ :–** ಇವರು ತಾಲೂಕಿನ ಘಟರಡ್ಡಿಹಾಳ ಗ್ರಾಮದವರು. ಇವರು ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯರ ಆತ್ಮೀಯರಾಗಿದ್ದರು. ಮುಂಡರಗಿ ಶಿಬಿರದ ಉಪ ಶಿಬಿರಾಧಿಪತಿಗಾಗಿ ಕಾರ್ಯ ನಿರ್ವಹಿಸಿದ್ದಾರೆ. ಅಲ್ಲದೆ ತುಂಗಭದ್ರ ನದಿಯ ಆಚೆ ದಡದಲ್ಲಿದ್ದ ತಂಬ್ರಳ್ಳಿ ಹಾಗೂ ಹಂಪಸಾಗರ ಶಿಬಿರಗಳ ಅಧಿಪತಿಯಾಗಿಯೂ ಹೋರಾಟ ಮಾಡಿದ್ದಾರೆ. ಬೆಳಗಟ್ಟಿ, ಕುಕನೂರು, ಯಲಬುರ್ಗಾ ಮುಂತಾದ ದಾಳಿಗಳಲ್ಲಿ ಇವರು ಹೋರಾಟ ಮಾಡಿದ್ದಾರೆ. ವಿಮೋಚನೆಗಾಗಿ ಹೋರಾಟ ಮಾಡಿದ ಮಹನೀಯರಲ್ಲಿ ಶ್ರೀ ಸೋಮಪ್ಪ ಡಂಬಳರವರು ಒಬ್ಬರಾಗಿ ಕಾರ್ಯನಿರ್ವಹಿಸಿದ್ದಾರೆ.

**ಡಾ.ಪಂಚಾಕ್ಷರಯ್ಯ ಹಿರೇಮಠ :–** ಶ್ರೀ ಪಂಚಾಕ್ಷರಿ ಹಿರೇಮಠರವರು ತಾಲೂಕಿನ ಬಿಸರಳ್ಳಿ ಗ್ರಾಮದವರು. 1947ರ ಅಗಸ್ಟ್ 15ರಂದು ದೇಶಕ್ಕೆ ಸ್ವಾತಂತ್ರ್ಯ ದೊರಕಿದ್ದರೂ ಸಹ ಎಲ್ಲೂ ರಾಷ್ಟ್ರಧ್ವಜವನ್ನು ಹಾರಿಸುವಂತಿಲ್ಲ ಎಂದು ಹೈದರಬಾದ ನಿಜಾಮನು ಆದೇಶ ಹೊರಡಿಸಿದ್ದನು. ಆದರೂ ಅದನ್ನು ಲೆಕ್ಕಿಸದೇ ಪಂಚಾಕ್ಷರಯ್ಯ ಹಿರೇಮಠರವರು ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿರುವಾಗಲೇ ಭಾರತದ ಪ್ರಥಮ ಸ್ವಾತಂತ್ರ್ಯದ ದಿನದಂದು ರಾಷ್ಟ್ರಧ್ವಜವನ್ನು ಹಾರಿಸಿದರು. ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರ ನೇತೃತ್ವದ ಮುಂಡರಗಿ ಶಿಬಿರದಲ್ಲಿ ಪಂಚಾಕ್ಷರಯ್ಯ ಹಿರೇಮಠರವರು ತರಬೇತಿಯನ್ನು ಪಡೆದಿದ್ದಾರೆ. ಬೆಳಗಟ್ಟಿ ಮುಖಾ–ಮುಖಿ ಹೋರಾಟದಲ್ಲಿ ಸೈನಿಕರಿಗೆ ಸಹಾಯವನ್ನು ಮಾಡಿದ ಇವರ ಸೇವೆ ಅಮೋಘ. ಯಲಬುರ್ಗಾದ ದಾಳಿಯಲ್ಲಿ ಬಾಂಬು ಸಿಡಿದು ಗವಿಯಪ್ಪ ಹಿರೆಕುಂಬಿಯವರ ಕೈ ಹೊದರೆ, ಪಂಚಾಕ್ಷರಿಯವರ ಕಾಲುಗಳಿಗೆ ಸುಟ್ಟಂತೆ ಗಾಯಗಳಾದವು. ಒಟ್ಟಿನಲ್ಲಿ ವಿಮೋಚನಾ ಚಳುವಳಿಯಲ್ಲಿ ಇವರ ಭಾಗವಹಿಸುವಿಕೆ ಅಮೋಘವಾದದ್ದು.

**ಶ್ರೀ ಕೊಟ್ರಬಸಯ್ಯ ಮೈನಳ್ಳಿ :–** ಇವರು ತಾಲೂಕಿನ ಮೈನಳ್ಳಿ ಗ್ರಾಮದವರು. ಇವರು ವಿಮೋಚನೆಗಾಗಿ ಮುಂಡರಗಿ ಶಿಬಿರದಲ್ಲಿ ಭಾಗವಹಿಸಿದ್ದರು. ವಿಶೇಷವಾಗಿ ಶ್ರೀ ಕೊಟ್ರಬಸಯ್ಯರವರು ಶಿಬಿರದಲ್ಲಿ ಜವಾಬ್ದಾರಿ ಕಾರ್ಯ ನಿರ್ವಹಿಸುತ್ತಿದ್ದರು. ಶಿಬಿರದ ಕಾರ್ಯಕರ್ತರಿಂದಾದ ಲೋಪದೋಷಗಳ ವಿಚಾರಣಾ ಸಮಿತಿಯ ಕಾರ್ಯದರ್ಶಿಯಾಗಿ ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

**ಶ್ರೀ ಚನ್ನಬಸನಗೌಡ ಅಲ್ಲಿಪುರ :–** ಇವರು ತಾಲೂಕಿನ ಕವಲೂರು ಗ್ರಾಮದ ಬಸನಗೌಡರವರ ಮಗ. ಇವರ ತಂದೆ ಬಸನಗೌಡರವರು ಮುನಿರಬಾದ ಡ್ಯಾಂನಲ್ಲಿ ನಡೆದ ಪಠಾಣರ ಗುಂಡಿಗೆ ಬಲಿಯಾಗಿದ್ದಾರೆ. ಶ್ರೀ ಚನ್ನಬಸನಗೌಡ ಅಲ್ಲಿಪುರ

ಇವರನ್ನು ಕಾಂಗ್ರೇಸ್ ಗೂಂಡಾ ಎಂದು ರಜಾಕಾರರು ಔರಂಗಬಾದ ಜೈಲಿನಲ್ಲಿ ಇರಿಸಿದ್ದರು. ಇವರು ಸಹ ವಿಮೋಚನೆಗಾಗಿ ಚಳುವಳಿಯಲ್ಲಿ ಭಾಗವಹಿಸಿದ್ದಾರೆ.

**ಶ್ರೀ ಹನುಮರಡ್ಡಿ ಕಲ್ಗುಡಿ :–** ಅಳವಂಡಿಯ ಶ್ರೀ ಸಿದ್ದೇಶ್ವರ ಮಠದ ಪರಮ ಭಕ್ತರು. ಪಠಾಣನೊಬ್ಬನು ಇವರ ಗೊಬ್ಬರ ತಿಪ್ಪೆಯಲ್ಲಿ ಮಲ ವಿಸರ್ಜನೆ ಮಾಡಿದ್ದನ್ನು ಹನುಮರಡ್ಡಿಯವರು ಪ್ರಶ್ನಿಸುತ್ತಾರೆ. ಇದರಿಂದ ರೊಚ್ಚಿಗೆದ್ದ ಪಠಾಣರು ಮನೆಗೆ ನುಗ್ಗಿ ಹನುಮರಡ್ಡಿಯನ್ನು ಹಿಡಿದುಕೊಂಡು ಹೋಗಿ ಹಾಡು ಹಗಲೇ ಊರ ಮುಂದೆ ನೂರಾರು ಜನರ ಎದುರಿಗೆ ಇವರನ್ನು ಗುಂಡು ಹಾಕಿ ಕೊಲ್ಲಲಾಯಿತು.

**ಶ್ರೀ ಪಂಚಪ್ಪ ಶೆಟ್ಟರ :–** ಅಳವಂಡಿಯ ವ್ಯಾಪಾರಸ್ಥ ಮನೆತನದವರಾದ ಇವರು ಮುಂಡರಗಿ ಶಿಬಿರದಲ್ಲಿ ತರಬೇತಿಯನ್ನು ಪಡೆದಿದ್ದಾರೆ. ಬೆಳಗಟ್ಟಿಯ ಮುಖಾ–ಮುಖಿ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಇವರನ್ನು ಪಠಾಣರು ಹಿಡಿದುಕೊಂಡು ಹೋಗಿ ಅಳವಂಡಿ–ಹಲವಾಗಲಿ ನಡುವಿನ ಕೆರೆ ಹಳ್ಳದಲ್ಲಿ ಎತ್ತಿನ ಬಂಡಿಗೆ ಕಟ್ಟಿ ಬಾರಕೋಲಿನಿಂದ ಹೊಡೆಯುತ್ತಾ ಜೋರಾಗಿ ಓಡುವಂತೆ ಹೇಳುತ್ತಿದ್ದರು. ಹೊಡೆತದಿಂದ ರೋಷ ತಗ್ಗಿಸಿಕೊಂಡ ರೋಚಕ ಕಥೆ ಶ್ರೀ ಪಂಚಪ್ಪ ಶೆಟ್ಟರವರದು.

**ಶ್ರೀ ಡಿ.ಆರ್. ವಿಠಲ್‌ರಾವ್ :–** ಇವರು ಕಾತರಕಿಯ ನೇಕಾರ ಕುಟುಂಬದಿಂದ ಬಂದವರು. ಬಡತನ ಮತ್ತು ಧಾರ್ಮಿಕ ವಾತಾವರಣದಲ್ಲಿ ಬೆಳೆದ ಇವರು ಹೈದರಬಾದನಲ್ಲಿ ಪದವಿ ಅಧ್ಯಯನ ಮಾಡುತ್ತಿರುವಾಗಲೇ ವಿಮೋಚನಾ ಹೋರಾಟದಲ್ಲಿ ಭಾಗವಹಿಸಿದ್ದಾರೆ. ವಿದ್ಯಾರ್ಥಿ ನಾಯಕರಾಗಿ ಮುಂಡರಗಿ ಶಿಬಿರದಲ್ಲಿ ಭಾಗವಹಿಸಿದ್ದಾರೆ. ಶ್ರೀ ಬಿ.ವಿರುಪಾಕ್ಷಪ್ಪ, ಶ್ರೀ ಪ್ರಭುರಾಜ ಪಾಟೀಲ, ಶ್ರೀ ಸೋಮಪ್ಪ ಡಂಬಳರೊಂದಿಗೆ ಅವರ ಒಡನಾಟದಲ್ಲಿ ಮುಂಡರಗಿ ಶಿಬಿರದಲ್ಲಿ ತರಬೇತಿಯನ್ನು ಪಡೆದಿದ್ದಾರೆ.

**ಶ್ರೀ ಎಂ.ವಿರೂಪಾಕ್ಷಪ್ಪ :–** ಇವರು ಹಿರೇಸಿಂದೋಗಿಯ ಕೃಷಿ ಕುಟುಂಬದಿಂದ ಬಂದವರು. ಹೈದರಬಾದನಲ್ಲಿ ಅಭ್ಯಾಸ ಮಾಡುತ್ತಿರುವಾಗಲೇ ಮುಂಡರಗಿ ಶಿಬಿರದಲ್ಲಿ ಭಾಗವಹಿಸಿದ್ದಾರೆ. ಈ ಶಿಬಿರದಲ್ಲಿ ಜವಾಬ್ದಾರಿ ಸ್ಥಾನವನ್ನು ಹೊಂದಿ ಸಮರ್ಥವಾಗಿ ವಿಮೋಚನೆಯ ಹೋರಾಟದಲ್ಲಿ ಪಾಲ್ಗೊಂಡಿದ್ದಾರೆ.

**ಶ್ರೀ ಲಕ್ಷ್ಮಣಾಚಾರ್ಯ ಅಗ್ನಿಹೋತ್ರಿ :–** ಒಳ್ಳೆಯ ಸಂಘಟಕರೂ, ದೇಶ ಪ್ರೇಮಿಗಳು ಆದಂತಹ ಇವರು ಅನೇಕ ವರ್ಷಗಳ ಹಿಂದೆ ಕೊಪ್ಪಳಕ್ಕೆ ಬಂದು ನೆಲೆಸಿದವರು. ಹೈದರಬಾದನಲ್ಲಿ 36 ವರ್ಷಗಳ ಕಾಲ ವಕೀಲರಾಗಿ ಸೇವೆ ಸಲ್ಲಿಸಿದವರು. ಈ ಸೇವೆ ನಿಜಾಮರ ಆಡಳಿತದಲ್ಲಿ ದೊಡ್ಡ ದಾಖಲೆ ಎನ್ನಬಹುದು. ಶ್ರೀ ಶಿರೂರು ವೀರಭದ್ರಪ್ಪ, ಶ್ರೀ ಕಾಟ್ರಳ್ಳಿ ಬಸವಂತರಾಯ ಹಿರೇಮಠ, ಶ್ರೀ ಇಟಗಿ ವಿರೂಪಾಕ್ಷಯ್ಯ ಮೊದಲಾದವರೊಂದಿಗೆ ಭಾರತದ ಸ್ವಾತಂತ್ರ್ಯ ಸಂಗ್ರಾಮ ಮತ್ತು ಹೈದ್ರಾಬಾದ

ವಿಮೋಚನಾ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ. 1942 ರಿಂದ 1947 ಜಿಲ್ಲಾ ಕಾಂಗ್ರೇಸ್ ಅಧ್ಯಕ್ಷರಾಗಿದ್ದರು. 1947 ಅಗಸ್ಟ್ 15ರ ಪ್ರಥಮ ಸ್ವಾತಂತ್ರೋತ್ಸವ ದಿನದಂದು ಕೋಟೆಯ ರಾಮದೇವರ ಗುಡಿಯಿಂದ ನೂರಾರು ಜನರೊಡನೆ ಮೆರವಣಿಗೆಯಲ್ಲಿ ಬಂದು ಹೊಸ ಬಸ್ಟ್ಯಾಂಡ್ ಹತ್ತಿರದ ಜಾಗದ ಬಯಲಲ್ಲಿ ಭಾರತದ ಧ್ವಜವನ್ನು ಹಾರಿಸಿ ಅನೇಕ ಜನ ಹೋರಾಟಗಾರರೊಂದಿಗೆ ಬಂಧನಕ್ಕೊಳಗಾದರು. ನಿಜಾಮರ ಆಡಳಿತದಲ್ಲಿ ಗಜಾನನೋತ್ಸವ ಧಾರ್ಮಿಕ ಮುಂತಾದ ಕಾರ್ಯಕ್ರಮಗಳನ್ನು ನಡೆಸುವಂತಿರಲಿಲ್ಲ. ಎಲ್ಲಾ ಧಾರ್ಮಿಕ ಕಾರ್ಯಕ್ರಮಗಳಿಗೆ ನಿಜಾಮರ ಆಡಳಿತ ನಿಷೇಧವನ್ನು ಹೇರಿದ್ದರು. ಅಂತಹ ಸಂದರ್ಭದಲ್ಲಿ ಶ್ರೀ ಲಕ್ಷ್ಮಣಾಚಾರ್ಯ ಅಗ್ನಿಹೋತ್ರಿಯವರು ವಾದವನ್ನು ಮಾಡಿ ಪರವಾನಿಗೆ ಕೊಡಿಸುತ್ತಿದ್ದರು. ದೇಶಪ್ರೇಮಿಯಾಗಿದ್ದ ಇವರ ವಿಮೋಚನಾ ಹೋರಾಟ ಅಮೋಘವಾದದ್ದು.

ಈ ರೀತಿಯಾಗಿ ಕೊಪ್ಪಳ ತಾಲೂಕಿನಲ್ಲಿ ಸ್ವಾತಂತ್ರ್ಯ ಮತ್ತು ವಿಮೋಚನೆಗಾಗಿ ಹೋರಾಟ ಮಾಡಿದ ಮಹನೀಯರಾಗಿದ್ದಾರೆ. ಸುಮಾರು 1857ರಿಂದ 1948 ಸಪ್ಟಂಬರ 17ರ ವರಗೆ ಈ ಭಾಗದಲ್ಲಿ ವಿಮೋಚನೆಗಾಗಿ ಹೋರಾಟಗಳು ನಡೆದಿವೆ. ಈ ಮೇಲಿನ ಮಹನೀಯರಲ್ಲದೇ ಅನೇಕ ಜನ ಸಾಮಾನ್ಯರು ವಿಮೋಚನೆಗಾಗಿ ಹೋರಾಟ ಮಾಡಿದ್ದಾರೆ. ಅವರುಗಳ ಹೋರಾಟದ ಮೂಲಗಳನ್ನು ಗುರುತಿಸಲಾಗದೆ ಅವರ ಹೆಸರುಗಳು ಉಲ್ಲೇಖಕ್ಕೆ ಸಿಗುವುದಿಲ್ಲ. ಮುಂದಿನ ದಿನಮಾನಗಳಲ್ಲಿ ಅಂತಹ ಎಲ್ಲಾ ಹೋರಾಟಗಾರರನ್ನು ಗುರುತಿಸಿ ಮುಂದಿನ ಸಮಾಜಕ್ಕೆ ತಿಳಿಹೇಳಬೇಕಾಗಿರುವುದು ಅವಶ್ಯವಾಗಿದೆ.

**ಆಕರ ಗ್ರಂಥಗಳು :–**

1) ಸಂ.ಡಿ.ಎಸ್. ಅಶ್ವಥ್ ಮತ್ತು ಇತರರು, ವಿಮೋಚನೆ, ಜಿಲ್ಲಾಡಳಿತ, ಕೊಪ್ಪಳ–1999
2) ಕನ್ನಡಕ್ಕೆ ಪ್ರಹ್ಲಾದ ವೆಂ. ಕುಳಗೇರಿ, ಹೈದರಾಬಾದ ವಿಮೋಚನೆಯ ವೀರಗಾಥೆ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು–2018
3) ರಾಮಣ್ಣ ಹವಳೆ, ಕೊಪ್ಪಳ ನಾಡಿನ ಸ್ವಾತಂತ್ರ್ಯ ಹೋರಾಟಗಾರರು, ಶ್ರೀ ಭೀಮಜ್ಜ ಮುರಡಿ ಪ್ರತಿಷ್ಠಾನ, ಕುಷ್ಟಗಿ–2021
4) ಬಾಲಚಂದ್ರ ಜಯಶೆಟ್ಟಿ, ಹೈದರಾಬಾದ ಕರ್ನಾಟಕದ ವಿಮೋಚನಾ ಚಳುವಳಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–2006
5) ಸಂ. ಡಾ. ಕೆ. ಶರಣಪ್ಪ ನಿಡಶೇಸಿ (ಶನಿ) ಸ್ವಾತಂತ್ರ್ಯಮೃತ, ರಾಘವಾರ್ಜುನ ಪ್ರಕಾಶನ, ಬಯ್ಯಾಪೂರ–ಕುಷ್ಟಗಿ–2022

* * * * *

## ಸಂವಿಧಾನ 371ನೇ ವಿಧಿ ಜಾರಿಯ ಹೋರಾಟದಲ್ಲಿ ಕೊಪ್ಪಳ

ಹೈದ್ರಾಬಾದ್-ಕರ್ನಾಟಕ ಪ್ರದೇಶ ಹಿಂದುಳಿದಿದೆ ಎಂಬುದರಲ್ಲಿ ಅನುಮಾನವೇ ಇಲ್ಲ. ಈ ಪ್ರದೇಶ ಹಿಂದುಳಿದಿರುವಿಕೆ ನಿನ್ನೆ ಮೊನ್ನೆಯದಲ್ಲ; ಇದಕ್ಕೆ ಬಹುದೊಡ್ಡ ಇತಿಹಾಸವೇ ಇದೆ. 16–17ನೇ ಶತಮಾನದಲ್ಲಿ ಬ್ರಿಟಿಷರು ವ್ಯಾಪಾರಕ್ಕಾಗಿ ಭಾರತಕ್ಕೆ ಬಂದವರು. ಆದರೆ ಇಲ್ಲಿನ ನಮ್ಮ ಆಂತರಿಕ ಕಚ್ಚಾಟದಿಂದಾಗಿಯೆ ಇಲ್ಲೇ ನೆಲೆಯೂರಿ ಅಧಿಕಾರದ ಚುಕ್ಕಾಣಿ ಹಿಡಿದರು. ಬ್ರಿಟಿಷರು ತಮ್ಮ ಅಧಿಕಾರ ಸುಗಮವಾಗಿ ನೆಡೆಸಲು ದಬ್ಬಾಳಿಕೆ, ಗುಲಾಮಗಿರಿಯನ್ನು ಸ್ಥಾಪಿಸಿದರು. ಅವರು ಏನೇ ದಬ್ಬಾಳಿಕೆ ನಡೆಸಿದರೂ ಇಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿದ್ದಾರೆ ಎಂಬ ಮಾತನ್ನು ಒಪ್ಪಲೇಬೇಕು. ಬ್ರಿಟಿಷರು ದೇಶಕ್ಕೆ ಬಂದ ಮೇಲೆಯೇ ಶಿಕ್ಷಣ, ಸಂಪರ್ಕ, ಸಂಶೋಧನೆ, ಅಧ್ಯಯನ ಇತ್ಯಾದಿ ಕಾರ್ಯಗಳು ಹಿಂದಿನಕ್ಕಿಂತಲೂ ಹೆಚ್ಚಿನ ರೀತಿಯಲ್ಲಿ ನಡೆದವು ಎಂಬ ಮಾತೂ ಸತ್ಯ. ಸ್ವಾತಂತ್ರ್ಯ ಪೂರ್ವದಲ್ಲಿ ಅಂದರೆ ಬ್ರಿಟಿಷರ ಆಡಳಿತ ಅವಧಿಯಲ್ಲಿ ಭಾರತವು 565 ಸಂಸ್ಥಾನಗಳಲ್ಲಿ ಹರಿದು-ಹಂಚಿ ಹೋಗಿತ್ತು. ಇವುಗಳಲ್ಲಿ ಹಲವು ಸಂಸ್ಥಾನಗಳಲ್ಲಿ ಬ್ರಿಟಿಷರು ನೇರವಾಗಿ ಆಡಳಿತ ನಡೆಸುತ್ತಿದ್ದರೆ; ಇನ್ನೂ ಕೆಲ ಸಂಸ್ಥಾನಗಳಲ್ಲಿ ಪರೋಕ್ಷವಾಗಿ ಆಡಳಿತ ನಡೆಸುತ್ತಿದ್ದರು. ಅಂದರೆ ಆ ಸಂಸ್ಥಾನಗಳಲ್ಲಿ ತಮಗೆ ಬೇಕಾದವರಿಗೆ ಮತ್ತು ವಿಧೇಯತೆಯಿಂದ ಇರುವ ಪ್ರಭಾವಿ ವ್ಯಕ್ತಿಗಳ ಕೈಯಲ್ಲಿ ಅಧಿಕಾರದ ಚುಕ್ಕಾಣಿ ನೀಡುತ್ತಿದ್ದರು. ಬ್ರಿಟಿಷರು ಯಾವ ಸಂಸ್ಥಾನಗಳಲ್ಲಿ ನೇರವಾಗಿ ಆಡಳಿತ ನಡೆಸುತ್ತಿದ್ದರೋ ಆ ಪ್ರದೇಶಗಳಲ್ಲಿ ಬಹಳಷ್ಟು ಅಭಿವೃದ್ಧಿ ಕಾರ್ಯಗಳನ್ನು ಮಾಡಿದ್ದಾರೆ.

ಅದರಂತೆ ಹೈದ್ರಾಬಾದ್ ರಾಜ್ಯ ಅಥವಾ ಸಂಸ್ಥಾನ ಬ್ರಿಟಿಷರ ನೇರ ಆಡಳಿತದಲ್ಲಿ ಇರಲಿಲ್ಲ. ಹೈದ್ರಾಬಾದ್ ನಿಜಾಮಶಾಹಿ ಸರ್ವಾಧಿಕಾರಿಗಳ ಕೈಯಲ್ಲಿ ಕೇಂದ್ರಿಕೃತವಾಗಿತ್ತು. ಇವರು ಜನರಿಗೆ ಬೇಕಾದ ಶಿಕ್ಷಣವಾಗಲಿ ಇಲ್ಲವೆ ಅಭಿವೃದ್ಧಿ ಕಾರ್ಯಗಳಾಗಲಿ ಮಾಡಲಿಲ್ಲ ಮತ್ತು ಇದು ಅವರಿಗೆ ಬೇಕಾಗಿಯೂ ಇರಲಿಲ್ಲ. ತಮಗೆ ಬೇಕಾದ ಮತ್ತು ಅನುಕೂಲವಾದ ಪ್ರದೇಶಗಳಲ್ಲಿ ಕೆಲವಾರು ಉರ್ದು ಶಾಲೆಗಳನ್ನು ಮಾತ್ರ ತೆರೆದು ಶಿಕ್ಷಣ ಕೊಡುವ ಪ್ರಯತ್ನ ಮಾಡಿದ್ದರು.

ಬ್ರಿಟಿಷರ ಆಡಳಿತಾವಧಿಯಲ್ಲಿ ಹೈದ್ರಾಬಾದಿನ ನಿಜಾಮ ಆಳ್ವಿಕೆ ನಡೆಸುತ್ತಿದ್ದ ಹೈದ್ರಾಬಾದ್ ಸಂಸ್ಥಾನ ಅಥವಾ ರಾಜ್ಯ; ಸುಮಾರು ಎರಡುಲಕ್ಷ ಇಪ್ಪತ್ತೆರಡು ಸಾವಿರ ಚದುರ ಕಿಲೋ ಮೀಟರ್‌ನಿಂದ ಕೂಡಿತ್ತು. ಇಂದು ಹರಿದು-ಹಂಚಿ ಹೋಗಿರುವ ಮೂರು ರಾಜ್ಯಗಳ ಹದಿನಾರು ಜಿಲ್ಲೆಗಳನ್ನು ಒಳಗೊಂಡಿತ್ತು. ಆಂಧ್ರಪ್ರದೇಶದ ತೆಲಂಗಾಣ ಪ್ರದೇಶವೆಂದು ಕರೆಯುವ ನಿಜಾಮಾಬಾದ್, ಅದಿಲಾಬಾದ್, ಖಮ್ಮಮ್, ವರಂಗಲ್,

ಮೆಹಬೂಬನಗರ, ಕರೀಮನಗರ, ನಲ್ಲಗೊಂಡ ಹಾಗೂ ಹೈದ್ರಾಬಾದ ಸುತ್ತಲಿನ ಪ್ರದೇಶ ಅತರಾಸ ಬಂದಿಯಾ ಜಿಲ್ಲೆಗಳು, ಮಹಾರಾಷ್ಟ್ರದ ವಿದರ್ಭ ಪ್ರದೇಶವೆಂದು ಕರೆಯುವ ಪರಭಣಿ, ಬೀಡ, ನಾಂದೇಡ, ಉಸ್ಮಾನಾಬಾದ್, ಮತ್ತು ಔರಂಗಾಬಾದ್ ಹಾಗೂ ಕರ್ನಾಟಕದ ಹೈದ್ರಾಬಾದ್ ಕರ್ನಾಟಕವೆಂದು ಕರೆಯುವ ಬೀದರ್, ಗುಲಬರ್ಗಾ (ವಿಭಜಿತ ಯಾದಗಿರಿ ಜಿಲ್ಲೆ) ರಾಯಚೂರು (ವಿಭಜಿತ ಕೊಪ್ಪಳ ಜಿಲ್ಲೆ) ಹೀಗೆ ಒಟ್ಟು ಹದಿನಾರು ಜಿಲ್ಲೆಗಳಿಂದ ಹೈದ್ರಾಬಾದ್ ಸಂಸ್ಥಾನದ ವ್ಯಾಪ್ತಿ ಕೂಡಿತ್ತು. ಈ ಸಂಸ್ಥಾನವನ್ನು ಏಳು ಜನ ನಿಜಾಮರು ಕ್ರಿ.ಶ 1724 ರಿಂದ 1948 ರವರೆಗೆ ಸರ್ವಾಧಿಕಾರಿಗಳಂತೆ ಆಳಿದ್ದಾರೆ.

ಈ ಪ್ರಾಂತದಲ್ಲಿ ಮಿರ್ ಖಮರುದ್ದೀನ್ ಚಿನ್ ಖಿಲಜಿಖಾನ್ (1724–1748), ನವಾಜ್ ನಿಜಾಮ್ ಅಲಿಖಾನ್ (1961–1803), ನವಾಜ್ ಸಿಕಂದರ್ ಬಹಾದ್ದೂರ್ (1804–1928), ನಸೀರು ದೌಲಾ ಬಹಾದ್ದೂರ್ (1829–1857), ಅಪಜಾಲುದೌಲಾ ಬಾಹಾದ್ದೂರ್ (1857–1869), ಮೀರ್ ಮಹೆಬೂಬ್ ಅಲಿಖಾನ್ ಬಹಾದ್ದೂರ್ (1869–1911), ಹಾಗೂ ಕೊನೆಯದಾಗಿ ನವಾಬ್ ಮಿರ್ ಉಸ್ಮಾನ್ ಅಲಿಖಾನ್ ಬಹಾದ್ದೂರ್ (1911–1948) ಆಡಳಿತ ನಡೆಸಿದ್ದಾರೆ. ಇವರು ಆಳ್ವಿಕೆ ನಡೆಸಿದ ಈ ಸಂಸ್ಥಾನದಲ್ಲಿ ಬಡತನ, ಅನಕ್ಷರತೆ, ನಿರುದ್ಯೋಗ, ದಟ್ಟದಾರಿದ್ರ್ಯ ತಾಂಡವಾಡುತ್ತಿದ್ದವು. ಇವರಿಗೆ ಸರ್ವಾಧಿಕಾರದ ಆಡಳಿತ ಮುಖ್ಯವಾಯಿತ್ತೇ ಹೊರತು; ಇಲ್ಲಿನ ಜನ ಬುದ್ಧಿವಂತರಾಗುವುದು, ಜಾಗೃತರಾಗುವುದು ಅವರಿಗೆ ಬೇಕಿರಲಿಲ್ಲ. ಕೆಲ ನಿಜಾಮರ ಆಡಳಿತದಲ್ಲಿ ಮತಾಂಧತೆ, ಬಲತ್ಕಾರ, ದಬ್ಬಾಳಿಕೆಗಳಿಂದ ಜನ ಬೇಸತ್ತು ಹೋಗಿದ್ದರು. ಜನ ಕಣ್ಣೀರಲ್ಲಿ ಕೈತೊಳೆಯುವಂತೆ ಇಲ್ಲಿನ ಪರಿಸ್ಥಿತಿ ನಿರ್ಮಾಣವಾಗಿತ್ತು. ಇವ್ಯಾವೂ ಸ್ವಾತಂತ್ರ್ಯ ಸಂಗ್ರಾಮಕ್ಕೆ, ಇಲ್ಲಿನ ಜನತೆಗೆ ಅಡ್ಡ ಬರಲಿಲ್ಲ. ತಮ್ಮೆಲ್ಲ ಕಷ್ಟ ಕಾರ್ಪಣ್ಯ ಮರೆತು ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇಡೀ ದೇಶವೇ ಯಾವ ರೀತಿಯಲ್ಲಿ ಪಾಲ್ಗೊಂಡಿತ್ತೋ ಹಾಗೆಯೇ ಹೈದರಾಬಾದ–ಕರ್ನಾಟಕದ ಜನತೆ ಕೆಚ್ಚೆದೆಯಿಂದ ದೇಶದ ಬಿಡುಗಡೆಗಾಗಿ ಹೋರಾಟ ಮಾಡಿದ್ದಾರೆ. ಈ ಹೋರಾಟದ ಪ್ರತಿಫಲವೆಂಬಂತೆ 1947ರ ಆಗಸ್ಟ್ 15ರಂದು ಇಡೀ ದೇಶವೇ ವಿಜಯಪತಾಕೆಯನ್ನು ಹಾರಿಸಿ ಸ್ವಾತಂತ್ರೋತ್ಸವ ಆಚರಣೆ ಮಾಡಿತು. ಆದರೆ ಹೈದ್ರಾಬಾದ ಸಂಸ್ಥಾನ ಮಾತ್ರ ಸರ್ವಾಧಿಕಾರಿ ನಿಜಾಮರಿಂದ ಸ್ವಾತಂತ್ರ್ಯಗೊಳ್ಳಲಿಲ್ಲ. ಮತ್ತೆ ನಿಜಾಮರ ವಿರುದ್ಧ ಸ್ವಾತಂತ್ರ್ಯ ಸಂಗ್ರಾಮದ ಮಾದರಿಯಲ್ಲೇ ಅನೇಕ ಹೋರಾಟಗಳನ್ನು ಇಲ್ಲಿನ ಜನತೆ ಮಾಡಬೇಕಾಯಿತು. ಇದರ ಫಲವಾಗಿಯೇ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ಹದಿಮೂರು ತಿಂಗಳುಗಳ ಬಳಿಕ ಅಂದಿನ ಗೃಹಮಂತ್ರಿಯಾಗಿದ್ದ ಸರದಾರ ವಲ್ಲಭಬಾಯಿ ಪಟೇಲ್‌ರ ಪೊಲೀಸ್ ಕಾರ್ಯಾಚರಣೆಯಿಂದ 1948ರ ಸೆಪ್ಟೆಂಬರ್ 17ರಂದು ಹೈದ್ರಾಬಾದ

ಕರ್ನಾಟಕವು ವಿಮೋಚನೆಗೊಂಡಿತು. ಸ್ವಾತಂತ್ರ್ಯ ಪೂರ್ವದಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿದ್ದ ಬಡತನ, ಅನಕ್ಷರತೆ, ನಿರುದ್ಯೋಗ ಅವು ಸ್ವಾತಂತ್ರ್ಯ ನಂತರದಲ್ಲಿಯೂ ಹಾಗೆಯೇ ಮುಂದುವರೆದವು. ಇದಕ್ಕೆ ಹೈದರಾಬಾದ ಕರ್ನಾಟಕವೇನು ಹೊರತಾಗಿ ಇರಲಿಲ್ಲ. ಇದನ್ನು ಮನಗಂಡ ಕೇಂದ್ರ ಸರ್ಕಾರವು ಹೈದರಾಬಾದ ಪ್ರದೇಶದ ತೆಲಂಗಾಣ ಮತ್ತು ಮಹಾರಾಷ್ಟ್ರದ ವಿದರ್ಭ ಪ್ರದೇಶಗಳಿಗೆ ಸಂವಿಧಾನದ 371ನೇ ಕಲಂ ಜಾರಿಮಾಡಿ ವಿಶೇಷ ಸ್ಥಾನ-ಮಾನ ನೀಡಿತು. ಆದರೆ ಹೈದರಾಬಾದ್-ಕರ್ನಾಟಕಕ್ಕೆ ಮಾತ್ರ ಆ ಸ್ಥಾನಮಾನ ನೀಡದೇ ಈ ಭಾಗಕ್ಕೆ ಅನ್ಯಾಯ ಮಾಡಲಾಯಿತು.

ಹೈದ್ರಾಬಾದ್ ಕರ್ನಾಟಕಕ್ಕೆ 371ನೇ ಕಲಂ ಜಾರಿಗಾಗಿ ಕಳೆದ ಮೂರು ದಶಕಗಳಿಂದಲೂ ನಿರಂತರವಾಗಿ ಶಾಂತಿಯುತವಾಗಿ ಹೋರಾಟ ಮಾಡುತ್ತಾ ಬಂದಿದ್ದಾರೆ. ಸರ್ಕಾರದಿಂದ ನಿಯೋಜಿತವಾದ ನಂಜುಂಡಪ್ಪ ವರದಿಯು ಸಹ ಇಲ್ಲಿನ ಭಾಗ ಬಹಳ ಹಿಂದುಳಿದಿದೆ ಎನ್ನುವದನ್ನು ಅಂಕಿಸಂಖ್ಯೆಗಳ ಮೂಲಕ ಸರ್ಕಾರಕ್ಕೆ ವರದಿಯನ್ನು ನೀಡಿ ಹೆಚ್ಚಿನ ಅನುದಾನ ಬಿಡುಗಡೆಗಾಗಿ ಕೋರಿಕೆಗೆ ಸಲ್ಲಿಸಿದ್ದು ಇತಿಹಾಸ. ಇಲ್ಲಿಯವರೆಗೂ ಬೀದರ್, ಗುಲಬರ್ಗಾ, ರಾಯಚೂರು, ಕೊಪ್ಪಳ, ಇತ್ತೀಚೆಗೆ ಜಿಲ್ಲೆಯಾದ ಯಾದಗಿರಿ ಒಳಗೊಂಡಂತಹ ಅನೇಕ ಭಾಗಗಳಲ್ಲಿ ವಿಶೇಷ ಸ್ಥಾನಮಾನಕ್ಕಾಗಿ ನಡೆದ ಹೋರಾಟಗಳು ಸಾಮಾನ್ಯವೇನಲ್ಲ. ಈ ಹೋರಾಟಕ್ಕೆ ಬಳ್ಳಾರಿ ಕೈಜೋಡಿಸಿದ್ದು ಬಹಳ ವಿರಳ ಮತ್ತು ಅದು ಕೊನೆ ಕೊನೆಗೆ ಅಂದರೆ ತಪ್ಪಾಗಲಾರದು. ಈ ಹೈದರಾಬಾದ ಕರ್ನಾಟಕದ ಪ್ರದೇಶ ಒಟ್ಟು ಮೂರು ಸಂಗ್ರಾಮಗಳನ್ನು ಎದುರಿಸಿದೆ. ಮೊದಲನೆಯದಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಈ ಭಾಗ ಬಹಳ ಸಕ್ರೀಯವಾಗಿ ತೊಡಗಿತ್ತು. ನಂತರದಲ್ಲಿ ಹೈದರಾಬಾದ ನಿಜಾಮರ ವಿರುದ್ಧ ವಿಮೋಚನೆಗಾಗಿ ಹೋರಾಟ ಮಾಡಿದರೆ; ವಿಶೇಷ ಸ್ಥಾನಮಾನಕ್ಕಾಗಿ ಮತ್ತೊಂದು ಸಂಗ್ರಾಮವನ್ನೇ ಇಲ್ಲಿನ ಜನತೆ ಮಾಡಬೇಕಾಯಿತು. ಇತರೆ ಭಾಗದಲ್ಲಿ ನಡೆದಂತೆ ಕೊಪ್ಪಳದಲ್ಲಿಯೂ ಸಹ ನಿರಂತರವಾಗಿ ಧರಣಿ ಸತ್ಯಾಗ್ರಹಗಳು, ಬಂದ್, ಜಾಥಾ, ಉಪನ್ಯಾಸಗಳು, ಸಮ್ಮೇಳನಗಳಲ್ಲಿ ವಿಚಾರ-ಸಂಕಿರಣಗಳು, ಜಾಗೃತಿ ಕಾರ್ಯಕ್ರಮಗಳು ಇತ್ಯಾದಿ ನಾನಾ ರೀತಿಯ ಹೋರಾಟಗಳನ್ನು ಮಾಡಿ 371ನೇ ವಿಧಿ ಜಾರಿಗಾಗಿ ಈ ಭಾಗದ ಜನತೆ ಆಗ್ರಹಿಸಿದ್ದಾರೆ. ಈ ಹೋರಾಟಗಳಲ್ಲಿ ಮೊದಮೊದಲು ಹಿರಿಯರೇ ಹೆಚ್ಚು ಪಾಲ್ಗೊಳ್ಳುತ್ತಿದ್ದರು. ನಂತರದಲ್ಲಿ ಹೆಚ್ಚಿನ ಯುವಕರು ಭಾಗವಹಿಸುವಿಕೆಯಿಂದಾಗಿ ಅದರ ದಿಕ್ಕೇ ಬದಲಾಯಿತು. ನಮಗೆ ವಿಶೇಷ ಸ್ಥಾನಮಾನವಿಲ್ಲದೆ ಈ ಭಾಗಕ್ಕೆ ನ್ಯಾಯ ಸಿಗದು ಎಂದು ಈ ಹೋರಾಟವನ್ನು ಜನಾಂದೋಲನವಾಗಿ ಪರಿವರ್ತಿಸಿದರು. ಅದಕ್ಕೆ ಹಿರಿಯರು, ರಾಜಕಾರಣಿಗಳು, ವ್ಯಾಪಾರಸ್ಥರ, ಸಂಘ-ಸಂಸ್ಥೆಗಳ, ಜಾತಿ ಸಂಘಟನೆಗಳಿಂದ, ಮಹಿಳಾ ಸಂಘಟನೆಗಳಿಂದ

ಇನ್ನೂ ಅನೇಕ ಸಂಘಟನೆಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು, ಸರ್ಕಾರಗಳಿಗೆ ಬಿಸಿ ಮುಟ್ಟಿಸುವ ಕೆಲಸವನ್ನು ಈ ಭಾಗದ ಜನತೆ ಮಾಡಿದರು. ಶಾಲಾ–ಕಾಲೇಜುಗಳಿಗೆ ತೆರಳಿ ಯುವಕರಿಗೆ ಈ ವಿಶೇಷ ಸ್ಥಾನಮಾನದ ಬಗ್ಗೆ ಜಾಗೃತಿ ಮೂಡಿಸುವ ಕಾರ್ಯ ಮಾಡಿದ್ದಾರೆ. ಕೊನೆಗೆ ದೊಡ್ಡ ಹೋರಾಟವೆಂಬಂತೆ ದಿನಾಂಕ:9–8–2011 ರಂದು ದೆಹಲಿ ಚಲೋ ಕಾರ್ಯಕ್ರಮವನ್ನು ಹಿರಿಯ ಹೋರಾಟಗಾರರಾದ ವೈಜನಾಥ ಪಾಟೀಲ್, ಬಸವಂತರಾಯ ಕುರಿ, ರಜಾಕ್ ಉಸ್ತಾದ್, ಬಿ.ಆರ್.ಪಾಟೀಲ್, ಗುರುನಾಥ ಮತ್ತು ರಾಘವೇಂದ್ರ ಕುಷ್ಟಗಿ ಮುಂತಾದವರ ಹಿರಿಯರ ನೇತೃತ್ವದಲ್ಲಿ ಯುವ ಹೋರಾಟಗಾರರನ್ನು ಒಳಗೊಂಡ ಸುಮಾರು 700ಕ್ಕೂ ಅಧಿಕ ಜನರು ದೆಹಲಿಯ ಜಂತರ ಮಂತರನಲ್ಲಿ ಒಂದು ದಿನದ ಸತ್ಯಾಗ್ರಹ ಮಾಡಿದ್ದಾರೆ.

ಈ ಹೋರಾಟದಲ್ಲಿ ವಿಶೇಷವಾಗಿ ಕೊಪ್ಪಳದ ಯುವ ಪಡೆ ಭಾಗವಹಿಸಿತ್ತು. ಚಂದ್ರಶೇಖರ ಕವಲೂರು, ಜಗದೀಶಗೌಡ ತೆಗ್ಗಿನಮನಿ, ಪದ್ಮರಾಜಗೌಡ ಮಾದಿನೂರು, ಸಂತೋಷ ದೇಶಪಾಂಡೆ, ಡಾ.ಸಿದ್ಧಲಿಂಗಪ್ಪ ಕೊಟ್ನೆಕಲ್, ಶಿವಕುಮಾರ ಕುಕನೂರು ದ್ಯಾಮಣ್ಣ ಉಪ್ಪಾರ, ಹುಲುಗಪ್ಪ ಕಟ್ಟಿಮನಿ, ಹಬೀಬ್ ಬಿಸರಳ್ಳಿ, ಮಂಜುನಾಥ ಯಲಬುರ್ಗಿ ಮುಂತಾದವರು ಭಾಗವಹಿಸಿದ್ದರು.

ಈ ಯುವಪಡೆ ಶಾಲೆ–ಕಾಲೇಜುಗಳಿಗೆ ತೆರಳಿ ಜಾಗೃತಿ ಮೂಡಿಸಿದರು. ಅಲ್ಲದೇ ಗ್ರಾಮ–ಗ್ರಾಮಗಳಿಗೂ ತೆರಳಿ ಜಾಗೃತಿ ಮೂಡಿಸಲಾಯಿತು. ಬಹುಶ: ಇದು ಅತ್ಯಂತ ಪರಿಣಾಮ ಬೀರಿ, ಇದು ಮುಂದೆ ಸ್ಫೋಟಗೊಳ್ಳಲು ಕಾರಣವಾಯಿತು.

ದಿನಾಂಕ 24–01–2012ರಂದು ಕೊಪ್ಪಳ ಬಂದ್‌ಗೆ ಕರೆ ಕೊಡಲಾಗಿತ್ತು. ಇದೊಂದು ಬಹಳ ಪರಿಣಾಮಕಾರಿಯಾದ ಹೋರಾಟವಾಯಿತು ಎನ್ನಬಹುದು. ಇದರಲ್ಲಿ ಹಿರಿಯರಾದ ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್.ಪಾಟೀಲ್, ವಿಠ್ಠಪ್ಪ ಗೋರಂಟ್ಲಿ, ಬಿ.ಎಸ್.ಪಾಟೀಲ್, ವಿಜಯಕುಮಾರ ಕವಲೂರು, ಸೋಮರಡ್ಡಿ ಅಳವಂಡಿ, ಮಂಜುನಾಥ ಗೊಂಡಬಾಳ, ಡಾ. ಬಸವರಾಜ ಪೂಜಾರ, ಶರಣಬಸಪ್ಪ ಬಿಳಿಎಲೆ, ಆದೀಲ್ ಪಟೇಲ್, ಅಲಿಮುದ್ದೀನ್, ಗಿರಿಶ ಪಾನಘಂಟಿ, ಪ್ರಲ್ಹಾದ ಅಗಳಿ, ಡಾ. ಮಹಾಂತೇಶ ಮಲ್ಲನಗೌಡರ, ವೀರಣ್ಣ ಹಂಚಿನಾಳ, ಅಮ್ಜದ್ ಪಟೇಲ್, ಸಿರಾಜ್ ಬಿಸರಳ್ಳಿ, ಹೆಚ್.ವಿ. ರಾಜಾಭಕ್ಷಿ, ಶಂಕ್ರಯ್ಯ ಅಬ್ಬಿಗೇರಿಮಠ, ರಾಘವೇಂದ್ರ ಪಾನಘಂಟಿ, ಎಮ್.ಸಿ. ಸಜ್ಜನ, ಎ.ವಿ. ಕಣವಿ, ಹುಸೇನಪಾಷಾ, ಶ್ರೀಮತಿ ಸಾವಿತ್ರಿ ಮುಜುಂದಾರ, ಶ್ರೀಮತಿ ಶಾರದಾ, ಶ್ರೀಮತಿ ಸಂಧ್ಯಾ ಮಾದಿನೂರ, ವೀರೇಶ ಮಹಾಂತಯ್ಯನಮಠ, ಹನುಮಂತಪ್ಪ ಅಂಡಗಿ, ಬಸವರಾಜ ಶೀಲವಂತರ, ಮಹಾಂತೇಶ ಕೊತಬಾಳ, ರಾಜಶೇಖರ ಅಂಗಡಿ, ಜಿ.ಎಸ್. ಗೋನಾಳ, ಶರಣಪ್ಪ ಬಾಚಲಾಪೂರ, ಮಂಜುನಾಥ ಅಂಗಡಿ, ಶ್ರೀಮತಿ ಅನುಸೂಯಾ ವಾಲ್ಮೀಕಿ, ವಿ. ಎಂ. ಭೂಸನೂರಮಠ, ಸಿ. ಎಸ್.

ಕರಮುಡಿ, ಶ್ರೀನಿವಾಸ ಹ್ಯಾಟಿ, ಆಸೀಫ ಅಲಿ, ಅಂದಾನಪ್ಪ ಅಗಡಿ, ಅಮರೇಶ ಉಪಲಾಪುರ, ಬಾಷಾ ಹಿರೇಮನಿ ಇನ್ನೂ ಅನೇಕರು ಹಾಗೂ ದೆಹಲಿಗೆ ಹೋಗಿ ಹೋರಾಟ ಮಾಡಿ ಬಂದಿದ್ದ ಯುವಪಡೆ ವಿಶೇಷವಾಗಿ ಭಾಗವಹಿಸಿದ್ದರು. ಇದರಲ್ಲಿ ಶಾಲಾ-ಕಾಲೇಜುಗಳ ವಿದ್ಯಾರ್ಥಿಗಳು, ಸರಕಾರಿ ನೌಕರರ ಸಂಘಟನೆಗಳು, ಆಟೋ ಚಾಲಕರ ಮತ್ತು ಮಾಲಕರ ಸಂಘ, ಬಂಡಿ ಹಮಾಲರ ಸಂಘ, ಜಾತಿ-ವರ್ಗ ಸಂಘಟನೆಗಳು, ಎಲ್ಲಾ ವ್ಯಾಪಾರಸ್ಥರೂ, ಎಲ್ಲಾ ಸರಕಾರಿ ಮತ್ತು ಖಾಸಗಿ ಸಂಘ ಸಂಸ್ಥೆಗಳೂ ಭಾಗವಹಿಸಿ ಬೆಂಬಲ ಸೂಚಿಸಿರುವುದು ವಿಶೇಷ. ಎಲ್ಲಾ ಸಂಘಟನೆಗಳ ಹೋರಾಟದ ಫಲವಾಗಿ ಹಿಂದುಳಿದ ಈ ಭಾಗಕ್ಕೆ ಸಂವಿಧಾನದ 371 ಜೆ ಕಲಂ ಜಾರಿಯಾಯಿತು.

**ಆಕರ ಗ್ರಂಥಗಳು :-**


1) ಸಂ.ಡಿ.ಎಸ್. ಅಶ್ವಥ್ ಮತ್ತು ಇತರರು, ವಿಮೋಚನೆ, ಜಿಲ್ಲಾಡಳಿತ, ಕೊಪ್ಪಳ-1999
2) ಕನ್ನಡಕ್ಕೆ ಪ್ರಹ್ಲಾದ ವೆಂ. ಕುಳಗೇರಿ, ಹೈದರಾಬಾದ ವಿಮೋಚನೆಯ ವೀರಗಾಥೆ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು-2018
3) ರಾಮಣ್ಣ ಹವಳೆ, ಕೊಪ್ಪಳ ನಾಡಿನ ಸ್ವಾತಂತ್ರ್ಯ ಹೋರಾಟಗಾರರು, ಶ್ರೀ ಭೀಮಜ್ಜ ಮುರಡಿ ಪ್ರತಿಷ್ಠಾನ, ಕುಷ್ಟಗಿ-2021
4) ಬಾಲಚಂದ್ರ ಜಯಶೆಟ್ಟಿ, ಹೈದರಾಬಾದ ಕರ್ನಾಟಕದ ವಿಮೋಚನಾ ಚಳುವಳಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-2006
5) ಸಂ. ಡಾ. ಕೆ. ಶರಣಪ್ಪ ನಿಡಶೇಸಿ (ಶನಿ) ಸ್ವಾತಂತ್ರ್ಯಾಮೃತ, ರಾಘವಾರ್ಜುನ ಪ್ರಕಾಶನ, ಬಯ್ಯಾಪೂರ-ಕುಷ್ಟಗಿ-2022


* * * * *

## ಡಾ. ಸಿದ್ಧಲಿಂಗಪ್ಪ ಕೊಟ್ನೆಕಲ್‌ರವರ ಕೃತಿಗಳು

### ಸ್ವತಂತ್ರ ಕೃತಿಗಳು:–

1. **ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ**
(ಪಿಎಚ್.ಡಿ ಸಂಶೋಧನಾ ಮಹಾಪ್ರಬಂಧ)
ಪ್ರಥಮ ಮುದ್ರಣ – 2010
ಪರಿಷ್ಕೃತ ದ್ವಿತೀಯ ಮುದ್ರಣ– 2020
2. **ಸಂಸಾರ ಸಗ್ಗ**
(ನಮ್ಮ ಕುಟುಂಬದಲ್ಲಿ ನಡೆದ ಹಾಸ್ಯ ಪ್ರಸಂಗಗಳು)
ಪ್ರಥಮ ಮುದ್ರಣ – 2014
ಪರಿಷ್ಕೃತ ದ್ವಿತೀಯ ಮುದ್ರಣ – 2017
ಪರಿಷ್ಕೃತ ತೃತಿಯ ಮುದ್ರಣ – 2020
3. **ಮಾನವಿ ತಾಲೂಕಿನ ಇತಿಹಾಸ ಮತ್ತು ಸಂಸ್ಕೃತಿ**
(ಸಂಶೋಧನಾ ಕೃತಿ – 2017
ಡಾ. ಚನ್ನಬಸವಯ್ಯ ಹಿರೇಮಠರವರೊಂದಿಗೆ)
4. **ಕೊಪ್ಪಳದ ಕಿಷ್ಕಿಂದೆಯ ಅಂಜನಾದ್ರಿ ಪರ್ವತ ಪ್ರದೇಶವೇ ಹನುಮನ ಜನ್ಮಸ್ಥಳ;ಒಂದು ಸಮರ್ಥನೆ**
(ಕಿರುಹೊತ್ತಿಗೆ–2021)
5. **ಕೊಪ್ಪಳ ಸ್ಥಳನಾಮ: ಒಂದು ವಿಶ್ಲೇಷಣೆ** (2022)
6. **ಕೊಪ್ಪಳ ತಾಲ್ಲೂಕು ಗ್ಯಾಸೆಟಿಯರ್** (2022)
7. **ಕೊಪ್ಪಳ ಚರಿತ್ರೆ ಮತ್ತು ಸಂಸ್ಕೃತಿಯ ಹುಡುಕಾಟ** (2023)

### ಸಂಪಾದಿತ ಕೃತಿಗಳು:–

1. **ತುಂಗಾ ಲಹರಿ**
(ಮಾನವಿ ತಾಲೂಕ ಪ್ರಾತಿನಿಧಿಕ ಕವನ ಸಂಕಲನ,
ಪ್ರಧಾನ ಸಂಪಾದಕರು – ಶ್ರೀ ರಾಮಚಂದ್ರಪ್ಪ – 2008)
2 **ಮಾನ್ವಿಯ ಮಹನೀಯರು**
(ಮಾನ್ವಿ ತಾಲೂಕಿನ ಸಾಹಿತ್ಯ ಕ್ಷೇತ್ರದ ಮಹನೀಯರ
ಜೀವನ ಚರಿತ್ರೆಗಳ ಸಂಗ್ರಹ – 2014)
3 **ಸಮಕಾಲೀನ ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ**
(ಕನ್ನಡ, ಹಿಂದಿ ಹಾಗೂ ಇಂಗ್ಲೀಷ ಆಧುನಿಕ ಸಾಹಿತ್ಯದಲ್ಲಿ
ಸ್ತ್ರೀ ಸಂವೇದನೆ ಎಂಬ ವಿಷಯದ ಮೇಲೆ ನಡೆದ ವಿಚಾರ
ಸಂಕಿರಣದ ಪ್ರಬಂಧಗಳ ಸಂಗ್ರಹ,
ಪ್ರಧಾನ ಸಂಪಾದಕರು – ಡಾ. ದಯಾನಂದ ಸಾಳುಂಕೆ – 2017)

**ಸಹ ಸಂಪಾದಕರಾಗಿ:–**

1. **ಮನಸಿರಿ**

   (ಮಾನ್ವಿ ತಾಲೂಕ ನಾಲ್ಕು ಕನ್ನಡ ಸಾಹಿತ್ಯ ಸಮ್ಮೇಳನಗಳ
   ವಿಶೇಷ ಸ್ಮರಣ ಸಂಚಿಕೆ
   ಪ್ರಧಾನ ಸಂಪಾದಕರು– ಶ್ರೀ ರಾಮಚಂದ್ರಪ್ಪ –2004)

**ಸಂಪಾದಕ ಮಂಡಳಿ ಸದಸ್ಯರಾಗಿ :–**

1. **ಕೊಪಣಸಿರಿ (ಕೊಪ್ಪಳ ಜಿಲ್ಲಾ ಅಧ್ಯಯನ)**
   (ಅಖಿಲ ಭಾರತ 78ನೇ ಕನ್ನಡ ಸಾಹಿತ್ಯ ಸಮೇಳನ
   ಗಂಗಾವತಿ, ಜಿಲ್ಲೆ ಕೊಪ್ಪಳ ಸ್ಮರಣ ಸಂಚಿಕೆ
   ಸಂಪಾದಕರು – ಶ್ರೀ ಹೆಚ್. ಎಸ್. ಪಾಟೀಲ್ – 2013

2. **ಸ್ನೇಹ ಜೀವಿ**
   (ಬಿ.ಎಸ್.ಪಾಟೀಲರ ಅಭಿನಂದನಾ ಗ್ರಂಥ,
   ಪ್ರಧಾನ ಸಂಪಾದಕರು – ಶ್ರೀ ಜಿ.ಎಸ್.ಗೋನಾಳ–2013)

3. **ಮಾದಿನೂರು ಮಾಣಿಕ್ಯ**
   (ಜಿ. ಎಸ್. ಗೋನಾಳರ ಅಭಿನಂದನಾ ಗ್ರಂಥ,
   ಪ್ರಧಾನ ಸಂಪಾದಕರು – ಶ್ರೀ ಮಹೇಶಬಾಬು ಸುರ್ವೆ–2015)

4. **ಕೊಪಣಾದ್ರಿ**
   (ಕೊಪ್ಪಳ ಜಿಲ್ಲಾ ರಜತ ಮಹೋತ್ಸವ ಸ್ಮರಣ ಸಂಚಿಕೆ)
   ಪ್ರಕಟಣೆ : ಜಿಲ್ಲಾ ಆಡಳಿತ, ಕೊಪ್ಪಳ – 2023

**ಮುದ್ರಣದಲ್ಲಿರುವ ಕೃತಿಗಳು :**

1. **ಕೊಪ್ಪಳ ಜಿಲ್ಲೆಯ ಜೈನ ನೆಲೆಗಳು** (ಸಂಶೋಧನಾ ಕೃತಿ)
2. **ಕೊಪ್ಪಳ ಜಿಲ್ಲೆಯ ಸುಗಮ ಸಂಗೀತ ಪರಂಪರೆ**
3. **ನಮ್ಮವರು**
4. **ನಮ್ಮವರ ಕೃತಿಗಳು**

* * * * *